# ಸ್ತ್ರೀ ನೀತಿ ಕಥೆಗಳು

**
**

ಲೇಖಕರು : "ಸೀತಾಸುತ"



೧೯೫೪

ಜುಲೈ 1965

# ಭಟ್ಟಿ ವಿಕ್ರಮಾದಿತ್ಯನ ಕಥೆಗಳು

ಬೆಲೆ : ೩

ಭಟ್ಟಿ ವಿಕ್ರಮಾದಿತ್ಯನ ಕಥೆಗಳು ಭಾರತದ "ಅರೇಬಿಯನ ಎಂದು ಹೆಸರು ಗಳಿಸಿದೆ. ಇದರಲ್ಲಿ ಶೃಂಗಾರ, ವೀರ, ಕರುಣ ಇತ್ಯಾ ರಸಭರಿತ ಕಥೆಗಳು ಇವೆ. ರಾಕ್ಷಸರ, ಬೇತಾಳಗಳ, ರಾಣಿಯರ, [illegible] ತಂತ್ರ [illegible] ಗೊಂಡಿವೆ. ಇವು ಮನರಂ ಮಾತ್ರವಲ್ಲ, ಮನೋಜ್ಞವಾಗಿವೆ.



# ಬೀರಬಲ್ಲನ ಕಥೆಗಳು

ಬೆಲೆ : ೩

ಅಕ್ಬರ್ ಮಹಾರಾಜನು ವಿದ್ಯಾಪಕ್ಷಪಾತಿ. ತನ್ನ ಆಸ್ಥಾನದ ಒಂಬತ್ತು ವಿದ್ವಾಂಸರನ್ನು ನೇಮಿಸಿಕೊಂಡಿದ್ದನು. ಅವರಿಗೆ ಆಸ್ಥಾನ ರತ್ನ"ಗಳೆಂದೂ ಹೆಸರಿದೆ. ಅವರಲ್ಲಿ ಬೀರಬಲ್ಲನೊಬ್ಬನು. ವೈಯಕ್ತಿ ರಾಜನ ಆಗು ಹೋಗುಗಳಿಂದ ಅಕ್ಬರನಲ್ಲಿ ಸಂದೇಹ. ದುಃಖ ಧಾವತ ತಾಪಗಳುಉಂಟಾದಾಗ ಪ್ರಸಂಗಾವಧಾನಿಯಾದ ಬೀರಬಲ್ಲನು ವಿನೊ ಮಹಾರಾಜನನ್ನು ಸಂತೋಷ ಪಡಿಸುತಿದ್ದನು.

ಬೀರಬಲ್ಲನ ಮಾತುಕತೆಗಳು ನಗೆಬುಗ್ಗೆಗಳು. ಅವನ ಕಥೆಗ

# ಸ್ತ್ರೀ ನೀತಿ ಕಥೆಗಳು

**ಪು**ರಾತನ ಕಾಲದಲ್ಲಿ ಗೋಪಾಲಸೆಟ್ಟಿ ಎಂಬೊಬ್ಬ ವ್ಯಾಪಾರಿಯು ಕಾಶ್ಮೀರ ನಗರದಲ್ಲಿ ವಾಸಿಸುತ್ತಿದ್ದನು. ಶ್ರೀಮಂತನಾದ ಈ ವರ್ತಕನಿಗೆ ಮೋಹಿನಿಯೊಬ್ಬಳೇ ಮಗಳು. ರೂಪ ಸುಂದರಿಯಾದ ಈ ಮೋಹಿನಿಯು ಓದುಬರಹದಲ್ಲೂ ಅತಿ ನಿಪುಣಳು. ಅವಳು ವಯಸ್ಸಿಗೆ ಬಂದ ಕೂಡಲೇ ತಂದೆಯು ಮದುವೆ ಮಾಡಿಕೊಟ್ಟನು. ಮೋಹಿನಿಯ ಪತಿಯು ಅನುರೂಪ ನೇನೋ ನಿಜ. ಆದರೆ ವಿದ್ಯಾಬುದ್ಧಿಯುಳ್ಳವನಲ್ಲ. ಸ್ವಲ್ಪ ಮೂಢನೆಂದರೂ ಸರಿಯೇ. ಇದರಿಂದ ಅವಳಿಗೆ ಸುಖ ದೊರೆಯಲಿಲ್ಲ. ಅವಳು ಚಿಂತೆಯಿಂದ ಕೊರಗಲಾರಂಭಿಸಿದಳು. ದಿನದಿಂದ ದಿನಕ್ಕೆ ಕೃಷವಾಗುತ್ತ ಬಂದಳು. ಕೊನೆಗೆ ಅದೊಂದು ರೋಗವಾಗಿಯೇ ಪರಿಣಮಿಸಿತು. ಇದನ್ನು ಕಂಡ ಮೋಹಿನಿಯ ಗಂಡನು ಅನೇಕ ವೈದ್ಯರನ್ನು ಕರೆಸಿ ಔಷಧೋಪಚಾರ ನಡೆಸಿದನು. ಮಂತ್ರ, ತಂತ್ರಗಳನ್ನು ಮಾಡಿಸಿದನು. ಆದರೆ ಇವುಗಳಿಂದ ಅವಳ ರೋಗವು ಗುಣವಾಗಲಿಲ್ಲ. ಅವಳು ಮೊದಲಿನಂತೆಯೇ ಕೊರಗು ತಿದ್ದಳು. ಕೊನೆಗೆ ಅವಳ ತಂದೆಯಾದ ಗೋಪಾಲಸೆಟ್ಟಿಯು ರಾಜವೈದ್ಯನನ್ನು ಕಂಡು ತನ್ನ ಮಗಳನ್ನು ಹೇಗಾದರೂ ಮಾಡಿ ಬದುಕಿಸಬೇಕೆಂದು ಅರಿಕೆ ಮಾಡಿಕೊಂಡನು. ರಾಜವೈದ್ಯನು ಒಪ್ಪಿ ಮೋಹಿನಿಯನ್ನು ಪರೀಕ್ಷಿಸಿದನು. ಅತೃಪ್ತಕಾಮದಿಂದಲೇ ಅವಳು ಮನೋರೋಗಕ್ಕೆ ತುತ್ತಾಗಿರುವಳೆಂದು ಅವನಿಗೆ ತಿಳಿಯಿತು. ಅದನ್ನು ಪರಿಹರಿಸಲು ಅವನು ಅನೇಕ ದಿವ್ಯ ಔಷಧ ಗಳನ್ನು ಕೊಟ್ಟನು. ಕಾಲಕ್ರಮೇಣ ಮೋಹಿನಿಯ ಪರಿಸ್ಥಿತಿಯು ಸುಧಾರಿ ಸುತ್ತ ಬಂದಿತು. ಅವಳು ಸಂಪೂರ್ಣ ಗುಣ ಹೊಂದಿದ ಮೇಲೆ ಗೋಪಾಲ ಸೆಟ್ಟಿಯು ತನ್ನ ಮಗಳೊಂದಿಗೆ ಆ ರಾಜವೈದ್ಯನ ಮನೆಗೆ ತೆರಳಿದನು. ತನ್ನ ಮಗಳ ರೋಗ ನಿವಾರಣೆ ಮಾಡಿದುದಕ್ಕಾಗಿ ವರ್ತಕನು ಅಮಿತ ಉಡುಗೊರೆಗಳನ್ನು ಕೊಟ್ಟನು. ರಾಜವೈದ್ಯನು ಮೋಹಿನಿಯನ್ನು ಏಕಾಂತ ಸ್ಥಳಕ್ಕೆ ಕರೆದು, "ನಿನಗೆ ತಗುಲಿದ್ದ ರೋಗವೇನೆಂದು ನೀನು ಬಲ್ಲೆಯಾ?"

ಎಂದು ಕೇಳಿದನು. ಆಗ ಅವಳು ಮುಖ ತಗ್ಗಿಸಿ, "ಅದು ರಹಸ್ಯ ಸಂಗತಿ. ಈಗ ಹೇಳಲಾರೆ. ಸಂದರ್ಭ ದೊರಕಿದಾಗ ನಾನೇ ವಿವರಿಸುತ್ತೇನೆ" ಎಂದು ಹೇಳಿದಳು. ಆ ಮೇಲೆ ಕೆಲವು ದಿವಸಗಳು ಉರುಳಿದ ಬಳಿಕ ಮೋಹಿನಿಯು ಒಂದು ರಾತ್ರಿ ತನ್ನ ದಾಸಿಯನ್ನು ತನ್ನ ಮಂಚದ ಮೇಲೆ ಮಲಗಿಸಿದಳು. ತಾನು ಪುರುಷ ವೇಷ ಧರಿಸಿ ಯಾರಿಗೂ ತಿಳಿಯದಂತೆ ಮನೆಯಿಂದ ಹೊರ ಬಿದ್ದು ರಾಜವೈದ್ಯನ ಮನೆಗೆ ಪ್ರವೇಶಿಸಿದಳು. ಯಾರೋ ಸರದಾರನಿರ ಬೇಕೆಂದು ಭಾವಿಸಿ ಕಾವಲುಗಾರರೂ ಬಾಗಿಲು ತೆರೆದರು. ಮೋಹನದಾಸ ವೈದ್ಯನೂ ಅದೇ ಭಾವನೆಯಿಂದ ಸ್ವಾಗತಿಸಿ ಒಳಗೆ ಕರೆದುಕೊಂಡು ಹೋದನು. ಆದರೆ ಮೋಹಿನಿಯು ತನ್ನ ನಿಜ ಪರಿಚಯವನ್ನು ತಿಳಿಸಿ, "ವೈದ್ಯನೇ ಹಿಂದೆ ನಾನು ಬಂದಾಗ ನನ್ನನ್ನು ರೋಗದ ಕಾರಣವನ್ನು ಕೇಳಿದ್ದೆಯಲ್ಲ ! ಅದಕ್ಕೆ ಉತ್ತರ ಕೊಡಲು ಈಗ ಬಂದಿದ್ದೇನೆ." ಎಂದು ಹೇಳಿ ತನ್ನ ಮನೋಭಿಲಾಷೆಯನ್ನು ತಿಳಿಸಿದಳು. ದುಃಖನಿವಾರಿಸಿ ಸುಖ ಸಂತೋಷವನ್ನುಂಟುಮಾಡಬೇಕೆಂದೂ ಪ್ರಾರ್ಥಿಸಿದಳು.

ಮೋಹಿನಿಯ ಈ ಕಾಮೋನ್ಮಾದ ಹಾಗೂ ಕಾಮಚೇಷ್ಟೆ ಕಂಡು ಕೇಳಿದ ಮೋಹನದಾಸನು ಬೆಪ್ಪು ಬೆರಗಾಗಿ ಹೇಳಿದನು. "ಮೋಹಿನೀ ನೀನು ಸತ್ಕುಲದಲ್ಲಿ ಜನಿಸಿದವಳು. ವಿದ್ಯಾವಿನಯ ಸಂಪನ್ನಳು. ಮದುವೆ ಯಾದವಳು. ಹೀಗಿದ್ದು ಇಂತಹ ದುರ್ವಿಷಕ್ಕೆ ಒಳಗಾಗಿರುವುದು ಸರಿಯಲ್ಲ. ಈ ವಿಷಯಲಂಪಟತನದಿಂದ ಕ್ಷೇಮವಿಲ್ಲ. ಕಾಮಾಧೀನವಾದರೆ ಅನೇಕ ದುಃಖಗಳನ್ನು ಅನುಭವಿಸಬೇಕಾಗುತ್ತದೆ. ಈ ಪರಸ್ತ್ರೀ ಮೋಹದಿಂದ ಬಡವನು ಪ್ರಾಣವನ್ನೇ ಕಳೆದುಕೊಳ್ಳುತ್ತಾನೆ. ಶ್ರೀಮಂತರೂ ರಾಜರೂ ತಮ್ಮ ಸಂಪತ್ತನ್ನು ಕಳೆದುಕೊಳ್ಳುವರು. ಕೀರ್ತಿಯೂ ಅವರ ಕೈ ಬಿಡುತ್ತದೆ. ಕೆಲವರು ರೋಗದಿಂದ ಬಳಲಿ ತೊಳಲುವರು. ಖಡ್ಗದ ಗಾಯಕ್ಕಿಂತಲೂ ಈ ವಿಷಯ ಸುಖದ ಗಾಯ ಕೆಟ್ಟದು. ಏಕೆಂದರೆ ಖಡ್ಗದ ಗಾಯವು ಗುಣ ವಾಗುವುದುಂಟು. ವಿಷಯಸುಖದ ಆಶೆಯು ಮಾತ್ರ ಪ್ರಾಣವಿರುವವರೆಗೂ ಇದ್ದೇ ಇರುತ್ತದೆ. ಇಹಪರದಲ್ಲೂ ಇದರಿಂದ ಹಾನಿ ನಿಶ್ಚಯ. ಆದುದರಿಂದ ನೀನು ಈ ದುರ್ವ್ಯಸನವನ್ನು ಬಿಡು. ನಾನೂ ಹಿಂದೊಮ್ಮೆ ಇದೇ ರೀತಿ ಮೂರ್ಖರ ಪ್ರಸಂಗಕ್ಕೆ ಒಳಗಾಗಿದ್ದೆ" ಎಂದು ಹೇಳಿದನು.

ಆಗ ಮೋಹಿನಿಯು "ವೈದ್ಯಶ್ರೇಷ್ಠನೇ! ಆ ಪ್ರಸಂಗವೇನೆಂದು ನನಗೆ ತಿಳಿಸಿ ಉಪಕಾರ ಮಾಡಿರಿ" ಎಂದು ಕೇಳಿದಳು. ಮೋಹನದಾಸನು ಹುಷ್ಟಿ ಇಂತೆಂದನು. "ನಾನು ತರುಣನಿದ್ದಾಗ ಧರ್ಮಪುರವೆಂಬ ನಗರದಲ್ಲಿ ಸ್ವಲ್ಪ ಕಾಲದ ವರೆಗೆ ವಾಸಿಸುತಿದ್ದೆ. ಆಗ ಅಲ್ಲಿ ನೆರೆದ ಒಂದು ರಥೋತ್ಸವಕ್ಕೆ ನನ್ನ ಮಿತ್ರನೊಡನೆ ಹೋದೆ. ರಸ್ತೆಯ ಪಕ್ಕದಲ್ಲಿ ಕುಳಿತು ನಾನು ಉತ್ಸವ ವನ್ನು ನೋಡುತಿದ್ದೆ. ಆದರೆ, ಅಷ್ಟರಲ್ಲಿ ನನ್ನ ಇದಿರಿನ ಉಪ್ಪರಿಗೆಯ ಮೇಲೊಬ್ಬಳು ನನ್ನ ದೃಷ್ಟಿಗೆ ಬಿದ್ದಳು. ಅವಳು ಅತ್ಯಂತ ಲಾವಣ್ಯವತಿಯಿ ದ್ದಂತೆ ನನಗೆ ಕಾಣಿಸಿದಳು. ಸ್ವಲ್ಪ ಹೊತ್ತಿನ ಮೇಲೆ ಅವಳೂ ನನ್ನನ್ನು ನೋಡಿದಳು. ಇಬ್ಬರ ಪ್ರೇಮ ದೃಷ್ಟಿಯೂ ಕೂಡಿತು. ಆಗ ಅವಳು ನೇತ್ರ ಸಂಕೇತ ಮಾಡತೊಡಗಿದಳು. ನನ್ನ ಮಿತ್ರನು ಬಂದ ಮೇಲೆ ನಾನು ಆ ನಾರೀಮಣಿಯನ್ನೂ ಅವನಿಗೆ ತೋರಿಸಿ ಅವಳಲ್ಲಿ ಅನುರಕ್ತನಾಗಿರುವೆನೆಂದು ನುಡಿದೆನು. ಅವಳು ಸತ್ಕುಲ ಸಂಪನ್ನೆಯಾಗಿ ತೋರುತ್ತಿರುವುದರಿಂದ ಅಂತಹ ವಿಷಯದ ಕಡೆ ಮನಸ್ಸನ್ನು ಓಡಲು ಬಿಡಬಾರದೆಂದು ಅವನು ಹೇಳಿದರೂ ನನಗೆ ಸಮಾಧಾನವಾಗಲಿಲ್ಲ. ನಾವಿಬ್ಬರೂ ಆ ಕಟ್ಟಡದ ಕೆಳಗೆ ಹೋಗಿ ನಿಂತುಕೊಂಡೆವು. ಸ್ವಲ್ಪ ಸಮಯ ಕಳೆದ ಮೇಲೆ ಆ ಲಲನೆಯು ತನ್ನ ಗೆಳತಿಯರೊಂದಿಗೆ ಉಪ್ಪರಿಗೆಯಿಂದಿಳಿದು ರಸ್ತೆಗೆ ಬಂದಳು. ನನ್ನನ್ನು ಕಂಡು ನೇತ್ರ ಸಂಕೇತ ಮಾಡುತ್ತ ತನ್ನ ಹಿಂದೆ ಬರಬೇಕೆಂದು ಕೈಸನ್ನೆ ಮಾಡಿದಳು. ಆದರಂತೆ ನಾನು ನನ್ನ ಮಿತ್ರನೊಂದಿಗೆ ಅನುಸರಿಸಿದೆ. ಆದರೆ ಅನೇಕ ಕಟ್ಟಡಗಳು ಇದ್ದುದರಿಂದ ಅವರು ಎಲ್ಲಿ ನುಸುಳಿದರೆಂದು ನಮಗಿರ್ವ ರಿಗೂ ಗೊತ್ತಾಗಲಿಲ್ಲ. ನಾವು ಅತ್ತಿತ್ತ ಅಲೆದಾಡತೊಡಗಿದವು. ಕತ್ತಲೆಯೂ ಆಯಿತು. ಅಷ್ಟರಲ್ಲಿ ಅಲ್ಲೇ ಇದ್ದ ಗವಳಿಗರವಳು, "ನೀವು ಯಾರು? ನಿಮಗೆ ಯಾರು ಬೇಕು?" ಎಂದು ಪ್ರಶ್ನಿಸಿದಳು. ಆಗ ನಾನು ಇದ್ದ ಸಂಗತಿಯನ್ನು ಹೇಳಿ, "ಅಮ್ಮಾ, ಆ ಚಪಲಾಕ್ಷಿಯು ನನ್ನ ಮನಸ್ಸನ್ನು ಸಂಪೂರ್ಣ ಸೂರೆ ಗೊಂಡಿರುವಳು. ಆವಳನ್ನು ಕಾಣದೆ ಬದುಕಲಾರೆ. ನೀನು ಅವಳನ್ನು ಗೊತ್ತು ಹಚ್ಚಿಕೊಟ್ಟರೆ ನನ್ನ ಕೈಲಾದ ಉಡುಗೊರೆಯನ್ನು ಕೊಡುತ್ತೇನೆ" ಎಂದು ಹೇಳಿದೆ. ಆ ಗವಳಿಗರವಳ ಮನಸ್ಸು ಕರಗಿತು. "ನಾಳೆ ಮುಂಜಾನೆ ಬನ್ನಿ. ನನ್ನ ಕೈಲಾದ ಯತ್ನ ಮಾಡುತ್ತೇನೆ" ಎಂದವಳು ಹೇಳಿದಳು.

ಆದರಿಂದ ಸ್ವಲ್ಪ ಸಮಾಧಾನ ಪಟ್ಟು ಮರಳಿದೆ. ಆದರೆ ರಾತ್ರಿ ನಾಲಿಗೆಗೆ ಊಟವು ರುಚಿಸಲಿಲ್ಲ. ಕಣ್ಣಿಗೆ ನಿದ್ದೆ ಹತ್ತಲಿಲ್ಲ. ರಾತ್ರಿಯಿಡೀ ಆ ಕೋಮಲಾಂಗಿಯನ್ನೇ ಚಿಂತಿಸುತ್ತಿದ್ದೆ. ಬೆಳಗಾದ ಮೇಲೆ ನಿತ್ಯ ವಿಧಿಗಳನ್ನು ತೀರಿಸಿ ದಿವ್ಯಾಲಂಕೃತನಾಗಿ ಮತ್ತೆ ಆ ಗವಳಿಗರವಳ ಮನೆಯ ಕಡೆಗೆ ತೆರಳಿದೆ. ಅವಳು ನನ್ನನ್ನು ಕಂಡು "ಇನ್ನೂ ಪೂರ್ಣ ಬೆಳಗಾಗಿಲ್ಲ. ಹಾಸಿಗೆಯಿಂದ ಜನರು ಎದ್ದಿಲ್ಲ. ಹಾಗಿರುವಾಗ ನಿನ್ನ ಆ ಶೃಂಗಾರವತಿಯನ್ನು ಕಂಡು ಹುಡುಕುವ ಬಗೆ ಹೇಗೆ? ನೀನು ರಾತ್ರಿ ನಿದ್ದೆಯೇ ಮಾಡಿದಂತೆ ತೋರುವದಿಲ್ಲ" ಎಂದಳು. ಆಗ ನಾನು "ಅಮ್ಮಾ, ಆ ರಮಣಿಯು ನನ್ನನ್ನು ಗಾಯಗೊಳಿಸಿದ್ದಾಳೆ. ಅವಳೊಡನೆ ಸುಖ ಪಡೆಯದೇ ಇದ್ದರೆ ನಾನು ಬದುಕಲಾರೆ. ಆದುದರಿಂದ ನೀನು ಬೇಗನೇ ಭೆಟ್ಟಿ ಮಾಡಿಸು" ಎಂದು ಹೇಳಿದೆ. ಆಗ ಆ ಗವಳಿಗರವಳು "ಈ ನಗರದಲ್ಲಿ ಸುಂದರಿಯರಾದ ಅನೇಕ ವೇಶ್ಯಾ ಸ್ತ್ರೀಯರಿದ್ದಾರೆ. ಅವರನ್ನು ಕೂಡಿದರೆ ಒಳ್ಳೇದು. ಅದನ್ನು ಬಿಟ್ಟು ಕುಲೀನೆಯೋರ್ವಳ ಮೇಲೆ ಮೋಹಾಂಧನಾಗಿದ್ದೀಯಲ್ಲ! ಅವಳ ಆಶೆಯನ್ನು ಬಿಡು. ಅವಳು ಯಾರೆಂದೂ ಗೊತ್ತಿಲ್ಲ. ಅವಳನ್ನು ಹುಡುಕಲು ಸ್ವಲ್ಪ ಕಾಲ ಬೇಕು'' ಎಂದು ನುಡಿದಳು. ಅವಳ ಮಾತು ಕೇಳಿ ನನಗೆ ನಿರಾಶೆಯಾಯಿತು.

ಆದರೆ ಎಷ್ಟು ಪ್ರಯತ್ನಿಸಿದರೂ ಅವಳನ್ನು ಮರೆಯಲಾಗಲಿಲ್ಲ. ದಿನಂಪ್ರತಿ ಅವಳನ್ನೇ ಅರಸುತ್ತ ಆ ನಗರದ ರಸ್ತೆಗಳಲ್ಲಿ ಅಲೆದಾಡಿದೆನು. ಕಡೆಗೊಂದು ದಿನ ಬೇಸರದಿಂದ ದೇವಸ್ಥಾನಕ್ಕೆ ತೆರಳಿದೆ. ಆಗ ಆ ಮನೋಹರಿಯು ತನ್ನ ದಾಸಿಯೊಂದಿಗೆ ಕಣ್ಣಿಗೆ ಬಿದ್ದಳು. ನನ್ನ ಆನಂದಕ್ಕೆ ಪಾರವೇ ಇರಲಿಲ್ಲ. ಅವಳೂ ನನ್ನನ್ನು ಕಂಡು ನೇತ್ರಾನಂದ ಸೂಚಿಸಿದಳು. ದೇವತಾದರ್ಶನ ಮುಗಿದ ಮೇಲೆ ಅವಳು ಮನೆಗೆ ಮರಳಿದಾಗ ನಾನೂ ಅವಳ ಬೆನ್ನ ಹಿಂದೆಯೇ ತೆರಳಿದೆ. ಅವಳು ತನ್ನ ಮನೆ ಸೇರಿದ ಕೂಡಲೇ ಮೆಟ್ಟಲಲ್ಲಿ ನಿಂತು ಹೊರಳಿ, ಒಳಗೆ ಬರಕೂಡದೆಂದು ನೇತ್ರ ಸಂಕೇತದಿಂದ ಎಚ್ಚರಿಸಿದಳು. ನಾನು ದುಃಖದಿಂದ ಮರಳಿದೆ. ದೇವತಾ ದರ್ಶನಕ್ಕೆ ಅವಳು ಆಗಾಗ ಬಂದು ಹೋಗುತ್ತಿದ್ದಾಳೆಂದು ಊಹಿಸಿ ಅಲ್ಲೇ ಒಂದು ಮನೆಯನ್ನು ಬಾಡಿಗೆ ಹಿಡಿದೆ. ಆ ರಮಣಿಯೂ ದಿನಂಪ್ರತಿ ಎರಡು

ಸಲ ದೇವರ ದರ್ಶನಕ್ಕೆ ಬರತೊಡಗಿದಳು. ಆದರೆ ಅವಳೊಂದಿಗೆ ದಾಸಿಯು ಇರುತ್ತಿದ್ದುದರಿಂದ ಮಾತನಾಡಲು ನನಗೆ ಅವಕಾಶವೇ ಸಿಗಲಿಲ್ಲ. ಕೇವಲ ಅವಳ ದರ್ಶನಲಾಭ ಮಾತ್ರ ಲಭಿಸುತ್ತಿತ್ತು. ಹೀಗೆ ಅನೇಕ ದಿನಗಳು ಉರುಳಿದವು. ಇಬ್ಬರೂ ಕಾಮವಿಕಾರದಿಂದ ಬಳಲತೊಡಗಿದೆವು. ಅವಳೂ ದಿನದಿಂದ ದಿನಕ್ಕೆ ಕೃಶ ಶರೀರೆಯಾಗತೊಡಗಿದಳು.

ಇದನ್ನು ಕಂಡ ಅವಳ ದಾಸಿಯು "ಅಮ್ಮಾ! ನಿಮಗೆ ಸುಖ ಸಂಪತ್ತು ಯಾವುದರ ಕೊರತೆಯೂ ಇಲ್ಲ. ಹೀಗಿದ್ದರೂ ಇಷ್ಟು ಕೊರಗುತ್ತಿರುವದೇಕೆ?" ಎಂದು ಕೇಳಿದಳು. ದಾಸಿಯ ಮಾತುಗಳನ್ನು ಕೇಳಿದ ಸುಶೀಲೆಯು "ಪ್ರಿಯದಾಸಿಯೇ, ನನ್ನ ಹೃದಯದಲ್ಲಿ ಒಂದು ದುಃಖವು ಹುದುಗಿದೆ. ಅದನ್ನು ನಿನ್ನ ಮುಂದೆ ತೋಡಿಕೊಳ್ಳಲು ಇಷ್ಟ ಪಡುತ್ತೇನೆ. ನೀನು ಆ ದುಃಖ ನಿವಾರಣೆ ಮಾಡಲು ಯತ್ನ ಮಾಡುವೆನೆಂದೂ ಬಲ್ಲೆ. ಆದರೆ ಬೇರೆ ಯಾರೊಡನೆಯೂ ಇದನ್ನು ಹೇಳುವದಿಲ್ಲವೆಂದು ವಚನವನ್ನಿತ್ತಿರೆ ಮಾತ್ರ ತಿಳಿಸುತ್ತೇನೆ'' ಎಂದಳು. ದಾಸಿಯು ವಚನವನ್ನು ಕೊಟ್ಟಮೇಲೆ ಸುಶೀಲೆಯು "ಪ್ರಿಯದಾಸಿಯೇ, ಈ ಊರಿಗೆ ನನ್ನ ಬಾಲ್ಯಮಿತ್ರನೊಬ್ಬನು ಬಂದಿದ್ದಾನೆ. ಅವನನ್ನು ಕಂಡ ಕ್ಷಣದಿಂದ ಅವನ ಮೇಲೆ ನನ್ನ ಮನಸ್ಸಾಗಿದೆ. ಅವನೊಡನೆ ನಾನು ಸುಖಪಡುವಂತೆ ನೀನು ನೆರವಾಗು. ನಿನಗೆ ತುಂಬಾ ಉಡುಗೊರೆಗಳನ್ನು ಕೊಡುತ್ತೇನೆ'' ಎಂದು ಹೇಳಿದಳು. ಸುಶೀಲೆಯ ಈ ದುರಾಲೋಚನೆಯನ್ನು ಕೇಳಿ ದಾಸಿಯು "ಅಮ್ಮಾ, ಇದೆಂತಹ ಅವಿಚಾರದ ಮಾತು! ಸ್ವಪ್ನದಲ್ಲೂ ಇದಕ್ಕೆಳಸಬೇಡ. ಈ ವಿಷಯ ನಿನ್ನ ಪತಿಗೆ ತಿಳಿದರೆ ನಿನ್ನ ಪ್ರಾಣ ಹೋದಂತೆಯೇ ಸರಿ. ನಿನ್ನ ಅಕ್ಕ ಕೂಡಾ ಇಂತಹ ದುರ್ವ್ಯಾಪಾರಕ್ಕೆ ಮನಸೋತುದರಿಂದಲೇ ಪ್ರಾಣ ಕಳೆದುಕೊಂಡಳು. ನಿನ್ನ ಮನೆಗೆ ಬಂದು ಚಿನ್ನಾಭರಣ ಮಾಡುತ್ತಿದ್ದ ಅಕ್ಕಸಾಲಿಗನನ್ನು ಅವಳು ಮೋಹಿಸಿದಳು. ಕೊನೆಗೆ ತನ್ನ ಕೋಣೆಯ ಒಂದು ದೊಡ್ಡ ಪೆಟ್ಟಿಗೆಯಲ್ಲಿ ಅವನನ್ನು ಅಡಗಿಸಿಟ್ಟು ರಾತ್ರಿ ಅವನೊಡನೆ ಕ್ರೀಡಿಸುತ್ತಿದ್ದಳು. ಇದನ್ನು ನಿನ್ನ ಭಾವನಿಗೆ ಯಾರು ಹೇಳಿದರೋ ಏನೋ! ಅವನಿಗೆ ಅದರ ಸುಳುವು ಹೊಳವು ಗೊತ್ತಾದುದರಿಂದ ಮನೆಯನ್ನೆಲ್ಲ ಹುಡುಕಿಸಿದನು. ಅಕ್ಕಸಾಲಿಗನು ಪೆಟ್ಟಿಗೆಯಲ್ಲಿ ಅಡಗಿದ್ದನು. ಆ ಕೂಡಲೇ

ಅವನನ್ನೂ ನಿನ್ನ ಅಕ್ಕನನ್ನೂ ಕೊಂದು ಮನೆಯ ಹಿಂಬದಿ ಹುದುಗಿಸಿದನು. ತನ್ನ ಹೆಂಡತಿ ತವರು ಮನೆಗೆ ತೆರಳಿರುವಳೆಂದು ಸುದ್ದಿ ಬೀರಿದನು. ಸ್ವಲ್ಪ ದಿನಗಳಾದ ಮೇಲೆ, ತವರು ಮನೆಗೆ ತೆರಳಿದವಳು ಅಲ್ಲೇ ಮರಣ ಹೊಂದಿ ದಳೆಂದು ನುಡಿದನು. ಅದರಂತೆ ನಿನ್ನ ಗತಿಯೂ ಆದೀತು! ಇನ್ನುಮುಂದೆ ನನ್ನೊಡನೆ ಇಂತಹ ದುಷ್ಟ ವಿಷಯಗಳನ್ನು ಹೇಳಬೇಡ. ನಿನ್ನ ಗಂಡನಿಗೇ ತಿಳಿಸಿಬಿಟ್ಟೇನು" ಎಂದಳು.

ಆದರೆ ಅದರಿಂದ ಸುಶೀಲೆಯ ಮೇಲೆ ಯಾವ ಪರಿಣಾಮವೂ ಆಗ ಲಿಲ್ಲ. ದಿನಂಪ್ರತಿ ಅವಳು ದಾಸಿಯನ್ನು ಕಾಡಿಸಿ ಪೀಡಿಸತೊಡಗಿದಳು. "ನಾನು ಸಾವಿಗೆ ಹೆದರುವದಿಲ್ಲ. ಹೀಗೆಯೇ ಇದ್ದರೆ ನನಗೆ ಹುಚ್ಚು ಹಿಡಿ ಯುವದರಲ್ಲಿ ಯಾವ ಸಂದೇಹವೂ ಇಲ್ಲ. ಆ ಮೇಲೆ ಕೂಡಾ ಮರಣ ಬಾರದೇ ಇರಲಾರದು. ಆದುವರಿಂದ ಹೇಗಾದರೂ ಮಾಡಿ ಆ ತರುಣ ನೊಡನೆ ರತಿಸುಖವನ್ನು ಹೊಂದುವಂತೆ ಕರುಣಿಸು'' ಎಂದು ಬಿನ್ನವಿಸಿ ಕೊಂಡಳು. ಇದರಿಂದ ಆ ದಾಸಿಯ ಮನಸ್ಸು ಕರಗಿತು. ಅವಳು ಒಪ್ಪಿ ಕೊಂಡಳು. ಸುಶೀಲೆಯು ಆ ದಾಸಿಯೊಂದಿಗೆ ದೇವಸ್ಥಾನಕ್ಕೆ ಬಂದಾಗ ನಾನಿರುವ ಮನೆಯನ್ನೂ ನನ್ನನ್ನೂ ತೋರಿಸಿ ಹೋದಳು. ದಾಸಿಯು ನನ್ನ ಸಮೀಪ ಬಂದು "ನಿಮಗೆ ಗೋವಿನ ಹಾಲು ಬೇಕೆಂದು ಸೇಳಿದರು. ಹಾಗಿದ್ದರೆ ನಮ್ಮ ಮನೆಗೆ ಬನ್ನಿರಿ" ಎಂದು ನುಡಿದಳು. ಆಗ ನಾನು, "ಅಮ್ಮಾ, ನೀರು ಕೂಡಿಸದೇ ಇದ್ದ ಹಾಲೆಂದರೆ ನನಗೆ ಇಷ್ಟ'' ಎಂದು ಉತ್ತರ ಕೊಟ್ಟು, ಅವಳ ಹಿಂದೆಯೇ ಹೊರಟೆ.

ನಾವು ಹೋದಾಗ ಆ ದಾಸಿಯ ಮನೆಯಲ್ಲಿ ನೆರೆಹೊರೆಯ ಅನೇಕ ಮಂದಿ ಕುಳಿತಿದ್ದರು. ಆದುದರಿಂದ ದಾಸಿಯು ಎಲ್ಲರಿಗೂ ಕೇಳಿಸುವಂತೆ ಅಪರಿಚಿತನಂತೆಯೇ ನನ್ನನ್ನು ಮಾತನಾಡಿಸಿದಳು. "ನೀವು ಯಾರು? ಯಾವ ಊರಿನವರು? ಇಲ್ಲಿಗೆ ಯಾವಾಗ ಬಂದಿರಿ? ಎಷ್ಟು ದಿನ ಇರು ತ್ತೀರಿ?" ಎಂದು ಕೇಳಿದುದಕ್ಕೆ ನಾನು ಸಮರ್ಪಕ ಉತ್ತರ ಕೊಟ್ಟೆನು. ಆಗ ಅವಳು "ನೀವು ಈ ಊರಿಗೆ ಅಪರಿಚಿತರಿದ್ದೀರಿ. ಇಲ್ಲೇ ಊಟ ಮಾಡಿ ಹೋಗಿರಿ" ಎಂದು ಹೇಳಿದಳು. ಇದನ್ನು ಕೇಳಿದ ನೆರೆಹೊರೆಯವರೆಲ್ಲರೂ ಊಟದ ಕಾಲಕ್ಕೆ ತಾವು ಇರಬಾರದೆಂದು ಹೊರಟು ಹೋದರು. ನಾನು

ಆ ದಾಸಿಯೊಡನೆ "ಅಮ್ಮಾ, ನನಗೆ ಹಸಿವೆಯಾಗಿರುವುದೇನೋ ನಿಜ. ನನಗೆ ಇಷ್ಟವಿದ್ದ ಆಹಾರ ಕೊಟ್ಟರೆ ಮಾತ್ರ ಊಟ ಮಾಡುತ್ತೇನೆ. ಊಟವು ಸಿದ್ಧವಿದೆ ಎಂದೂ ನನಗೂ ಗೊತ್ತಿದೆ. ಆದರೆ ಅದಕ್ಕೆ ಅನುಕೂಲ ಸ್ಥಳ ಮಾತ್ರ ಇಲ್ಲವಲ್ಲ" ಎಂದು ಹೇಳಿದೆ. ನನ್ನ ಮಾತನ್ನು ಗ್ರಹಿಸಿದ ಆ ದಾಸಿಯು "ಸ್ವಾಮೀ, ನಿಮ್ಮಂತಹ ಸತ್ಪುರುಷರು ಇಂತಹ ವಿಷಯ ವಿಚಾರ ಗಳಿಗೊಳಗಾಗಬಹುದೇ? ಅವಳನ್ನು ಕಂಡ ಕೂಡಲೇ ನೀವು ಮನಸೋತು ಹೋದಿರಿ. ಹಾಗಿರುವಾಗ ಅವಳ ಸಂಗಸುಖ ದೊರಕಿದ ಅವಳ ಪತಿಯು ಎಷ್ಟು ಮೋಹಿತನಾಗಿರಲಿಕ್ಕಿಲ್ಲ! ಅವಳನ್ನು ರಕ್ಷಿಸಲೂ ಅವನು ಎಚ್ಚರ ವಹಿಸಿದ್ದಾನೆ. ಎಲ್ಲಾದರೂ ಅವನಿಗೆ ಗೊತ್ತಾದರೆ ನಿಮ್ಮ ಪ್ರಾಣಕ್ಕೆ ಖಂಡಿತವಾಗಿಯೂ ಅಪಾಯವಿದೆ. ಈ ದುರಾಶೆಯನ್ನು ಬಿಡಿರಿ" ಎಂದು ಹೇಳಿದಳು.

ದಾಸಿಯ ಈ ಉಪದೇಶವು ಕರ್ಣಕಠೋರವೆನಿಸಿತು ನನಗೆ. "ನೀನು ಮತ್ತೆ ಮತ್ತೆ ಇಂತಹ ಮಾತುಗಳನ್ನಾಡಬೇಡ. ನನ್ನ ಪ್ರಾಣವು ಈ ಕ್ಷಣ ಹೋದರೂ ಚಿಂತೆಯಿಲ್ಲ. ಅವಳಿಗಾಗಿ ಅದನ್ನು ತೊರೆಯಲೂ ಸಿದ್ಧನಿದ್ದೇನೆ. ಅವಳು ನೇತ್ರಕಟಾಕ್ಷದಿಂದ ನನ್ನೆದೆಯನ್ನು ಇರಿದಿರುವಳು. ಆ ಗಾಯವು ಇನ್ನೂ ಉರಿಯುತ್ತಿದೆ. ಅವಳೊಂದಿಗೆ ಸುಖವನ್ನು ಅನುಭವಿಸಿದರೆ ಮಾತ್ರ ಆ ಕಾಮಾಗ್ನಿಯು ನಂದೀತು. ನೀನು ಹೇಗಾದರೂ ಮಾಡಿ ನಮ್ಮ ಮಿಲನದ ವ್ಯವಸ್ಥೆ ಮಾಡಿ ನಮ್ಮನ್ನು ಸುಖಪಡಿಸು" ಎಂದು ಹೇಳಿದೆ. ಅದನ್ನು ಕೇಳಿ ದಾಸಿಯು "ಸ್ವಾಮೀ, ಜಗತ್ತಿನಲ್ಲಿ ಹೆಣ್ಣು, ಹೊನ್ನು, ಕಾವ್ಯ, ಚಿತ್ರ, ಸಂಗೀತಗಳಿಗೆ ಮನಸೋಲದವರು ಯಾರು? ಪುರುಷರು ಮಾತ್ರವಲ್ಲ ಸ್ತ್ರೀಯರೂ ಮರುಳಾಗುತ್ತಾರೆ. ಆದರೆ ಪರಪುರುಷನನ್ನು ಪ್ರೀತಿಸುವುದರಿಂದ ಅಪಾಯವಿದೆ. ಇಬ್ಬರೂ ನೀವು ಪರಸ್ಪರ ಆಸಕ್ತರಾಗಿದ್ದೀರಿ. ಇದರ ಪರಿಣಾಮವೇನಾದೀತೋ ಹೇಳಲಾರೆ. ನೀವಾದರೂ ಈ ದುರಾಶೆಯನ್ನು ತ್ಯಜಿಸಿದರೆ ಒಳ್ಳೇದು. ಇಲ್ಲವಾದರೆ ಅಮೀರಚಂದ ನೆಂಬ ವ್ಯಾಪಾರೀ ಪುತ್ರನಂತೆ ನೀವು ಕೊನೆಗೆ ಮರುಗಬಹುದು'' ಎಂದು ಹೇಳಿದಳು.

ಆಗ ನಾನು "ದಾಸಿಯೇ, ಆ ಅಮೀರಚಂದನ ವಿಚಾರವೇನು?

ಅವನು ಏನು ಮಾಡಿದ? ಪಶ್ಚಾತ್ತಾಪ ಪಡಲು ಕಾರಣವೇನು?'' ಎಂದು ಪ್ರಶ್ನಿಸಿದೆನು. “ಅದನ್ನು ಕೇಳಲು ಇಷ್ಟವಿದ್ದರೆ ಹೇಳುತ್ತೇನೆ'' ಎಂದು ದಾಸಿಯು ಅಮೀರಚಂದನ ಕಥೆಯನ್ನು ಹೇಳತೊಡಗಿದಳು.

## ೨. ಅಮೀರಚಂದನ ಕಥೆ

ಹಿಂದೆ ಗೋಪಾಲಪುರದಲ್ಲಿ ಒಬ್ಬ ವರ್ತಕನಿದ್ದನು. ಅವನ ಮುಪ್ಪಿನ ಕಾಲಕ್ಕೆ ಒಬ್ಬ ಮಗನು ಜನಿಸಿದನು. ಅವನಿಗೆ ಅಮೀರಚಂದನೆಂದು ನಾಮಕರಣ ಮಾಡಿದನು. ಯೋಗ್ಯ ವಯಸ್ಸಿನಲ್ಲಿ ವಿದ್ಯೆಯನ್ನೂ ಕೊಡಿಸಿದನು. ಚಂದನು ವಯಸ್ಸಿಗೆ ಬಂದಾಗ ತಂದೆಯು ಮರಣಹೊಂದಿದನು. ಚಂದನು ತಂದೆಯ ಉತ್ತರ ಕ್ರಿಯೆಗಳನ್ನೆಲ್ಲ. ಮಾಡಿದನು. ಆದರೆ ಆ ನಗರದಲ್ಲಿ ವಾಸಿಸಲು ಇಷ್ಟಪಡಲಿಲ್ಲ. ತಂದೆಯು ಕದಡಿಸಿಟ್ಟಿದ್ದ ಐದು ಲಕ್ಷ ರೂಪಾಯಿಗಳನ್ನು ಹಿಡಿದುಕೊಂಡು ಕಾಶೀ ಪಟ್ಟಣಕ್ಕೆ ಬಂದು ಅಲ್ಲೊಂದು ಅಂಗಡಿ ತೆರೆದನು. ವ್ಯಾಪಾರ ವ್ಯವಹಾರದಲ್ಲಿ ಅನುಭವ ಇಲ್ಲದೇ ಇದ್ದುದರಿಂದ ಅವನಿಗೆ ನಷ್ಟವೊದಗತೊಡಗಿತು. ಇದರಿಂದ ನೊಂದ ಚಂದನು ಒಂದು ದಿನ ಪುರದ ಹೆಸರಾದ ವ್ಯಾಪಾರಿಗಳನ್ನು ಕರೆದು ಸಭೆಗೂಡಿಸಿದನು. ವ್ಯಾಪಾರದಲ್ಲಿ ತನಗಾದ ಹಾನಿಯನ್ನು ವಿವರಿಸಿ, ತನ್ನ ತಂದೆಯ ಮಿತ್ರರಾದ ಅವರೆಲ್ಲರೂ ಅವನಿಗೆ ಅದರ ರಹಸ್ಯ ಹೇಳಿಕೊಡಬೇಕೆಂದೂ ಇಲ್ಲದಿದ್ದರೆ ಸ್ವಂತದ ಊರಿಗೆ ತೆರಳುವುದಾಗಿಯೂ ತನ್ನ ದುಃಖವನ್ನು ತೋಡಿಕೊಂಡನು.

ಆಗ ಆ ವ್ಯಾಪಾರಿಗಳೆಲ್ಲ ಚಂದನ ದುರವಸ್ಥೆಯನ್ನು ಕಂಡು ಅನ್ಯತಾಪಪಟ್ಟರು. “ನೀನು ಊರಿಗೆ ಮರುಳುವುದು ಬೇಡ. ವ್ಯಾಪಾರದಲ್ಲಿ ಒದಗಿದ ನಷ್ಟವನ್ನು ನಾವು ತುಂಬಿ ಕೊಡುತ್ತೇವೆ. ಈಗ ನಿನ್ನಲ್ಲಿದ್ದ ಸಾಮಾನುಗಳನ್ನು ನಮ್ಮ ಅಂಗಡಿಗಳಲ್ಲಿ ತಂದಿಡು. ಅವು ಮಾರಾಟವಾದಂತೆ ನಿನಗೆ ಹಣ ಕೊಡುತ್ತೇವೆ. ನೀನು ಲೆಕ್ಕಪತ್ರ ಇಟ್ಟುಕೋ. ಮತ್ತು ಮಾರಾಟವಾದಂತೆ ದಿನಂಪ್ರತಿ ಹಣತೆಗೆದುಕೊಂಡು ಹೋಗು” ಎಂದು ಹೇಳಿದರು. ಅದಕ್ಕೆ ಚಂದನು ಒಪ್ಪಿ ಅದರಂತೆ ಮಾಡಿದನು. ದಿನಂಪ್ರತಿ ಆ ವರ್ತಕರ ಅಂಗಡಿಗಳಿಗೆ ತೆರಳಿ ಮಾರಾಟವಾದ ತನ್ನ ವಸ್ತುಗಳ ಹಣವನ್ನು ತೆಗೆದು

ಕೊಂಡು ಬರುತಿದ್ದನು. ಒಂದು ದಿನ ಅವನೊಂದು ಅಂಗಡಿಯಲ್ಲಿ ಕುಳಿತಿದ್ದಾಗ ಅತ್ಯಂತ ಸುಂದರಿಯಾದ ತರುಣಿಯೊಬ್ಬಳು ಆ ಅಂಗಡಿಗೆ ಬಂದಳು. ಜರದ ಪೀತಾಂಬರ ಬೇಕೆಂದು ಹೇಳಿ ಅದನ್ನು ನೋಡತೊಡಗಿದಳು. ಆಗ ಚಂದನನ ದೃಷ್ಟಿ ಅವಳೆಡೆಗೆ ಹರಿಯಿತು. ಅಂತಹ ರೂಪರಾಶಿಯನ್ನು ಹಿಂದೆಂದೂ ಅವನು ನೋಡಿರಲಿಲ್ಲ. ರಮಣಿಯು ಆ ಪೀತಾಂಬರದ ಬೆಲೆಯನ್ನು ಕೇಳಿ ಅದು ಸಾವಿರ ರೂಪಾಯಿಗಳೆಂದು ತಿಳಿದ ಮೇಲೆ ಮಡಚಿ ತನ್ನ ದಾಸಿಯು ಕೈಗೆ ಕೊಟ್ಟು ತಾನು ಹೊರಟಳು.

ಆಗ ಆ ಅಂಗಡಿಯ ಮಾಲಕನು "ನೀವು ಕೊಂಡು ಕೊಂಡ ಸೀರೆಯು ನನ್ನದಲ್ಲ. ಅದರ ಯಜಮಾನನು ಅಲ್ಲಿ ಕುಳಿತಿದ್ದಾನೆ. ಆದುದರಿಂದ ಈಗಲೇ ಹಣಕೊಡಬೇಕು" ಎಂದು ಹೇಳಿದನು. ಅದನ್ನು ಕೇಳಿ ಆ ತರುಣಿಯು "ನಾನು ಅಷ್ಟು ಹಣವನ್ನು ತಂದಿಲ್ಲ. ಮನೆಗೆ ತೆರಳಿದ ಮೇಲೆ ಕಳಿಸುತ್ತೇನೆ" ಎಂದಳು. ಅದಕ್ಕೂ ಮಾಲಕನು ಒಪ್ಪಲಿಲ್ಲ. ಅದರಿಂದ ಅವಳು ರೇಗಿ ಆ ಸೀರೆಯನ್ನು ಎಸೆದು ಹೊರಟಳು. ಇದನ್ನು ನೋಡುತಿದ್ದ ಚಂದನು ಆ ವರ್ತಕನೊಡನೆ, "ಈ ನಾರೀಮಣಿಯು ದೊಡ್ಡ ಮನೆತನದವಳಂತೆ ಕಾಣುತಿದ್ದಾಳೆ. ಆ ಸೀರೆಯನ್ನು ಅವಳಿಗೆ ಕೊಟ್ಟುಬಿಡು. ಅವಳು ಹಣ ಕಳಿಸದೇ ಇರಲಿಕ್ಕಿಲ್ಲ. ಹಣ ಕಳಿಸದಿದ್ದರೂ ಚಿಂತಿಲ್ಲ" ಎಂದನು. ಅದರಂತೆ ಆ ವರ್ತಕನು ಮತ್ತೆ ಆ ಸ್ತ್ರೀಯನ್ನು ಕರೆಸಿ ಅವಳಿಗೆ ಆ ಪೀತಾಂಬರವನ್ನು ಕೊಟ್ಟನು. ಚಂದನು ಅವಳನ್ನು ನೋಡಿ, "ನೀವು ಹಣ ಕಳಿಸಿದರೂ ಸಂತೋಷ. ಕಳಿಸದಿದ್ದರೂ ದುಃಖವಿಲ್ಲ. ಇದು ನನ್ನ ಉಡುಗೊರೆಯೆಂದು ತಿಳಿಯಿರಿ" ಎಂದನು. ಅದನ್ನು ಕೇಳಿ ಅವಳು ರೇಗಿ "ಏನು ನಾನು ವೇಶ್ಯೆಯೆಂದು ತಿಳಿದೆಯಾ? ಇನ್ನು ಮುಂದೆ ಇಂತಹ ಮಾತನ್ನಾಡಬೇಡ!" ಎಂದು ಗದರಿಸಿದಳು. ಮತ್ತು ಮನೆಗೆ ತೆರಳಿದ ಮೇಲೆ ಆ ಸೀರೆಯ ಹಣವನ್ನು ಕಳಿಸಿಕೊಟ್ಟಳು. ಕೆಲವು ದಿವಸಗಳ ಮೇಲೆ ಅವಳು ಪುನಃ ಅದೇ ಅಂಗಡಿಗೆ ಬಂದು ಎರಡು ಪೀತಾಂಬರ ಸೀರೆಯನ್ನು ತೆಗೆದುಕೊಂಡಳು. ಹೋಗುವಾಗ ಚಂದನನ್ನು ನೋಡಿ ನೇತ್ರ ಸಂಕೇತ ಮಾಡಿ ಹೋದಳು.

ಅವಿಚಾರಚಂದನು ಕಾಮಾತುರನಾದನು. ಅವಳು ಯಾರೆಂದು ಅಂಗಡಿ ಮಾಲಕನೊಡನೆ ಕೇಳಿದನು. "ಅವಳು ಮಂತ್ರಿಸುತೆ. ಅದರೆ ತಂದೆ ತೀರಿ

ಕೊಂಡು ಅನೇಕ ವರುಷಗಳಾದವು. ಇವಳ ತಾಯಿಯೂ ಇಲ್ಲ. ತಂದೆಯ ಆಸ್ತಿಗೆಲ್ಲ ಇವಳೇ ಹಕ್ಕುದಾರಳು. ತುಂಬಾ ಧನಿಕಳು" ಎಂದು ಹೇಳಿದನು. ಆಮೀರಚಂದನು ಅವಳನ್ನೇ ಸ್ಮರಿಸುತ್ತ ರಸ್ತೆಯಲ್ಲಿ ತೆರಳುತ್ತಿದ್ದನು. ಅಷ್ಟರಲ್ಲಿ ಆ ಸುದತಿಯ ದಾಸಿಯು ಬಂದು "ಸ್ವಾಮಿ, ನನ್ನ ಒಡತಿಯು ದೇವರ ದರ್ಶನಕ್ಕೆ ದೇವಾಲಯಕ್ಕೆ ಬಂದಿದ್ದಾಳೆ. ನಿಮ್ಮನ್ನು ಕರೆದು ಕೊಂಡು ಬರಲು ಹೇಳಿರುವಳು" ಎಂದು ನುಡಿದಳು. ಚಂದನಿಗೆ ಸ್ವರ್ಗವು ಮೂರೇ ಗೇಣು ಇದ್ದಂತೆ ಕಂಡಿತು. ಅವನು ಸಂತೋಷದಿಂದ ಆ ದೇವ ಸ್ಥಾನದ ಕಡೆ ಹೊರಟನು. ಆ ನಾರೀಮಣಿಯು ಅವನನ್ನು ಆದರದಿಂದ ಕಂಡು "ಸ್ವಾಮಿ, ನಿನ್ನೆ ನಾನು ಆಡಿದ ಕಠೋರ ಮಾತುಗಳಿಗಾಗಿ ನನ್ನ ಮೇಲೆ ಸಿಟ್ಟಾಗಬಾರದು. ಇಂದು ಸಂಜೆ ನನ್ನ ಮನೆಗೆ ಬನ್ನಿರಿ. ನೀವು ಇಲ್ಲಿ ಮತ್ತೆ ಬಂದರೆ ನನ್ನ ದಾಸಿಯು ಕರೆದುಕೊಂಡು ಬರುವಳು'' ಎಂದು ಬಿನ್ನವಿಸಿದಳು. ಚಂದನು ಒಪ್ಪಿ ಸಂಜೆ ಮತ್ತೆ ಅದೇ ದೇವಾಲಯಕ್ಕೆ ತೆರಳಿದನು. ದಾಸಿಯು ಬಂದು ಅವನಿಗೆ ಸ್ತ್ರೀ ವೇಷ ಹಾಕಿ ತನ್ನ ಒಡತಿಯ ಮನೆಗೆ ಕರೆದುಕೊಂಡು ಹೋದಳು. ರಾತ್ರಿ ಚಂದನು ಆ ನಾರೀಮಣಿ ಯೊಡನೆ ನಾನಾ ರೀತಿಯ ಸುಖ ಸಂತೋಷದಿಂದ ಕಾಲಕಳೆದನು. ಬೆಳಗಾಗುವ ಮೊದಲೇ ನೂರು ವರಹಗಳ ಚೀಲವನ್ನು ಆ ನಾರೀಮಣಿಯ ಮಂಚದ ಕೆಳಗೆ ಇಟ್ಟುಬಂದನು.

ಹೀಗೆ ದಿನಂಪ್ರತಿ ಚಂದನು ಆ ನಾರಿಯ ಮೋಹಕ್ಕೆ ಒಳಗಾಗಿ ತನ್ನ ಧನವನ್ನೆಲ್ಲ ಕಳೆದುಕೊಂಡನು. ಕೊನೆಗೆ ಅವನ ಕೈಯಲ್ಲಿ ಕಾಸೂ ಉಳಿಯಲಿಲ್ಲ. ದುಡ್ಡಿಲ್ಲದೆ ಅವಳ ಮನೆಗೆ ತೆರಳಲು ಮನಸ್ಸಿಲ್ಲ. ಆದುದರಿಂದ ಕಳವು ಮಾಡಲಾರಂಭಿಸಿದನು. ಒಮ್ಮೆ ಸಿಕ್ಕಿ ಬಿದ್ದುದರಿಂದ ಆ ಊರಿನ ನ್ಯಾಯಾಧೀಶನ ಅಪ್ಪಣೆಯಂತೆ ಅವನ ಎಡಗೈಯನ್ನು ಕಡಿದರು. ಅಷ್ಟರಿಂದಲೂ ಅವನಿಗೆ ವಿವೇಕೋದಯವಾಗಲಿಲ್ಲ. ಅವಳ ಮೇಲಿನ ಮೋಹ ಹೋಗಲಿಲ್ಲ. ಎಡಗೈ ಇಲ್ಲದುದನ್ನು ಕಂಡು "ಏನಾಯಿತು?'' ಎಂದವಳು ಕೇಳಿದಳು. "ಮನೆಯ ಗೋಡೆಯು ಬಿದ್ದುದರಿಂದ ಕೈ ನುಜ್ಜುಗುಜ್ಜಾಯಿತು. ವೈದ್ಯರ ಸಲಹೆಯಂತೆ ಅದನ್ನು ಕಡಿಸಿದೆ'' ಎಂದು ಸುಳ್ಳು ಹೇಳಿ ಅವಳನ್ನು ಸಮಾಧಾನ ಪಡಿಸಿದನು. ಅವಳು ಅದನ್ನು ನಂಬಿ ಅವನನ್ನು

ಸಂತೈಸಿದಳು. ಆ ಮೇಲೊಂದು ದಿನ ಅವನು ಹಣದ ಚಿಂತೆಯಿಂದ ಆ ಊರಿನ ನದಿಯ ದಂಡೆಯ ಮೇಲೆ ಅಲೆದಾಡುತ್ತಿದ್ದನು. ಸೈನಿಕನೊಬ್ಬನು ಹಣದ ಚೀಲವನ್ನು ದಡದಲ್ಲಿಟ್ಟು ಸ್ನಾನ ಮಾಡುತ್ತಿದ್ದನು. ಚಂದನು ಆ ಗಂಟನ್ನು ಹಿಡಿದು ಓಡತೊಡಗಿದನು. ಆಗಲೂ ಅವನು ಸಿಕ್ಕಿಬಿದ್ದುದರಿಂದ ನ್ಯಾಯಸ್ಥಾನದಲ್ಲಿ ಬಲಗೈಯನ್ನು ಕಡಿಯಲು ತೀರ್ಮಾನಿಸಿದರು. ಚಂದನು ಬಲಗೈಯನ್ನೂ ಕಳೆದುಕೊಂಡನು. ಮತ್ತೊಂದು ದಿನ ಮಧ್ಯರಾತ್ರಿ ಅವನು ಆ ನಾರೀಮಣಿಯ ಮನೆಗೆ ಕಳ್ಳದಾರಿಯಿಂದ ನುಸುಳಲು ಯತ್ನಿಸುತ್ತಿದ್ದಾಗ ಕಾವಲುಗಾರರ ದೃಷ್ಟಿಗೆ ಬಿದ್ದನು. ಅವರು ಅವನನ್ನು ಹಿಡಿದು ಹೊಡೆದರು. ಮರುದಿನ ನ್ಯಾಯಸ್ಥಾನದಲ್ಲಿ ಅವನಿಗೆ ದೇಹಾಂತ ಶಿಕ್ಷೆ ವಿಧಿಸಲ್ಪಟ್ಟಿತು. ಆದರಂತೆ ನೀನೂ ಈ ಸುಶೀಲೆಯ ಮೇಲಿನ ಮೋಹವನ್ನು ಬಿಡು. ಇಲ್ಲದಿದ್ದರೆ ಚಂದನಂತೆ ಪ್ರಾಣಕ್ಕೆ ಎರವಾಗಬೇಕಾದೀತು'' ಎಂದು ಹೇಳಿದಳು. ಅದನ್ನು ಕೇಳಿ ನಾನು "ದಾಸಿಯೇ, ನೀನು ಹೇಳುವುದೇನೋ ನಿಜವೇ. ಆದರೆ, ಪ್ರಪಂಚದಲ್ಲಿ ಸ್ತ್ರೀಮೋಹವು ಯಾರನ್ನೂ ಬಿಟ್ಟಿಲ್ಲ. ನೂರಾರು ಸ್ತ್ರೀಯರೊಂದಿಗೆ ರತಿಸುಖವನ್ನು ಅನುಭವಿಸಿದ ಪುರುಷರೂ ಸುಂದರಿಯಾದ ನವಯುವತಿಯನ್ನು ಕಂಡಕೂಡಲೇ ಮತ್ತೆ ಕಾಮಾತುರರಾಗುತ್ತಾರೆ. ಹಾಗಿರುವಾಗ ನನ್ನಂತಹ ಬ್ರಹ್ಮಚಾರಿಯ ಪಾಡು ಪಟ್ಟೇನು? ನಿನ್ನ ಒಡತಿಯ ಮೇಲೆ ನನಗೆ ಬಹಳ ಪ್ರೇಮವಾಗಿದೆ. ನಿನ್ನ ಉಪದೇಶದಿಂದ ನನ್ನ ಮೇಲೆ ಏನೂ ಪರಿಣಾಮವಾಗಲಿಲ್ಲ. ನನ್ನ ಮೇಲೆ ಕರುಣೆದೋರು. ನೆರವಾಗು. ಈ ರೀತಿ ಪ್ರೇಮಪಾಶಕ್ಕೆ ಪಾತ್ರರಾದವರಿಗೆ ಸಹಾಯ ಮಾಡಿದವರ ಒಂದು ಉದಾಹರಣೆಯನ್ನು ಹೇಳುತ್ತೇನೆ. ಇಷ್ಟವಿದ್ದರೆ ಕೇಳು'' ಎಂದೆನು. ಆಗ ಆ ದಾಸಿಯು ಅದನ್ನು ಕೇಳಲು ಬಯಸಿದುದರಿಂದ ಆ ಕಥೆಯನ್ನು ಹೇಳತೊಡಗಿದೆ.

## ೩. ಪ್ರಭಾವತಿಯ ಕಥೆ

ಕಾಶೀ ನಗರದಲ್ಲಿ ಚಂದ್ರವರ್ಮನೆಂಬ ಒಬ್ಬ ರಾಜನಿದ್ದನು. ಪ್ರಭಾವತಿ ಅವನ ಮಗಳು. ಒಂದು ದಿನ ಅವಳು ತನ್ನ ಸಖಿಯರೊಂದಿಗೆ ಕೋಟೆಯ

ಹೊರಗೆ ಸಂಚರಿಸುತಿದ್ದಳು. ಆಗ ಒಂದು ಮರದ ಕೆಳಗೆ ಮಲಗಿದ್ದ ಸುಂದರ ನಾದ ಒಬ್ಬ ತರುಣನನ್ನು ಕಂಡು ಮೋಹಪರವಶಳಾಗಿ ಮೂರ್ಛೆಹೋದಳು. ದಾಸಿಯರು ಗಾಬರಿಯಿಂದ ಅವಳ ಸೇವೆ ಮಾಡತೊಡಗಿದರು. ಕೆಲವರು ಅರಮನೆಗೂ ಓಡಿದರು. ಆ ಗದ್ದಲದಿಂದ ಮಲಗಿದ್ದ ತರುಣನು ಎಚ್ಚತ್ತನು. ಪ್ರಭಾವತಿಯು ಅವನ ಕಣ್ಣಿಗೆ ಬಿದ್ದಳು. ಅವಳ ರೂಪಾತಿಶಯವನ್ನು ನೋಡಿ ಆ ತರುಣನೂ ಮೂರ್ಛೆ ಹೋದನು. ರಾಜಪುತ್ರಿಯನ್ನು ಅರಮನೆಗೆ ಕರೆದೊಯ್ದರು. ಆದರೆ ಆ ತರುಣನು ಮಾತ್ರ ಪ್ರಜ್ಞೆ ಇಲ್ಲದೆ ಅಲ್ಲೇ ಬಿದ್ದಿದ್ದನು.

ಅದೇ ಮಾರ್ಗವಾಗಿ ಕಾಮದೇವ ಮತ್ತು ರಾಮದೇವ ಎಂಬ ಇಬ್ಬರು ಬ್ರಾಹ್ಮಣರು ತೆರಳುತಿದ್ದರು. ಅವರು ಮೂರ್ಛೆಗತನಾಗಿ ಬಿದ್ದಿದ್ದ ತರುಣ ನನ್ನು ಕಂಡು ಅವನ ಬಳಿಬಂದರು. ಯಾವಳೋ ಒಬ್ಬ ನಾರೀಮಣಿಯು ಮದನ ಶರಕ್ಕೇ ಗುರಿಯಾಗಿ ಇವನು ಮೂರ್ಛೆ ಹೋಗಿರುವನೆಂದು ಕಾಮ ದೇವನು ಹೇಳಿದನು. ಇಬ್ಬರೂ ಉಪಚಾರ ಮಾಡಿದುದರಿಂದ ಆ ತರುಣನು ಚೇತರಿಸಿಕೊಂಡು ಕುಳಿತನು. ಆ ಮೇಲೆ ಸುತ್ತಲೂ ದೃಷ್ಟಿ ಬೀರಿ ನಿರಾಶೆ ಯಿಂದ ಮುಖವನ್ನು ತಗ್ಗಿಸಿದನು. ಆ ಬ್ರಾಹ್ಮಣರು ಅವನ ಯೋಗ ಕ್ಷೇಮ ವನ್ನು ವಿಚಾರಿಸಿದರು. ಆಗ ಆ ಯುವಕನು "ಸ್ವಾಮಿ, ನಾನೊಬ್ಬ ಬ್ರಾಹ್ಮಣನ ಮಗನು. ಒಂದು ಕಾರಣದಿಂದ ತುಂಬಾ ವ್ಯಥೆಯಾಗಿದೆ. ಆದರೆ ಅದನ್ನು ನಿಮ್ಮೊಡನೆ ಹೇಳಿ ಏನು ಫಲ ?'' ಎಂದನು. ಆಗ ರಾಮ ದೇವನು, "ಮಿತ್ರಾ, ದುಃಖವನ್ನು ಪರರ ಮುಂದೆ ತೋಡಿಕೊಳ್ಳುವುದರಿಂದ ಅದರ ಭಾರ ಕಡಿಮೆಯಾಗುತ್ತದಂತೆ. ನೀನು ಹೇಳಿದರೆ ನನ್ನ ಕೈಲಾದ ಮಟ್ಟಿಗೆ ನಾನು ನೆರವಾಗುತ್ತೇನೆ" ಎಂದನು. ಅದನ್ನು ಕೇಳಿ ಬ್ರಾಹ್ಮಣ ಸುತನು ರಾಜಪುತ್ರಿಯ ದರ್ಶನದ ಘಟನೆಯನ್ನು ಹೇಳಿ "ಅವಳಲ್ಲಿ ನಾನು ಅನುರಕ್ತನಾಗಿದ್ದೇನೆ. ಅವಳು ನನ್ನ ಹೃದಯದಲ್ಲೇ ದೊಡ್ಡ ಗಾಯ ಮಾಡಿ ದ್ದಾಳೆ. ಆ ಗಾಯವನ್ನು ಗುಣಪಡಿಸುವ ವೈದ್ಯನನ್ನು ತೋರಿಸುತ್ತೀರಾ ಅಂತಹ ಸ್ತ್ರೀ ರತ್ನವನ್ನು ಹೊಂದಿದರೆ ಜನ್ಮ ಸಾಫಲ್ಯ ಹೊಂದುವುದು. ಧರ್ಮ, ಅರ್ಥ, ಮತ್ತು ಕಾಮುಗಳಿಗೆ ಸ್ತ್ರೀಯೇ ಮೂಲ. ಸ್ತ್ರೀ ಇಲ್ಲದಿದ್ದರೆ ಈ ವಿಶ್ವವೂ ನಡೆಯಲಾರದು. ಆದುದರಿಂದ ಅವಳನ್ನು ಹೊಂದಲು ನನಗೆ ನೆರವಾಗಬೇಕು'' ಎಂದು ಬಿನ್ನವಿಸಿಕೊಂಡನು.

ಆ ಬ್ರಾಹ್ಮಣರು ಅದಕ್ಕೊಪ್ಪಿ ತಮ್ಮೊಂದಿಗೆ ಅವನನ್ನು ಕರೆದುಕೊಂಡು ಹೋದರು. ಕೆಲವು ದಿವಸಗಳಾದ ಮೇಲೆ ರಾಮದೇವನು ಒಂದು ಮಾತ್ರೆಯನ್ನು ಆ ವಿಪ್ರಸುತನಿಗೆ ಕೊಟ್ಟನು. ಅದನ್ನು ಬಾಯೊಳಗೆ ಹಾಕಿಕೊಂಡ ಕೂಡಲೇ ಅವನು ಶೋಡಶ ವರುಷದ ಸುಂದರ ನಾರೀಮಣಿಯಾದನು. ಕಾಮದೇವನು ಒಂದು ಮಾತ್ರೆಯ ಪ್ರಭಾವದಿಂದ ಮುದುಕನಂತೆ ಕಾಣಿಸಿದನು. ಮುಂದೆ ಅವರಿರ್ವರೂ ರಾಜಸ್ಥಾನಕ್ಕೆ ಹೊರಟರು. ರಾಜಸಭೆಗೆ ಬಂದ ಆ ವೃದ್ಧ ಬ್ರಾಹ್ಮಣನು ರಾಜನನ್ನು ಯಥೋಚಿತವಾಗಿ ಆಶೀರ್ವದಿಸಿ, "ರಾಜಾ, ಇವಳು ನನ್ನ ಸೊಸೆ. ಊರಿಗೆ ಕರೆದುಕೊಂಡು ಹೊರಟಿದ್ದೇನೆ. ಆದರೆ ನಮ್ಮ ಊರಲ್ಲಿ ದೇವಿಯು ಜನರನ್ನು ಸಂಹಾರ ಮಾಡಲು ತೊಡಗಿರುವಳೆಂದೂ ಜನರು ಊರು ತ್ಯಜಿಸಿ ಹೋಗುತ್ತಿರುವರೆಂದೂ ಕೇಳಿದೆ. ನನ್ನ ಮನೆಯವರೂ ಆ ಊರು ಬಿಟ್ಟಿರಬಹುದು. ಆದುದರಿಂದ ನನ್ನ ಸೊಸೆಗೆ ಸ್ವಲ್ಪ ಆಶ್ರಯ ನೀಡಬೇಕೆಂದು ಕೋರುತ್ತೇನೆ. ನಾನು ಊರಿಗೆ ತೆರಳಿ ಪರಿಸ್ಥಿತಿಯನ್ನು ನೋಡಿ ಬರುತ್ತೇನೆ. ಆ ಮೇಲೆ ನನ್ನ ಈ ಮುದ್ದು ಸೊಸೆಯನ್ನು ಕರೆದುಕೊಂಡು ಹೋಗುತ್ತೇನೆ'' ಎಂದನು. ರಾಜನು ಒಪ್ಪಿ ತನ್ನ ಪುತ್ರಿಯನ್ನು ಕರೆದು ಈ ಬ್ರಾಹ್ಮಣನ ಸೊಸೆಯನ್ನು ಅವಳ ವಶ ಕೊಟ್ಟನು. ಮತ್ತು ಅವಳನ್ನು ಅತ್ಯಾದರದಿಂದ ಕಾಪಾಡಬೇಕೆಂದು ಆಜ್ಞಾಪಿಸಿದನು.

ರಾಜಪುತ್ರಿಯು ಬ್ರಾಹ್ಮಣನ ಸೊಸೆಯೊಡನೆ ಸ್ನೇಹದಿಂದ ಇರತೊಡಗಿದಳು. ಇಬ್ಬರೂ ಅತ್ಯಂತ ಪ್ರೇಮದ ಗೆಳತಿಯರಾದರು. ರಾತ್ರಿ ಒಂದೇ ಮಂಚದ ಮೇಲೆ ಮಲಗಲಾರಂಭಿಸಿದರು. ಒಂದು ರಾತ್ರಿ ಇಬ್ಬರೂ ಒತ್ತೊತ್ತಿಗೆ ನಿದ್ರಾಸಕ್ತರಾಗಿದ್ದಾಗ ರಾಜಸುತೆಗೆ ಕಾಮಾತುರವಾಯಿತು. ಅವಳು ಹಾಸಿಗೆಯಿಂದ ಎದ್ದು ಕುಳಿತು ಚಿಂತಿಸತೊಡಗಿದಳು. ಬ್ರಾಹ್ಮಣ ಸೊಸೆಯೂ ಎದ್ದು ಅವಳ ಚಿಂತೆಯ ಕಾರಣವನ್ನು ಕೇಳಿದಳು. ಆಗ ರಾಜಪುತ್ರಿಯು "ಸಖೀ, ನಾನು ಒಮ್ಮೆ ಊರಿನ ಹೊರಗೆ ಹೋದಾಗ ಮರದ ಕೆಳಗೆ ಮಲಗಿದ್ದ ಒಬ್ಬ ತರುಣನನ್ನು ನೋಡಿದೆ. ಅವನ ಮೇಲೆ ನನ್ನ ಮನಸ್ಸು ನಟ್ಟಿ ಹೋಗಿದೆ. ಏನು ಮಾಡಲಿ?" ಎಂದು ಕೊರಗಿದಳು. ಆಗ ಆ ಬ್ರಾಹ್ಮಣ ಸೊಸೆಯು "ರಾಜಪುತ್ರಿ, ಅದಕ್ಕಾಗಿ ನೀನು ಚಿಂತಿಸಬೇಡ. ಆ ತರುಣನನ್ನು

ನೀನಿದ್ದಲ್ಲೇ ಈಗ ತೋರಿಸುತ್ತೇನೆ" ಎಂದನು. ಮತ್ತು ಕೂಡಲೇ ತನ್ನ ಬಾಯೊಳಗೆ ಇಟ್ಟುಕೊಂಡಿದ್ದ ಮಾತ್ರೆಯನ್ನು ತೆಗೆದನು. ಆಗ ಅವನಿಗೆ ವಿಪ್ರಸುತನ ರೂಪವೇ ಬಂದಿತು. ರಾಜಪುತ್ರಿಯು ಆನಂದಾತಿಶಯದಿಂದ ಅವನನ್ನು ಅಪ್ಪಿಕೊಂಡಳು. ಇಬ್ಬರೂ ಗಾಂಧರ್ವ ಪದ್ಧತಿಯಿಂದ ಮದುವೆಯಾಗಿ ಸುಖಸಂತೋಷಪಟ್ಟರು.

ಕೆಲವು ದಿವಸಗಳಾದ ಮೇಲೆ ಆ ರಾಜನ ಮಂತ್ರಿಯ ಮನೆಯಲ್ಲಿ ಒಂದು ಲಗ್ನ ಸಮಾರಂಭವಿದ್ದಿತು. ರಾಜಪುತ್ರಿಯು ಬ್ರಾಹ್ಮಣನ ಸೊಸೆಯೊಂದಿಗೆ ಅಲ್ಲಿಗೆ ತೆರಳಿದಳು. ಬ್ರಾಹ್ಮಣನ ಸೊಸೆಯ ರೂಪಲಾವಣ್ಯವನ್ನು ನೋಡಿ ಮಂತ್ರಿಸುತನಿಗೆ ಅವಳ ಮೇಲೆ ತುಂಬಾ ಅನುರಾಗವುಂಟಾಯಿತು. ಅವಳನ್ನು ಮದುವೆಯಾಗಬೇಕೆಂದು ಬಯಸಿದನು. ಅವನ ಈ ಹಂಬಲಿಕೆಯು ಮಂತ್ರಿಯ ಕಿವಿಗೂ ಮುಟ್ಟಿತು. ಅವನು ರಾಜನ ಮುಂದೆ ಅದರ ಪ್ರಸ್ತಾಪ ತೆಗೆದು "ಆ ಹುಡುಗಿಯನ್ನು ನನ್ನ ಮಗನಿಗೆ ಮದುವೆಮಾಡಿಸಿಕೊಟ್ಟು ಕರುಣಿಸಬೇಕು. ಇಲ್ಲದಿದ್ದರೆ ನನ್ನ ಮಗನ ಪ್ರಾಣ ಉಳಿಯುವುದಿಲ್ಲ'' ಎಂದನು. ಆಗ ಆ ರಾಜನು "ಅವಳು ಬ್ರಾಹ್ಮಣ ಸ್ತ್ರೀ. ಬ್ರಾಹ್ಮಣನ ಸೊಸೆ. ಅವನು ಇಲ್ಲಿ ಬಿಟ್ಟು ಹೋಗಿರುವನು. ಇನ್ನೊಂದು ದಿನ ಬಂದು ಕೇಳಿದರೆ ನಾನು ಏನು ಉತ್ತರ ಕೊಡಲಿ?''ಎಂದನು. ಮಂತ್ರಿ ನಿರುಪಾಯನಾದನು. ಆದರೆ ಅವನ ಮಗನು ಮಾತ್ರ ಆ ಹುಡುಗಿಯ ಚಿಂತೆಯಿಂದ ಕೊರಗಲಾರಂಭಿಸಿದನು. ಆಗ ಎಲ್ಲ ಮಂತ್ರಿಗಳೂ ರಾಜನಿದ್ದಲ್ಲಿ ಬಂದು "ರಾಜ, ಮಂತ್ರಿಸುತನು ಬದುಕುವ ಲಕ್ಷಣವಿಲ್ಲ. ಅವನಿಗೆ ಈ ಬ್ರಾಹ್ಮಣರ ಹುಡುಗಿಯನ್ನು ಮಾಡಿಕೊಟ್ಟರೆ ಮಾತ್ರ ಅವನ ಪ್ರಾಣವನ್ನು ರಕ್ಷಿಸಬಹುದು. ಬ್ರಾಹ್ಮಣನು ಅವಳನ್ನು ಬಿಟ್ಟು ಹೋಗಿ ಬಹಳ ಕಾಲವಾಯ್ತು. ಅವನ ಗತಿ ಏನಾಯಿತೋ ಏನೋ! ಒಂದು ವೇಳೆ ಅವನು ಬಂದು ಕೇಳಿದರೆ ಅಪಾರ ಹಣವನ್ನು ಕೊಟ್ಟು ಅವನ ಮಗನಿಗೆ ಇನ್ನೊಂದು ಮದುವೆ ಮಾಡಿದರಾಯಿತು." ಎಂದರು.

ಆ ಮೇಲೆ ರಾಜನು ಆ ಬ್ರಾಹ್ಮಣನ ಸೊಸೆಗೆ ನಡೆದ ವೃತ್ತಾಂತವನ್ನೆಲ್ಲ ಅರುಹಿದನು. ಅದನ್ನು ಕೇಳಿ ಅವಳು ಭಯ ಚಕಿತಳಾದವಳಂತೆ ನಟಿಸಿ, "ರಾಜನೇ, ನಿನ್ನ ಆಜ್ಞೆಯನ್ನು ಪಾಲಿಸದೆ ಅನಾಥೆಯಾದ ನನಗೆ ಬೇರೆ

ಉಪಾಯವಿಲ್ಲ. ಮದುವೆಗೆ ನಾನು ಸಮ್ಮತಿಸುತ್ತೇನೆ. ಆದರೆ, ಅದರ ಮೊದಲು ಮಂತ್ರಿಸುತನು ಒಂದು ವರುಷದ ವರೆಗೆ ತೀರ್ಥ ಯಾತ್ರೆ ಮಾಡಿ ಬರಬೇಕೆಂದು ಬಿನ್ನವಿಸುತ್ತೇನೆ'' ಎಂದಳು. ಅದರಂತೆ ಮಂತ್ರಿಸುತನು ಮದುವೆಯಾಗಿ ಬ್ರಾಹ್ಮಣನ ಸೊಸೆಯನ್ನು ತನ್ನ ಮೊದಲಿನ ಪತ್ನಿಯೊಂದಿಗೆ ಬಿಟ್ಟು ತಾನು ತೀರ್ಥಯಾತ್ರೆಗೆ ಹೊರಟನು. ಬ್ರಾಹ್ಮಣನ ಸೊಸೆಯು ಮಂತ್ರಿಸುತನ ಮೊದಲಿನ ಪತ್ನಿಯು ಸ್ನೇಹಗಳಿಸಿದಳು. ಇಬ್ಬರೂ ಒಂದೇ ಹಾಸಿಗೆಯಲ್ಲಿ ಮಲಗುತಿದ್ದರು. ಹೀಗಿರಲು ಒಂದು ದಿನ ರಾತ್ರಿ ಆ ಮಂತ್ರಿ ಸುತನ ಪ್ರಥಮ ಹೆಂಡತಿಗೆ ಕಾಮೇಚ್ಛೆಯಾಯಿತು. ಅದನ್ನು ಪರಿಹರಿಸಿಕೊಳ್ಳುವ ಉಪಾಯಗಾಣದೆ ಹಾಸಿಗೆಯ ಮೇಲೆ ಅಧೋಮುಖದಿಂದ ಕುಳಿತಳು. ಆಗ ಆ ಬ್ರಾಹ್ಮಣನ ಸೊಸೆಯೂ ಎದ್ದು ತನ್ನ ಗೆಳತಿಯ ದುಃಖವನ್ನು ಕೇಳಿ ತಿಳಿದುಕೊಂಡು ''ಗೆಳತೀ, ನಾನು ಕೆಲವು ಮಂತ್ರ ತಂತ್ರಗಳನ್ನೂ ಬಲ್ಲೆ. ಅದರ ಪ್ರಭಾವದಿಂದ ಪುರುಷನಾಗಬಲ್ಲೆ'' ಎಂದಳು. ಮಂತ್ರಿ ಸೊಸೆ ಅದನ್ನು ನಂಬಲಿಲ್ಲ. ಆದರೆ ಬ್ರಾಹ್ಮಣನ ಸೊಸೆಯು ತನ್ನ ಬಾಯಲ್ಲಿದ್ದ ಗುಳಿಗೆಯನ್ನು ತೆಗೆದ ಕೂಡಲೇ ಸ್ವತಃ ಪುರುಷ ಸ್ವರೂಪ ಧರಿಸಿದನು. ಇದನ್ನು ಕಂಡು ಮಂತ್ರಿಯ ಸೊಸೆಯು ಸಂತಸಪಟ್ಟು ಅವನೊಂದಿಗೆ ಕಾಮಸುಖವನ್ನು ಪಡೆದಳು. ಇದೇ ರೀತಿ ಕಾಲ ಕಳೆಯಿತು. ಒಂದು ವರುಷವಾದ ಮೇಲೆ ಮಂತ್ರಿಸುತನು ತೀರ್ಥ ಯಾತ್ರೆ ಮುಗಿಸಿಕೊಂಡು ಬಂದನು. ಅದನ್ನರಿತ ಕೂಡಲೇ ಬ್ರಾಹ್ಮಣನ ಸೊಸೆಯು ಒಂದು ರಾತ್ರಿ ತನ್ನ ಬಾಯೊಳಗಿದ್ದ ಮಾತ್ರೆಯನ್ನು ತೆಗೆದು, ಪುರುಷನಾಗಿ ಅಲ್ಲಿಂದ ಓಡಿ ಹೋದನು. ಮತ್ತು ರಾಮದೇವನನ್ನು ಕಂಡು ಎಲ್ಲ ವೃತ್ತಾಂತವನ್ನು ತಿಳಿಸಿದನು.

ರಾಮದೇವನು ಮತ್ತೆ ಆ ಬ್ರಾಹ್ಮಣ ಪುತ್ರನೊಂದಿಗೆ ಅದೇ ರಾಜನ ಸಭೆಗೆ ಬಂದು "ರಾಜನೇ, ನಾನು ಸ್ವಗ್ರಾಮಕ್ಕೆ ತೆರಳಿ ನನ್ನ ಪುತ್ರನನ್ನು ಕರೆದುಕೊಂಡು ಬಂದಿದ್ದೇನೆ. ನಿನ್ನಲ್ಲಿ ಬಿಟ್ಟು ಹೋದ ನನ್ನ ಸೊಸೆಯನ್ನು ಈಗ ಕಳಿಸಿಕೊಡು" ಎಂದು ಆ ವೃದ್ಧ ಬ್ರಾಹ್ಮಣನು ಕೇಳಿದನು. ಅದನ್ನು ಕೇಳಿ ರಾಜನು ದಿಗ್ಭ್ರಾಂತನಾದನು ಮತ್ತು ನಡೆದ ಸಂಗತಿಗಳನ್ನೆಲ್ಲ ಅರುಹಿ ತನ್ನ ಅಪರಾಧವನ್ನು ಕ್ಷಮಿಸಬೇಕೆಂದು ಪ್ರಾರ್ಥಿಸಿದನು. ಬ್ರಾಹ್ಮಣನು ಕೋಪೋದ್ರೇಕದಿಂದ, "ರಾಜಾ, ಮಗ ಮತ್ತು ಸೊಸೆಯರ ಸುಖಕ್ಕೆ ನೀನು

ಕಲ್ಲು ಹಾಕಿದೆ. ವೃದ್ಧಾಪ್ಯದಲ್ಲಿ ನನಗೆ ಈ ಚಿಂತೆಯನ್ನು ತಂದುಹಾಕಿದೆ. ನಿನಗೆ ನಾನು ಶಾಪ ಕೊಡುವದೇಸರಿ. ಆಮೇಲೆ ನಿನ್ನ ಈ ಸಭೆಯಲ್ಲೇ ತಲೆ ಒಡೆದುಕೊಂಡು ಪ್ರಾಣಿನೀಗುತ್ತೇನೆ. ಇದು ನಿನಗೆ ಇಷ್ಟವಿಲ್ಲದಿದ್ದರೆ ನಿನ್ನ ಮಗಳನ್ನು ನನ್ನ ಮಗನಿಗೆ ಮದುವೆ ಮಾಡಿಕೊಡು'' ಎಂದು ಹೇಳಿದನು. ರಾಜನು ಉಪಾಯವಿಲ್ಲದೆ ತನ್ನ ಮಗಳನ್ನು ಆ ವಿಪ್ರಸುತನಿಗೆ ಕೊಟ್ಟು ಮದುವೆ ಮಾಡಿದನು. ಇದರಿಂದ ಅವರಿರ್ವರ ಆಶೆಯೂ ಫಲಸಿತು. ತಾವು ದೇವನಂತೆ ನೀನಾದರೂ ನನಗೆ ನೆರವಾಗಿ ನಿನ್ನ ವಡತಿಯೊಡನೆ ಕೂಡುವಂತೆ ಅನುಗ್ರಹಿಸು"

ನನ್ನ ಈ ಮಾತುಗಳನ್ನು ಕೇಳಿ ದಾಸಿಯು ಪುನಃ ಸಿಟ್ಟಿಗೆದ್ದಳು. ತನ್ನ ವಡತಿಯ ಯಜಮಾನನಿಗೆ ಈ ಸಂಗತಿಯನ್ನು ತಿಳುಸುತ್ತೇನೆಂದು ಕೋಪಿಸಿದಳು. ಆದರೆ ನಾನು ದೈನ್ಯದಿಂದ ಬೇಡಿಕೊಂಡುದದರಿಂದ ಕೊನೆಗೆ ಅವಳ ಮನಸ್ಸು ಕರಗಿತು. ತನಗೆ ಕೊಡುತ್ತೇನೆಂದು ಉಡುಗೊರೆಯನ್ನು ಮೊದಲೇ ಕೊಟ್ಟರೆ ಯತ್ನಿಸುವದಾಗಿಯೂ ನುಡಿದಳು. ತನ್ನ ಒಡತಿಯನ್ನು ತನ್ನ ಮನೆಗೇ ಕರೆದುಕೊಂಡು ಬರುವುದಾಗಿ ಹೇಳಿದಳು ಮತ್ತು ತನ್ನ ಒಡತಿಯ ಮನೆಗೆ ತೆರಳಿ ಬರಲು ಒತ್ತಾಯ ಮಾಡಿದಳು. ಆದರೆ ನನ್ನ ಒಡತಿಯು "ಪ್ರಿಯ ದಾಸಿಯೇ, ನಾನು ಹೊಟ್ಟೆ ನೋವಿನಿಂದ ಬಳಲುತ್ತಿದ್ದೇನೆಂದು ನನ್ನ ಪತಿಗೆ ಹೇಳಿದ್ದೆ. ಆದುದರಿಂದ ನೀನು ನನ್ನ ಆ ಪ್ರಿಯತಮನಿಗೆ ಸ್ತ್ರೀ ವೇಷವನ್ನು ತೊಡಿಸಿ, ಔಷಧ ಕೊಡುವ ಸ್ತ್ರೀ ಎಂದು ಹೇಳಿ ಕರೆದು ಕೊಂಡು ಬಾ" ಎಂದಳು. ಆದರಂತೆ ದಾಸಿಯು ನನ್ನ ಬಳಿಗೆ ಬಂದು ನನಗೆ ಸ್ತ್ರೀ ವೇಷವನ್ನು ತೊಡಿಸಿದಳು. ಔಷಧ ಕೊಡುವ ಸ್ತ್ರೀ ಎಂದು ಹೇಳಿದುದರಿಂದ ಮನೆ ಕಾವಲುಗಾರನಿಗೂ ಸಂಶಯ ಉಂಟಾಗಲಿಲ್ಲ. ನಾನು ಒಳಗೆ ಹೋದ ಕೂಡಲೇ ದಾಸಿಯು ಹೊರಟು ಹೋದಳು. ಇಬ್ಬರೂ ಅತ್ಯಂತ ಕಾಮಾತುರರಿದ್ದುದರಿಂದ ದರ್ಶನಲಾಭವಾದೊಡನೆಯೇ ಆಲಿಂಗಿಸಿ ಮುದ್ದಾಡಿದೆವು. ರತಿಕ್ರೀಡಾಸಕ್ತರಾದೆವು. ಆದರೆ ಕೋಣೆಯ ಬಾಗಿಲನ್ನು ಹಾಕಲು ಮರೆತಿದ್ದೆವು. ಸ್ವಲ್ಪ ಹೊತ್ತಿನ ಮೇಲೆ ಆ ಸುಶೀಲೆಯ ಪತಿಯು ಬರುವ ಕಾಲಸಪ್ಪಳವು ಕೇಳಿಸಿತು. ಆ ಕೂಡಲೇ ನನ್ನ ಕೈಕಾಲುಗಳೆಲ್ಲ ತಣ್ಣಗಾದುವು. ನಾನು ಎದ್ದು ನನ್ನ ಸೀರೆ ಕುಬಸಗಳನ್ನೆಲ್ಲ ಸರಿ

ಮಾಡುತ್ತ ಮಂಚದ ಒಂದು ಬದಿಯಲ್ಲಿ ತಲೆ ತಗ್ಗಿಸುತ್ತ ಕುಳಿತೆ. ಅಷ್ಟರಲ್ಲಿ ಸುಶೀಲೆಯ ಪತಿಯು ಬಂದು ಬಾಗಿಲಿನ ಬಳಿ ನಿಂತು "ಈಗ ಹೊಟ್ಟೆನೋವು ಹೇಗಿದೆ?'' ಎಂದು ಕೇಳಿದನು. ಸುಶೀಲೆಯು "ಈಗ ಸ್ವಲ್ಪ ಕಡಿಮೆಯಾಗಿದೆ. ಈ ಸ್ತ್ರೀಯ ಔಷಧವು ಪರಿಣಾಮಕಾರಿಯಾಗಿದೆ. ಇವಳು ಬಹಳ ಪ್ರಸಿದ್ಧಳಾದ ವೈದ್ಯಳು'' ಎಂದಳು. ಅವಳ ಪತಿಯು ಈ ಮಾತುಗಳನ್ನು ನಂಬಿ "ನಿಮ್ಮ ಊರು ಯಾವುದು? ಹೆಸರೇನು?" ಎಂದು ಕೇಳಿದನು. ನನ್ನ ಎದೆ ತಲ್ಲಣಿಸಿತು. ಏಕೆಂದರೆ ನಾನು ಉತ್ತರ ಕೊಟ್ಟರೆ ದನಿಯ ಮೇಲಿನಿಂದ ಅವನಿಗೆ ಪುರುಷನ ಗುರುತು ಹತ್ತುತಿತ್ತು. ಆದುದರಿಂದ ಉತ್ತರ ಕೊಡದೆ ಪುನಃ ತಲೆ ತಗ್ಗಿಸಿ ಕುಳಿತೆ. ಆಗ ಸುಶೀಲೆಯಲ್ಲು ತನ್ನ ಪತಿಯನ್ನುದ್ದೇಶಿಸಿ "ಇವಳು ಪುರುಷರನ್ನು ನೋಡುವದಿಲ್ಲ. ಮಾತನಾಡುವದಿಲ್ಲ" ಎಂದಳು. ಅದನ್ನು ಕೇಳಿ ಅವಳ ಗಂಡನು ಅಲ್ಲಿಂದ ಹೊರಟು ಹೋದನು. ಸುಶೀಲೆಯ ಪ್ರಸಂಗಾವಧಾನದಿಂದ ನನ್ನ ಪ್ರಾಣ ಉಳಿಯಿತು. ಆ ರಾತ್ರಿ ರತಿವಿಲಾಸದಲ್ಲೇ ಕಾಲ ಕಳೆದೆವು. ಬೆಳಗಾದ ಮೇಲೆ ನಾನು ಹೊರಟು ಬಂದೆ. ಆ ಮೇಲೆ ದಿನಂಪ್ರತಿ ನಾವಿಬ್ಬರೂ ಸುರತ ಸುಖವನ್ನು ಅನುಭವಿಸುತ್ತ ಬಂದೆವು.

ಒಂದು ದಿನ ನಾನು ಸ್ತ್ರೀವೇಷ ಧರಿಸಿ ಮತ್ತೆ ಆ ದಾಸಿಯ ಮನೆಗೆ ತೆರಳಿದೆ. ಸ್ವಲ್ಪ ಹೊತ್ತಿನ ಮೇಲೆ ಸುಶೀಲೆಯು ತನ್ನ ದಾಸಿಯೊಂದಿಗೆ ಅಲ್ಲಿಗೆ ಬಂದಳು. ನನ್ನನ್ನು ಕಂಡ ಕೂಡಲೇ "ನನ್ನನ್ನು ನಿಮ್ಮೊಂದಿಗೆ ಕರೆದೊಯ್ಯಿರಿ. ಇಲ್ಲಿ ಇರಲು ನನಗೆ ಇಷ್ಟವಿಲ್ಲ" ಎಂದು ಅಂಗಲಾಚಿ ಬೇಡಿಕೊಂಡಳು. ಅವಳ ಈ ಮಾತನ್ನು ಕೇಳಿ ನಾನು ಭ್ರಾಂತನಾದೆ. ಏಕೆಂದರೆ ಅವಳು ಧನಿಕಳು. ನಾನು ಬಡವನು. ಅವಳಿಗೆ ಉಚಿತವಾದ ಅನ್ನ ವಸ್ತ್ರ ಆಭರಣಗಳನ್ನು ಕೊಡಲೂ ಸಮರ್ಥನಲ್ಲ. ಅಲ್ಲದೆ ಅವಳು ನನ್ನೊಂದಿಗೆ ಅನವರತವೂ ಉಳಿಯುವಳೆಂದು ನಂಬುವ ಬಗೆ ಹೇಗೆ? ಅವಳ ಗಂಡನು ಹುಡುಕಿಸಿ ನನ್ನನ್ನು ಕೊಲ್ಲಿಸುವುದೂ ನಿಶ್ಚಯ. ಆದುದರಿಂದ ನನ್ನ ಭಯವನ್ನು ಅವಳ ಮುಂದೆ ನಿವೇದಿಸಿ "ಬಡವನಾದ ನನ್ನೊಂದಿಗೆ ನೀವು ಬಂದರೆ, ಗೋಪಾಲದಾಸನ ಪತ್ನಿಯಂತೆ ಪಶ್ಚಾತ್ತಾಪ ಪಡಬೇಕಾದೀತು'' ಎಂದು ಹೇಳಿದೆ.

ಮೋಹಿನೀ, ಆಗ ಆ ಸುಶೀಲೆಯು ಗೋಪಾಲದಾಸನ ಪತ್ನಿಯ ಕಥೆಯನ್ನು ಕೇಳಲು ಆತುರಳಾದುದರಿಂದ ಅದನ್ನು ಹೇಳಲಾರಂಭಿಸಿದೆ.

## ೪. ಗೋಪಾಲದಾಸನ ಪತ್ನಿಯ ಕಥೆ

ಹೇಮಾವತಿ ಪಟ್ಟಣದಲ್ಲಿ ಗೋಪಾಲದಾಸನೆಂಬ ಒಬ್ಬ ಸಾವುಕಾರ ನಿದ್ದನು. ಅವನು ಮುದುಕ. ಆದರೆ ಅವನ ಹೆಂಡತಿ ತರುಣಿ. ಅಲ್ಲದೆ ಒಳ್ಳೇ ರೂಪವಂತಿಯಾಗಿದ್ದಳು. ವೃದ್ಧ ಪತಿಯಿಂದ ಸುಖ ಕಾಣದೆ ಅವಳು ದುರ್ಮಾರ್ಗ ಹಿಡಿದಿದ್ದಳು. ಸ್ವಲ್ಪ ಕಾಲ ಕಳೆದ ಬಳಿಕ ಅವನೊಡನೆ ಓಡಿ ಹೋಗಲು ನಿರ್ಧರಿಸಿ ಮನೆಯಲ್ಲಿದ್ದ ತನ್ನ ಚಿನ್ನಾಭರಣ ಹಾಗೂ ವಸ್ತ್ರ ಒಡವೆಗಳನ್ನು ಕಟ್ಟಿ ಹೊರಟಳು. ಇಬ್ಬರೂ ರಾತ್ರಿ ಆ ನಗರದಿಂದ ಪ್ರಯಾಣ ಬೆಳೆಸಿದರು. ಬೆಳಗಾಗಲು ಇನ್ನು ಸ್ವಲ್ಪ ಸಮಯವಿದ್ದಿತು. ಅಷ್ಟರಲ್ಲಿ ಮಾರ್ಗ ಮಧ್ಯೆ ಒಂದು ನದಿ ಬಂತು. ಆ ನದಿಯನ್ನು ಕಂಡು ಅವಳ ಉಪಪತಿಯು "ನದಿಯಲ್ಲಿ ನೀರು ಬಹಳವಿದೆ.ಈ ಸಾಮಾನುಗಳನ್ನೂ ನಿನ್ನನ್ನೂ ಒಮ್ಮೆಯೇ ಕರೆದುಕೊಂಡು ದಾಟಲಾರೆ. ಆದುದರಿಂದ ಮೊದಲು ನಿನ್ನ ಮೈಮೇಲಿದ್ದ ಚಿನ್ನಾಭರಣಗಳನ್ನೂ ಈ ಇನ್ನಿತರ ಸಾಮಾನುಗಳನ್ನೂ ನಿನ್ನ ಸೀರೆಯಲ್ಲಿ ಗಂಟು ಕಟ್ಟಿಕೊಡು. ಅದನ್ನು ಆಚೆ ದಂಡೆಯಲ್ಲಿಟ್ಟು ಮತ್ತೆ ಬಂದು ನಿನ್ನನ್ನು ಹೊಳೆದಾಟಿಸುತ್ತೇನೆ. ಇನ್ನೂ ಕತ್ತಲೆ ಇದೆ. ಆದುದರಿಂದ ನೀನು ಸೀರೆಯಿಲ್ಲದೆ ನಗ್ನಳಾಗಿದ್ದರೆ ತೊಂದರೆಯಿಲ್ಲ" ಎಂದು ಹೇಳಿದನು.

ಗೋಪಾಲದಾಸನ ಪತ್ನಿಯು ಅದರಂತೆ ತಾನು ಉಟ್ಟುಕೊಂಡಿದ್ದ ಸೀರೆಯನ್ನು ಬಿಚ್ಚಿ ಚಿನ್ನಾಭರಣಗಳನ್ನೆಲ್ಲ ಗಂಟು ಕಟ್ಟಿ ಅವನ ಕೈಗೆ ಕೊಟ್ಟಳು. ಅವನು ಅದನ್ನು ಹೊತ್ತುಕೊಂಡು ಹೊಳೆದಾಟಿದನು ಅವಳು ನಗ್ನಳಾಗಿ ಈಚೆ ದಂಡೆಯಲ್ಲೇ ನಿಂತಳು. ಎಷ್ಟು ಹೊತ್ತು ಕಳೆದರೂ ಅವಳ ಉಪಪತಿಯು ಬರಲಿಲ್ಲ. ಅವನು ಹೊಳೆ ದಾಟಿ ಈಚೆ ಬರಲೂ ಇಲ್ಲ. ಚಿನ್ನಾಭರಣಗಳ ಗಂಟು ದೊರೆತು ಅವನು ಆಚೆ ದಂಡೆ ಸೇರಿದ ಮೇಲೆ ಅವನ ಮನಸ್ಸು ಬದಲಾಯಿಸಿತು. ಇನ್ನು ಈ ಸ್ತ್ರೀಯನ್ನು ಕೊರಳಿಗೆ ಕಟ್ಟಿಕೊಂಡರೆ ನೆಟ್ಟಗಾಗಲಾರದು. ಏಕೆಂದರೆ ಇವಳು ದೊಡ್ಡ ಮನೆತನದವಳು.

ಅವಳನ್ನು ಸಾಕಿ ಸಲಹುವುದೂ ಕಠಿನ. ಅವಳು ಚಿನ್ನಾಭರಣಗಳನ್ನು ತಂದಿರುವುದರಿಂದ ಅವಳ ಗಂಡನು ಹುಡುಕಿಸದೇ ಇರಲಾರ. ನನ್ನ ಪತ್ತೆಯಾದರೆ ಮತ್ತೆ ನನ್ನನ್ನು ಕೊಲ್ಲದೇ ಬಿಡಲಿಕ್ಕಿಲ್ಲ. ಆದುದರಿಂದ ಅವಳ ಪಾಲಿಗೆ ಅವಳನ್ನು ಬಿಟ್ಟು ನಾನು ನನ್ನ ದಾರಿ ಹಿಡಿಯುವುದೇ ಲೇಸು" ಎಂದು ಯೋಚಿಸಿ ಹೊರಟು ಹೋದನು.

ಗೋಪಾಲದಾಸನ ಪತ್ನಿಯು ಆಶಾದೃಷ್ಟಿಯಿಂದಲೇ ನಿಂತುಕೊಂಡಿದ್ದಳು. ಬೆಳಕು ಹರಿಯಿತು. ಅಷ್ಟರಲ್ಲಿ ಮಾಂಸದ ತುಂಡೊಂದನ್ನು ಕಚ್ಚಿಕೊಂಡು ಒಂದು ನರಿಯು ಆ ದಾರಿಯಾಗಿ ಬಂದಿತು. ಹೊಳೆ ಬದಿಯಲ್ಲಿದ್ದ ಒಂದು ದೊಡ್ಡ ಮೀನನ್ನು ಕಂಡು ಅದನ್ನು ತಿನ್ನಬೇಕೆಂದು ಅದಕ್ಕೆ ಆಶೆಯಾಯಿತು. ಅದು ಬಾಯಿಯಲ್ಲಿದ್ದ ಮಾಂಸದ ತುಂಡನ್ನು ಸ್ವಲ್ಪ ದೂರದಲ್ಲಿಟ್ಟು ಆ ಮೀನನ್ನು ಹಿಡಿಯಲು ಬಾಯಿ ಹಾಕಿತು. ಆದರೆ ಆ ಮೀನು ಫಕ್ಕನೇ ನೀರಿನೊಳಗೆ ಮುಳುಗಿ ಪಾರಾಗಿ ಹೋಯಿತು. ಇತ್ತ ಹದ್ದು ಮಾಂಸದ ತುಂಡನ್ನು ಕಚ್ಚಿಕೊಂಡು ಹಾರಿಹೋಯ್ತು. ನರಿಯ ಈ ಅವಸ್ಥೆಯನ್ನು ಕಂಡ ಗೋಪಾಲದಾಸನ ಪತ್ನಿಯು "ಆಹಾ, ಅತಿಯಾಸೆ ಗತಿಗೆಡಿಸಿತು" ಎಂದು ನುಡಿದಳು. ಆಗ ಆ ನರಿಯು "ಹೌದು, ಮಾಂಸವನ್ನು ಕಳೆದುಕೊಂಡೆ ನಿಜ. ಇನ್ನೂ ಅದನ್ನು ದೊರಕಿಸಬಲ್ಲೆ. ಆದರೆ ನಿನ್ನ ಗತಿಯೇನಾಯಿತು ನೋಡು. ಕಾಮಾತುರಳಾಗಿ ಪತಿಯನ್ನು ತ್ಯಜಿಸಿ ಉಪಪತಿಯ ಹಿಂದೆ ಓಡಿ ಬಂದೆಯಲ್ಲ! ಈಗ ಅವನೂ ಓಡಿ ಹೋದನು. ನಿನ್ನ ಆಶೆಯೂ ಈಡೇರಲಿಲ್ಲ. ಹೀಗಿರುವಾಗ ನನಗೇ ಹೇಳುತಿದ್ದೀಯಲ್ಲ!" ಎಂದು ಅಣಕಿಸಿ ಹೋಯಿತು.

ನರಿಯ ಮಾತುಗಳನ್ನು ಕೇಳಿ ಅವಳು ದುಃಖಿತಳಾದಳು. ತಲೆಗೂದಲುಗಳನ್ನೆಲ್ಲ ಕೆದರಿಕೊಂಡು ನೋಡುವವರಿಗೆ ಹುಚ್ಚಿ ಎಂದು ಕಾಣುವಂತೆ ನಟಿಸಿಕೊಂಡು ಮತ್ತೆ ಓಡಿ ಬಂದಳು. ನಗ್ನಳಾಗಿದ್ದ ಅವಳ ಸ್ಥಿತಿಯನ್ನು ಕಂಡು ಯಾರೋ ಪುಣ್ಯಾತ್ಮರು ಒಂದು ಹರುಕು ಸೀರೆಯನ್ನು ಕೊಟ್ಟರು. ಅದನ್ನು ತೊಟ್ಟುಕೊಂಡು ಗುರುತು ಪರಿಚಯದವರ ಮನೆಗೆ ಹೋದಳು. ಅಲ್ಲಿ ನಡೆದ ಸಂಗತಿಯನ್ನೆಲ್ಲ ತಿಳಿಸಿದಳು. ಅವರು ಕರುಣೆದೋರಿ ಗೋಪಾಲದಾಸನನ್ನು ಕರೆಸಿ, ಮತ್ತೆ ಪತಿಪತ್ನಿಯರನ್ನು ಕೂಡಿಸಿದರು. ಆ ಗೋಪಾಲ

ದಾಸನ ಪತ್ನಿಯಂತೆ ನೀನೂ ನನ್ನ ಹಿಂದೆ ಓಡಿ ಬರಬೇಡ. ಆವಳ ಗತಿಯೇ ನಿನಗೂ ಒದಗೀತು."

ಸುಶೀಲೆಯು ನನ್ನ ಮಾತನ್ನು ಆಲಿಸಲಿಲ್ಲ. ದುಗುಡದಿಂದ ಅಲ್ಲಿಂದ ಎದ್ದು ಹೋದಳು. ಆ ದಿನ ಮತ್ತೆ ನಾನು ರಾತ್ರಿ ಸ್ತ್ರೀ ವೇಷ ಧರಿಸಿ ಅವಳ ಮನೆಗೆ ತೆರಳಿದೆ. ಅಂದು ಅವಳು ವಿಶೇಷ ಕಾಮಾತುರಳಾಗಿದ್ದಳೋ ಏನೋ! ನನ್ನನ್ನು ಅತ್ಯಾದರದಿಂದ ಸ್ವಾಗತಿಸಿ ಉಪಚರಿಸಿದಳು. ಅಕ್ಕಿ, ತುಳಸಿ ಮತ್ತು ಗಂಗೋದಕಗಳನ್ನು ನನ್ನ ಮುಂದೆ ಇಟ್ಟು, "ನನ್ನನ್ನು ನೀವು ಸ್ವೀಕರಿಸಿ ಕರೆದುಕೊಂಡು ಹೋಗುತ್ತೀರೋ ಇಲ್ಲವೋ? ಇವುಗಳನ್ನು ಮುಟ್ಟಿ ನುಡಿಯಿರಿ'' ಎಂದು ಕೇಳಿದಳು. ಆಗ ನಾನು ತುಂಬಾ ವ್ಯಾಕುಲನಾದರೂ ಮನಸ್ಸನ್ನು ಬಿಗಿ ಹಿಡಿದು "ಈ ಕೆಲಸವನ್ನು ನಾನು ಮಾಡಲಾರೆ" ಎಂದು ಹೇಳಿದೆನು. ಆಗ ಅವಳು ಅದರಿಂದಲೂ ವಿಹ್ವಲಳಾಗದೆ ಒಂದು ಖಡ್ಗವನ್ನು ತೆಗೆದು ತನ್ನ ಆತ್ಮಹತ್ಯೆ ಮಾಡಿಕೊಳ್ಳಲೆತ್ನಿಸಿದಳು. ಆದರೆ ಅವಳು ಖಡ್ಗವನ್ನು ಒರೆಯಿಂದ ಹಿಡಿದ ಕೂಡಲೇ ನಾನು ಫಕ್ಕನೇ ಅವಳ ಕೈಯನ್ನು ಗಟ್ಟಿಯಾಗಿ ಹಿಡಿದುಕೊಂಡೆನು. ಆಗ ಅವಳು ಅಳತೊಡಗಿದಳು. ಅವಳ ರೋದನ ಕೇಳಿ ಯಾರಾದರೂ ನೆರೆಹೊರೆಯವರು ಬಂದರೇನು ಗತಿ ಎಂದು ಮತಿಗಾಣದೆ ನಾನು ಕಂಗಾಲಾದೆ. ಏನು ಮಾಡಲೂ ತೋಚದೆ ಅವಳ ಇದಿರೇ ಪ್ರಾಣತೆಗೆದುಕೊಳ್ಳಲು ನಿಶ್ಚಯಿಸಿ ಅದೇ ಖಡ್ಗವನ್ನು ತೆಗೆದುಕೊಂಡೆ.

ಆಗ ಆ ಸುಶೀಲೆಯು ನನ್ನ ಕೈಯನ್ನು ಬಿಗಿಯಾಗಿ ಹಿಡಿದು, "ನೀವು ಪ್ರಾಣವನ್ನೇಕೆ ತೆಗೆದುಕೊಳ್ಳುತ್ತೀರಿ?'' ಎಂದು ಕೇಳಿದಳು. "ಇಲ್ಲಿದ್ದರೆ ನನ್ನ ಮಾನಹಾನಿ ಆಗುತ್ತದೆ. ಮಾನ ಕಳೆದುಕೊಳ್ಳುವುದಕ್ಕಿಂತ ಪ್ರಾಣ ಕಳೆದುಕೊಳ್ಳುವುದೂ ಲೇಸು" ಎಂದೆನು. ಆಗ ಆ ಶೃಂಗಾರವತಿಯು "ಸುಖ ಲಭಿಸಿದರೂ ಆದರ ಸದುಪಯೋಗ ಮಾಡಿಕೊಳ್ಳುವ ಭಾಗ್ಯ ನಿಮಗಿಲ್ಲ. ನಾನೇನು ಮಾಡಲಿ? ಇಂದು ರಾತ್ರಿ ಇಲ್ಲೇ ಇರಿ. ಮುಂದೆ ನೋಡೋಣ. ಈ ಮದನ ಬಾಧೆಗೆ ಗುರಿಯಾಗಿ ಪತಿಪುತ್ರದಾಸಿ ಹಾಗೂ ಉಪಪತಿಯೊಂದಿಗೆ ತಾನೂ ಪ್ರಾಣನೀಗಿದ ಸರದಾರರ ಪತ್ನಿಯ ಗತಿಯೇ ನನಗೂ ಒದಗುವುದರಲ್ಲಿ ಯಾವ ಸಂದೇಹವೂ ಇಲ್ಲ" ಎಂದು ನುಡಿದಳು. "ಆವಳ ಕಥೆಯೇನು?

ಹೇಳು'' ಎಂದು ನಾನು ಕೇಳಿದೆ. "ಆಗಲಿ'' ಎಂದವಳು ಉತ್ತರವಿತ್ತಳು. ಮೋಹಿನೀ ಅವಳು ರಾತ್ರಿ ತನಗೆ ತೃಪ್ತಿಯಾಗುವ ವರೆಗೆ ಕಾಮಕ್ರೀಡೆಗಳಲ್ಲಿ ಆಸಕ್ತಳಾದಳು. ಮತ್ತು ಆ ಮೇಲೆ ಆ ತರುಣಿಯ ಕಥೆಯನ್ನು ಹೀಗೆ ಹೇಳಿದಳು.

## ೫. ಸರದಾರನ ಹೆಂಡತಿಯ ಕಥೆ

ಪೈಠಣವೆಂಬ ನಗರದಲ್ಲಿ ಒಬ್ಬ ಸರದಾರನು ವಾಸವಾಗಿದ್ದನು. ಅವನು ತಾರುಣ್ಯಕ್ಕೆ ಕಾಲಿಟ್ಟಾಗ ಅವನ ತಂದೆ ತಾಯಿ ದೈವಾಧೀನರಾದರು. ಅವರು ಗಳಿಸಿದ ಆಸ್ತಿ ಪಾಸ್ತಿಗಳನ್ನೆಲ್ಲ ಅವನು ಹಾಳು ಮಾಡಿದನು. ಕೊನೆಕೊನೆಗೆ ಅವನಿಗೆ ತಾನು ಮಾಡಿದ ದುಷ್ಕೃತ್ಯಗಳು ಮನಸ್ಸನ್ನು ಚುಚ್ಚಿದವು ಮತ್ತು ಇನ್ನು ಮುಂದೆ ಆ ರೀತಿ ಮಾಡದೆ ಉದ್ಯೋಗ ದೊರಕಿಸಿ ಜೀವನ ನಿರ್ವಾಹ ಸಾಗಿಸಬೇಕೆಂದು ನಿರ್ಧರಿಸಿದನು. ಅದರಂತೆ ತನ್ನ ಹೆಂಡತಿಗೆ ಹೇಳಿ "ನಾನು ಉದ್ಯೋಗ ಹುಡುಕುವುದಕ್ಕಾಗಿ ಪರಸ್ಥಳಕ್ಕೆ ತೆರಳುತ್ತೇನೆ. ನೀನು ಮಗನನ್ನು ಜಾಗ್ರತೆಯಿಂದ ಕಾಪಾಡಿಕೊಂಡಿರು" ಎಂದು ಹೇಳಿ ಪ್ರಯಾಣ ಮಾಡಿದನು.

ಪತಿಯು ಪರದೇಶಕ್ಕೆ ತೆರಳಿ ಬಹಳ ದಿನಗಳಾದುವು. ಅವಳಿಗೆ ಕಾಮವನ್ನು ತಡೆಯಲಾಗಲಿಲ್ಲ. ನೆರೆಮನೆಯಲ್ಲಿದ್ದ ಒಬ್ಬ ತರುಣನನ್ನೇ ಮೋಹಿಸಿದಳು. ಅವನೂ ಅವಳ ಮೋಹಜಾಲದೊಳಗೆ ಸಿಲುಕಿದನು. ಇಬ್ಬರೂ ಸುಖ ಸಂತೋಷದಿಂದ ಕಾಲ ಕಳೆಯತೊಡಗಿದರು. ಒಂದು ದಿನ ಅವಳ ಮಗನು ಆಟವಾಡಿ ಮನೆಗೆ ಬಂದಾಗ ಅವಳು ಆ ತರುಣನೊಡನೆ ರತ್ಯಾಸಕ್ತಳಾಗಿದ್ದಳು. ಇದನ್ನು ಕಂಡ ಅವಳ ಮಗನು ರೇಗಿ "ಅಮ್ಮಾ, ನೀನು ಈ ರೀತಿ ಮಾಡುವುದು ಸರಿಯಲ್ಲ. ನಾನು ಅಪ್ಪನೊಡನೆ ಹೇಳದೇ ಬಿಡಲಾರೆ" ಎಂದನು. ಮಗನ ಮಾತನ್ನು ಕೇಳಿ ತಾಯಿಯು ಬೆದರಿದಳು. ಸರದಾರನು ಮನೆಗೆ ಮರಳಿದ ಮೇಲೆ ತನ್ನ ಹಾಗೂ ತನ್ನ ಉಪಪತಿಯಾದ ಆ ತರುಣನ ಪ್ರಾಣಗಳು ಉಳಿಯಲಾರವು ಎಂದು ಅವಳಿಗೆ ಮನದಟ್ಟವಾಯಿತು. ಆದುದರಿಂದ ಪತಿಗೆ ಈ ಸುದ್ದಿ ತಿಳಿಯದಂತೆ ಆ ತನ್ನ ಮಗನನ್ನೇ

ಕೊಲ್ಲಿಸಿ ಬಿಡಬೇಕೆಂದು ಅವಳು ಯೋಚಿಸಿದೆಳು. ಮತ್ತು ಕೊಲ್ಲಲು ಆ ತರುಣನಿಗೆ ತಿಳಿಸಿದಳು. ಅವನು ಕೂಡಾ ಹಿಂದುಮುಂದು ನೋಡದೆ ಆ ಹುಡುಗನ ಕುತ್ತಿಗೆ ಹಿಚುಕಲೆತ್ನಿಸಿದನು. "ತಂದೆಯ ಮುಂದೆ ಹೇಳುವು ದಿಲ್ಲ. ನನ್ನನ್ನು ಕೊಲ್ಲಬೇಡ" ಎಂದು ಆ ಮಗುವು ಪರಿಪರಿಯಾಗಿ ಬೇಡಿ ಕೊಂಡರೂ ಅವರೀರ್ವರಿಗೂ ದಯೆ ಹುಟ್ಟಲಿಲ್ಲ. ಹುಡುಗನನ್ನು ಕೊಂದು ಮನೆಯ ನೆಲಮಾಳಿಗೆಯಲ್ಲಿ ಚೆಲ್ಲಿದರು.

ಸ್ವಲ್ಪ ಹೊತ್ತಿನ ಮೇಲೆ ಅವರ ಮನೆಯ ದಾಸಿಯು ಬಂದಳು. ಮನೆಯಲ್ಲಿ ಹುಡುಗನಿಲ್ಲದಿದ್ದುದನ್ನು ಕಂಡು ಗಾಬರಿಯಾಗಿ ಕೇಳಿದಳು. ಸರದಾರನ ಹೆಂಡತಿ ಕೊಟ್ಟ ಉತ್ತರದಿಂದ ಅವಳಿಗೆ ಸಮಾಧಾನವಾಗಲಿಲ್ಲ. ಅಲ್ಲಲ್ಲಿ ಹುಡುಕಿದಳು. ಕೊನೆಗೆ ನೆಲಮಾಳಿಗೆಯಲ್ಲಿ ಆ ಹುಡುಗನ ಕಳೇಬರವನ್ನು ಕಂಡಳು. ಸರದಾರನ ಹೆಂಡತಿಗೆ ಇದು ತಿಳಿದ ಕೂಡಲೇ ಅವಳು ಇನ್ನಷ್ಟು ಭಯಭೀತಳಾದಳು. ಆ ದಾಸಿ ನೆರೆಮನೆ ಹಾಗೂ ಇನ್ನಿತರರಿಗೂ ತನ್ನ ಗಂಡನಿಗೂ ತಿಳಿಸುವ ಸಂಭವವಿದೆಯೆಂದು ಅವಳ ಭೀತಿ. ಆದುದರಿಂದ ಆ ದಾಸಿಯನ್ನು ಕೊಲ್ಲುವಂತೆ ಆ ತರುಣನಿಗೆ ತಿಳಿಸಿದಳು. ಆದರಂತೆ ಅವನು ಆ ದಾಸಿಯನ್ನು ಕೊಂದು ಅದೇ ನೆಲಮನೆಗೆಸೆದನು. ಆದರೆ ದುರದೃಷ್ಟದಿಂದ ಅದೇ ದಿನ ರಾತ್ರಿ ಪರದೇಶಕ್ಕೆ ತೆರಳಿದ್ದ ಅವಳ ಪತಿ ಮರಳಿದನು. ಬಂದವನೇ "ಹುಡುಗನೆಲ್ಲಿ?" ಎಂದು ಕೇಳಿದನು. ಆಗ ಅವಳು "ನಿನ್ನೆ ನನ್ನ ತಮ್ಮನು ಬಂದು ಅವನನ್ನು ಕರೆದೊಯ್ದ. ಅವನೊಂದಿಗೆ ದಾಸಿಯೂ ಹೋಗಿದ್ದಾಳೆ. ಏಳೆಂಟು ದಿವಸಗಳೊಳಗೆ ಹಿಂತಿರುಗುವರು" ಎಂದಳು. ಅವಳ ಗಂಡನು ಆ ಮಾತನ್ನು ನಂಬಿದನು.

ಆ ಮೇಲೆ ಸರದಾರನ ಹೆಂಡತಿಯು ಅಡಿಗೆ ಮಾಡತೊಡಗಿದಳು. ಆಗ ಮತ್ತೊಂದು ದುರಾಲೋಚನೆ ಅವಳಿಗೆ ಹೊಳೆಯಿತು. ಈಗ ಒಂದು ನೆವ ಹೇಳಿ ಗಂಡನ ಕೈಯಿಂದ ಪಾರಾದೆ. ಆದರೆ ಏಳೆಂಟು ದಿವಸಗಳ ಮೇಲೆ ಮತ್ತೆ ಹುಡುಗನೆಲ್ಲಿ ಎಂದು ಅವನು ಕೇಳದೆ ಇರಲಾರ. ಅವನಿಗೆ ಸಂಶಯವೂ ಬಾರದೇ ಇರಲಾರದು. ಒಂದು ವೇಳೆ ನೆಲಮನೆಗೆ ಅವನು ಪ್ರವೇಶಿಸಿದರೆ ಆ ಶವಗಳೂ ಅವನ ದೃಷ್ಟಿಗೆ ಬೀಳುವದರಲ್ಲಿ ಸಂದೇಹವಿಲ್ಲ. ಹಾಗಾದರೆ ನನ್ನ ಪ್ರಾಣಕ್ಕೆ ಅಪಾಯವಿಯದೆ. ಆದುದರಿಂದ ಅದರ ಮೊದಲೇ

ನನ್ನ ಪತಿಯನ್ನು ಕೊಲ್ಲದೆ ಅನ್ಯಥಾ ಗತಿಯಿಲ್ಲ ಎಂದವಳು ಯೋಚಿಸಿದಳು. ಮತ್ತು ಅನ್ನದೊಂದಿಗೆ ವಿಷವನ್ನು ಬೆರಸಿದಳು. ಊಟ ಮಾಡಿದ ಕೂಡಲೇ ಸರದಾರನಿಗೆ ಸಂಕಟವಾಯಿತು. "ನೀರು, ನೀರು" ಎಂದು ಕೂಗಿದನು. ಆಗ ಅವಳು "ಮನೆಯಲ್ಲಿ ನೀರಿಲ್ಲ. ಈಗ ನದಿಗೆ ತೆರಳಿ ತರುತ್ತೇನೆ" ಎಂದು ಹೇಳಿ ಹೊರಟು ಹೋದಳು ಮತ್ತು ತನ್ನ ಪ್ರೀತಿಪಾತ್ರನಾದ ತರುಣನ ಮನೆಗೆ ತೆರಳಿ ಅವನೊಡನೆ ಸುಖ ಸಮಾಗಮ ಮಾಡತೊಡಗಿದಳು.

ಸರದಾರನು ಸಂಕಟವನ್ನು ಸಹಿಸಲಾರದೆ ಮನೆಯ ಹೊರಗೆ ಬಂದನು. ಆಗ ನೆಲಮನೆಯಿಂದ ದುರ್ವಾಸನೆ ಅವನ ಮೂಗಿಗೆ ಬಡಿಯಿತು. ಅದೇನೆಂದು ಕುತೂಹಲದಿಂದ ಅಲ್ಲಿಗೆ ತೆರಳಿ ನೋಡಿದನು. ಆಗ ತನ್ನ ಮಗ ಹಾಗೂ ದಾಸಿಯ ಶವಗಳ ಗುರುತು ಹತ್ತಿತು ಅವನಿಗೆ. ಅವನ್ನು ಕಂಡ ಕೂಡಲೇ ಅವನು ಎದೆ ಬಡಿದುಕೊಂಡು ಅಳಲಾರಂಭಿಸಿದನು. ಅಷ್ಟರಲ್ಲಿ ತಿಂದ ವಿಷವು ತಲೆಗೇರಿ ಅವನು ಅಲ್ಲೇ ಸತ್ತುಬಿದ್ದನು. ಬೆಳಗಾದ ಮೇಲೆ ಅವನ ಹೆಂಡತಿಯು ಮನೆಗೆ ಬಂದಳು. ತನ್ನ ಪತಿಯು ನೆಲ ಮಾಳಿಗೆಯ ಬಾಗಿಲಿನ ಬಳಿ ಬಿದ್ದುದು ಅವಳಿಗೆ ತೋರಿತು. ಇದು ಉಳಿದವರಿಗೆ ಗೊತ್ತಾಗದೇ ಇರಲಿಕ್ಕಿಲ್ಲ. ಇದರಿಂದ ಮಾನಹಾನಿಯಾಗುವುದು ನಿಶ್ಚಯವೆಂದು ಅವಳು ಅರಿತಳು. ತನ್ನ ಮಾನವನ್ನು ರಕ್ಷಿಸಿಕೊಳ್ಳುವುದಕ್ಕೋಸ್ಕರ ಅವಳು ಒಂದು ಉಪಾಯ ಹೂಡಿದಳು. "ರಾತ್ರಿ ಕಳ್ಳರು ಮನೆಗೆ ಬಂದು ನನ್ನ ಕುಟುಂಬದ ಎಲ್ಲ ಜನರನ್ನು ಕೊಂದರು'' ಎಂದು ಅಳತೊಡಗಿದಳು. ಆಗ ನೆರೆಹೊರೆಯ ಜನರು ಓಡಿಬಂದರು. ನೆಲಮಾಳಿಗೆಯಲ್ಲಿ ಬಿದ್ದ ಶವಗಳನ್ನು ನೋಡಿ ಅವಳಾಡಿದ ಮಾತು ನಿಜವೆಂದೇ ನಂಬಿದರು. "ಪ್ರೀತಿಪಾತ್ರನಾದ ಪತಿ ಮತ್ತು ಸುತರನ್ನು ಕಳೆದುಕೊಂಡು ನಾನು ಹೇಗೆ ಬದುಕಲಿ? ನಾನು ಪತಿಯೊಡನೆ ಸಹಗಮನ ಮಾಡುತ್ತೇನೆ" ಎಂದು ಹಲುಬಿದಳು. ಎಲ್ಲರೂ ಅವಳ ಪತಿ ಮತ್ತು ಪುತ್ರಪ್ರೇಮ ಕಂಡು ಹೊಗಳಿದರು.

ಪತಿಯ ಚಿತೆಯನ್ನು ಸಿದ್ಧಗೊಳಿಸಿದರು. ಒಂದೆಡೆ ಮಗನ ಚಿತೆ. ಸಹಗಮನ ಮಾಡುವುದಕ್ಕಾಗಿ ಅವಳೂ ಸಿದ್ಧಳಾಗಿ ಬಂದಿದ್ದಳು ಇದನ್ನು ನೋಡಲು ಸಾವಿರಾರು ಜನರು ನೆರೆದಿದ್ದರು. ಅವಳ ಉಪಪತಿಯಾದ ಆ

ತರುಣನೂ ಬಂದಿದ್ದ. ಅವನನ್ನು ನೇತ್ರಸಂಕೇತದಿಂದ ಅವಳು ಹತ್ತಿರ ಕರೆದಳು. ಅವನು ಚಿತೆಯ ಬಳಿಗೆ ಬಂದ ಕೂಡಲೇ ಅವಳು ಅವನನ್ನು ಆಲಿಂಗಿಸಿ ಮುದ್ದಾಡಿದಳು. "ನಿನ್ನ ಪ್ರೇಮಕ್ಕಾಗಿ ಈಗ ಐದು ಜನರು ಬಲಿಯಾಗಬೇಕಾಗಿದೆ'' ಎಂದು ಹೇಳಿ ಅವನನ್ನೂ ಆ ಚಿತೆಗೆ ನೂಕಿದಳು. ಮತ್ತು ಅವನೊಂದಿಗೆ ತಾನೂ ಚಿತೆಗೆ ಹಾರಿದಳು. ಆ ಸರದಾರನ ಹೆಂಡತಿ ಯಂತೆ ಈಗ ನಾನೂ ಯೋಚಿಸುತ್ತಿದ್ದೇನೆ. ನನ್ನನ್ನು ಕರೆದುಕೊಂಡು ಹೋಗು. ಇಬ್ಬರೂ ಯಾವುದಾದರೊಂದು ದೇಶದಲ್ಲಿ ಸುಖವಾಗಿರೋಣ. ಇಲ್ಲದಿದ್ದರೆ ಸರದಾರನ ಹೆಂಡತಿಯಂತೆ ನಾನೂ ಮಾಡದೆ ಬಿಡಲಾರೆ."

ಸುಶೀಲೆ ಈ ರೀತಿ ಆಡಿದುವನ್ನು ಕೇಳಿ ನಾನು ಚಿಂತಾಪರನಾದೆ. ಆ ಮೇಲೆ ಸ್ವಲ್ಪ ಧೈರ್ಯ ತಂದುಕೊಂಡು "ಉಗ್ರಸೇನನೆಂಬ ರಾಜಪುತ್ರನ ಕಥೆಯೂ ಇದೇ ರೀತಿಯಾಗಿದೆ" ಎಂದು ಹೇಳಿದೆ. ಆಗ ಅವಳು ಆ ಕಥೆ ಯನ್ನು ತನಗೆ ಹೇಳುವಂತೆ ಒತ್ತಾಯ ಮಾಡಿದಳು. ಮೋಹಿನೀ, ನಿನಗೆ ಕೇಳಲು ಕುತೂಹಲವಿದ್ದರೆ ಅದನ್ನು ಹೇಳುತ್ತೇನೆ.''

ಮೋಹಿನಿಯು ಅದನ್ನು ಕೇಳಲು ಬಯಸಿದುದರಿಂದ ಮೋಹನ ದಾಸನು ಇಂತೆಂದನು

## ೬. ಉಗ್ರಸೇನನ ಕಥೆ

ಹಿಂದೆ ವಿದರ್ಭದಲ್ಲಿ ಶೂರಸೇನನೆಂಬ ರಾಜನೊಬ್ಬನಿದ್ದನು. ವೃದ್ಧಾ ಪ್ಯದಲ್ಲಿ ಅವನಿಗೊಂದು ಪುತ್ರಸಂತಾನವಾಯಿತು. ಮಗನಿಗೆ ಉಗ್ರಸೇನ ನೆಂದು ಹೆಸರಿಟ್ಟನು. ಉಗ್ರಸೇನನಿಗೆ ವೈದ್ಯಕೀಯ ಶಾಸ್ತ್ರದಲ್ಲಿ ಪ್ರೀತಿ ಹುಟ್ಟಿತು. ಅದರಲ್ಲಿ ಅವನು ಪಾರಂಗತನಾದನು. ಆ ಮೇಲೆ ದೇಶ ಸಂಚಾರ ಮಾಡಬೇಕೆಂಬ ಅಭಿಲಾಷೆ ಅವನಿಗುಂಟಾಯಿತು. ತಂದೆ ತೀರಿ ಹೋದ ಮೇಲೆ ದೇಶ ಸಂಚಾರ ಮಾಡಲಾಗುವುದಿಲ್ಲವೆಂದೂ ಅವನು ಯೋಚಿಸಿದನು. ಆದುದರಿಂದ ಅದರ ಮೊದಲೇ ತನ್ನ ಆಶೆಯನ್ನು ಈಡೇರಿಸಿಕೊಳ್ಳಲು ಅವನ ಅಪೇಕ್ಷೆ. ಅದರಂತೆ ಅವನು ತನ್ನ ತಂದೆಯನ್ನು ಕಂಡು ತನ್ನ ಇಚ್ಛೆಯನ್ನು ತಿಳಿಸಿದನು. ತಂದೆಯು ಮೊದಲು ಆ ವಿಚಾರಕ್ಕೆ ಸಮ್ಮತಿಸಲಿಲ್ಲ. ಆದರೆ

ಯಾವ ರೀತಿಯಿಂದಲೂ ಮಗನ ಮನೋನಿರ್ಧಾರವನ್ನು ಬದಲಿಸಲು ಆಗಲೇ ಇಲ್ಲ. ಇದನ್ನರಿತ ರಾಜನು ಮಗನ ದೇಶಸಂಚಾರಕ್ಕೆ ಒಪ್ಪಿಗೆಯನ್ನು ಕೊಟ್ಟು, ತನ್ನ ಸಂಗಡ ಅಪಾರ ದ್ರವ್ಯವನ್ನು ಸೈನಿಕರನ್ನು ಒಯ್ಯುವುದು ಚಿತವೆಂದನು. ಸೈನ್ಯವನ್ನು ಕರೆದೊಯ್ದರೆ ಬೇಗನೇ ಹಿಂತಿರುಗಲು ಅಸಾಧ್ಯವಾದೀತೆಂದು ರಾಜಪುತ್ರನು ಅದಕ್ಕೆ ಸಮ್ಮತಿಸಲಿಲ್ಲ. ದ್ರವ್ಯವನ್ನು ಹಿಡಿದುಕೊಂಡು ಉತ್ತಮವಾದ ಶ್ವೇತಾಶ್ವವನ್ನೇರಿ ಅವನು ಪ್ರಯಾಣ ಬೆಳೆಸಿದನು.

ಆದರೆ ದ್ರವ್ಯವು ಅವನ ಮನಸ್ಸಿಗೆ ದೊಡ್ಡ ಭಾರವಾಗಿ ಪರಿಣಮಿಸಿತು. ಯಾರಾದರೂ ಕಳ್ಳಕಾಕರು ಬಂದು ಅದನ್ನು ಅಪಹರಿಸಬಹುದೆಂದೂ ಸಂಶಯ ಪಟ್ಟನು. ಅಂತಹ ವಿಪತ್ತನ್ನು ನಿವಾರಿಸಲೋಸುಗ ತನ್ನೆಲ್ಲ ದ್ರವ್ಯವನ್ನು ಕೊಟ್ಟು ಎರಡು ವಜ್ರಗಳನ್ನು ಕೊಂಡುಕೊಂಡನು. ಅದರಿಂದ ಅವನ ಮನಸ್ಸು ಹಗುರವಾಯಿತು. ಆ ಮೇಲೆ ನಿಶ್ಚಿಂತೆಯಿಂದ ಅನೇಕ ಪೇಟೆ ಪಟ್ಟಣಗಳನ್ನು ಕಂಡನು. ಕೊನೆಗೆ ಒಂದು ದೊಡ್ಡ ನಗರಕ್ಕೆ ಬಂದು ಧರ್ಮಶಾಲೆಯಲ್ಲಿ ಇಳಿದುಕೊಂಡನು. ಆದರೆ ದೇಹಾಯಾಸದಿಂದ ಬೇಗನೇ ನಿದ್ದೆ ಬರಲಿಲ್ಲ. ಅಷ್ಟರಲ್ಲಿ ಮಧ್ಯರಾತ್ರಿ ವೇಶ್ಯೆಯೊಬ್ಬಳು ಸಾಲಂಕೃತಳಾಗಿ ತನ್ನ ಒಡೆಯನ ಮನೆಗೆ ತೆರಳುತ್ತಿದ್ದಳು. ಉಗ್ರಸೇನನು ಅವಳನ್ನು ನೋಡಿದನು. ಆಗ ಅವನು ಕಾಮಾತುರನಾಗಿ ಆವಳೊಡನೆ ಸುಖ ಹೊಂದಲು ಬಯಸಿದನು. ಆದರೆ ವೇಶ್ಯೆಯೊಡನೆ ಮಾತನಾಡಲು ಅವಕಾಶವೇ ಸಿಗಲಿಲ್ಲ. ಅವಳು ಬೇಗನೇ ತನ್ನ ಯಜಮಾನನ ಮನೆಗೆ ತೆರಳಿದಳು. ಆದರೆ ಅವನು ಆ ದಿನ ಅಲ್ಲಿರಲಿಲ್ಲ. ಆದುದರಿಂದ ಬೇಗನೇ ಹಿಂತಿರುಗಿದಳು.

ಹಿಂತಿರುಗಿ ಬರುತ್ತಿರುವಾಗ ಉಗ್ರಸೇನನು ಅವಳನ್ನು ನೋಡಿ ತಾನಿದ್ದಲ್ಲಿಗೆ ಕರೆದನು. ಅವಳು ಬಂದು ಅವನ ಸೌಂದರ್ಯಾತಿಶಯದಿಂದ ಬೆರಗಾದಳು. "ಸ್ವಾಮಿ, ಇಲ್ಲಿ ಬಹಳ ಚಳಿ. ನೀವು ನನ್ನ ಮನೆಗೆ ಬನ್ನಿರಿ'' ಎಂದು ಅವಳು ಆಮಂತ್ರಿಸಿದಳು. ಕಾಮಬಾಧೆಯಿಂದ ಬಳಲುತ್ತಿದ್ದ ರಾಜಪುತ್ರನು ಅವಳ ಮರುಳು ಮಾತಿಗೆ ಮರುಳಾಗಿ ಅಶ್ವಾರೂಢನಾಗಿ ಅವಳ ಬೆನ್ನ ಹಿಂದೆಯೇ ಹೊರಟನು. ಅವಳ ಮನೆಯಲ್ಲಿಯೇ ಕೆಲವು ದಿವಸಗಳ ವರೆಗೆ ಉಳಿದನು. ಅವನಲ್ಲಿದ್ದ ಎಲ್ಲ ದ್ರವ್ಯವನ್ನು ಅವಳು ಅಪಹರಿಸಿದಳು.

ಆದರೆ ರತ್ನಗಳೆರಡು ಮಾತ್ರ ಅವಳ ಕಣ್ಣಿಗೆ ಬಿದ್ದಿರಲಿಲ್ಲ. ಒಂದು ದಿನ ಉಗ್ರಸೇನನು ಮಲಗಿದ್ದಾಗ ಆ ವೇಶ್ಯೆಯು ಅವನ ಕಾಲುಗಳನ್ನು ಒತ್ತುತ್ತ ಕುಳಿತಿದ್ದಳು. ಮೆಲ್ಲಗೆ ಅವಳು ಕೈಗಳನ್ನು ತೊಡೆಯ ವರೆಗೂ ನೀಡಿದಳು. ಆಗ ಅವಳ ಕೈಗೆ ಬಿರುಸಾದ ಸ್ಥಳವೊಂದು ಸ್ಪರ್ಶವಾಯಿತು. ಅದೇನೆಂದು ಅವಳಿಗೆ ಗೊತ್ತಾಗಲಿಲ್ಲ. ತಿಳಿವ ಕುತೂಹಲ ಹೆಚ್ಚಾಯಿತು. ಆದುದರಿಂದ ಮರುದಿನ ರಾಜಪುತ್ರನನ್ನೇ ಕೇಳಿದಳು. "ನಿಮ್ಮ ತೊಡೆಗಳು ಸುಕುಮಾರ ವಾಗಿವೆ. ಆದರೆ ಅಲ್ಲಿ ಬಿರುಸಾದ ವಸ್ತುವೇನೋ ಕೈಗೆ ತಾಗಿತಲ್ಲ! ಅದೇನು?'' ಎಂದು ಪ್ರಶ್ನಿಸಿದಳು. ಉಗ್ರಸೇನನು ರತ್ನಗಳ ವಿಷಯವನ್ನು ತಿಳಿಸಿದನು.

ವೇಶ್ಯೆಗೆ ಅದರ ಮೇಲೆ ಆಶೆಯಾಯಿತು. "ನಾನು ಒಂದು ಮೂಗುತಿ ಮಾಡಬೇಕೆಂದು ಬಹಳ ವರುಷಗಳಿಂದ ಯೋಚಿಸುತ್ತಾ ಇದ್ದೆ. ಆದರೆ ದುರದೃಷ್ಟದಿಂದ ಅದಕ್ಕೆ ಸರಿಯಾದ ರತ್ನವೇ ಸಿಕ್ಕಿರಲಿಲ್ಲ. ಈಗ ನನ್ನ ಭಾಗ್ಯದ ಕದ ತೆರೆಯಿತು. ಒಂದು ರತ್ನವನ್ನು ಕೊಟ್ಟರೆ ಮೂಗುತಿ ಮಾಡಿ ಸುತ್ತೇನೆ'' ಎಂದು ನುಡಿದಳು. ಆಗ ಉಗ್ರಸೇನನು ತುಸು ಯೋಚಿಸಿ, ರತ್ನವನ್ನು ಇವಳು ಅಪಹರಿಸಲೆತ್ನಿಸುತ್ತಿದ್ದಾಳೆಂದು ತಿಳಿದನು. "ನಾಳೆ ವೈದ್ಯರಲ್ಲಿ ತೆರಳಿ ತೊಡೆ ಕೊಯ್ಸಿ ರತ್ನವನ್ನು ಕೊಡುತ್ತೇನೆ'' ಎಂದು ಹೇಳಿ ಆಗ ಅವಳನ್ನು ಸಮಧಾಯಿಸಿದನು. ಮರುದಿನ ವೈದ್ಯರಲ್ಲಿಗೆ ಹೊರಟವನು ಬೇಗನೇ ತನ್ನ ಕುದುರೆಯನ್ನೋಡಿಸುತ್ತ ಆ ನಗರದಿಂದ ಹೊರಟು ಹೋದನು. ಆದರೆ ಆ ವೇಶ್ಯೆಯು ಅವನ ಹಿಂದೆ ತನ್ನ ತಂದೆಯನ್ನು ಕಳಿಸಿದ್ದಳು. ಉಗ್ರಸೇನನು ಕುದುರೆ ಹತ್ತಿ ಓಡಿದುದನ್ನು ಕಂಡು ಅವನೂ ಕುದುರೆ ಏರಿ ಅವನನ್ನು ಹಿಂಬಾಲಿಸಿದನು.

ಉಗ್ರಸೇನನು ಅನೇಕ ನಗರಗಳನ್ನು ದಾಟಿ ಹೋದನು. ರತ್ನಗಳು ಹೊರತು ಬೇರೆ ಹಣವೇ ಕೈಯಲ್ಲಿ ಉಳಿಯಲಿಲ್ಲ. ಆದುದರಿಂದ ಸ್ವಲ್ಪ ಹಣ ಸಂಪಾದಿಸಬೇಕೆಂಬ ಉದ್ದೇಶದಿಂದ ಆ ಊರಿನ ದೊರೆಯಿದ್ದಲ್ಲಿಗೆ ತೆರಳಿ ಒಂದು ಉದ್ಯೋಗವನ್ನು ದೊರಕಿಸಿಕೊಂಡನು. ಇದನ್ನು ವೇಶ್ಯೆಯ ತಂದೆಯು ತಿಳಿದು ತನ್ನ ಮಗಳಿಗೆ ತಿಳಿಸಿದನು. ಆ ಮೇಲೆ ಮುಂದೇನು ಮಾಡಬೇಕೆಂದು ಅವರು ಯೋಚಿಸಿದರು. ಒಂದು ದಿನ ಅವನು ತನ್ನ

ಮಗಳನ್ನು ಕರೆದುಕೊಂಡು ಆ ರಾಜನಿದ್ದಲ್ಲಿಗೆ ಬಂದನು. "ರಾಜಾ, ನನ್ನ ಅಳಿಯನು ನಿನ್ನಲ್ಲಿದ್ದಾನೆ. ಪ್ರೀತಿಯ ಪತ್ನಿಯನ್ನು ಅಗಲಿ ಬಂದಿದ್ದಾನೆ. ಅವಳು ಪ್ರಾಣವನ್ನೇ ನೀಗುವುದಾಗಿ ಹೇಳಿರುವಳು. ಆದುದರಿಂದ ಇಬ್ಬರನ್ನೂ ಕೂಡಿಸಿ ಪುಣ್ಯ ಕಟ್ಟಿಕೊಳ್ಳು" ಎಂದು ಪ್ರಾರ್ಥಿಸಿದನು. ಆಗ ರಾಜನು ಕರುಣೆದೋರಿ ಮತ್ತೆ ಉಗ್ರಸೇನನನ್ನು ಆ ವೇಶ್ಯೆಯೊಂದಿಗೆ ಕಳಿಸಿಕೊಟ್ಟನು. ಅವನನ್ನು ಕಂಡಕೂಡಲೇ ಆ ವೇಶ್ಯೆಯು "ಸ್ವಾಮಿ, ನಿಮ್ಮನ್ನು ಕಂಡಮೇಲೆ ನಾನು ವೇಶ್ಯಾ ವೃತ್ತಿಯನ್ನು ಬಿಟ್ಟಿದ್ದೇನೆ. ನೀವೇ ನನ್ನ ಪತಿಯೆಂದು ಕನಸು ಮನಸಿನಲ್ಲಿಯೂ ಭಾವಿಸಿಕೊಂಡಿದ್ದೇನೆ. ಹೀಗಿರುವಾಗ ನೀವು ನನ್ನನ್ನು ಅಗಲಿ ಬಂದಿರಲ್ಲ! ವೈದ್ಯನಲ್ಲಿ ತೆರಳುತ್ತೇನೆಂದು ಹೇಳಿ ಬಂದವರು ಹಿಂತಿರುಗಲೇ ಇಲ್ಲ. ನಿಮ್ಮ ವಿರಹದಿಂದ ನನಗೆ ದಿಕ್ಕುಗಾಣದಾಗಿದೆ. ಅದಕ್ಕಾಗಿ ನೀವು ಇರುವ ಊರು ಯಾವುದೆಂದು ಶೋಧಿಸತೊಡಗಿದೆ. ಕೊನೆಗಾದರೂ ನೀವು ದೊರಕಿದಿರಲ್ಲ! ನನ್ನ ಭಾಗ್ಯಕ್ಕೆ ಬೇರೆ ಎಣೆಯಿಲ್ಲ" ಎಂದು ಹೇಳಿದಳು.

ವೇಶ್ಯೆಯ ಈ ಮಾತುಗಳನ್ನು ಕೇಳಿ ಉಗ್ರಸೇನನು ಯೋಚನೆಗೀಡಾದನು. ತನ್ನಲ್ಲಿರುವ ರತ್ನಗಳನ್ನು ಅಪಹರಿಸುವ ಉದ್ದೇಶದಿಂದಲೇ ಇವಳು ಈ ರೀತಿ ಕಪಟ ಪ್ರೇಮವನ್ನು ಬೀರುತ್ತಿರುವಳೆಂದು ಮನಗಂಡನು. ಆದರೆ ಆವಳ ಕೈಯಿಂದ ಹಾಗೆ ಫಕ್ಕನೆ ಪಾರಾಗುವಂತೆಯೂ ಇರಲಲ್ಲ. ಉಪಾಯದಿಂದ ಜಾರಿ ಹೋಗಬೇಕೆಂದು ಅವನು ಬಯಸಿದನು. ಆದುದರಿಂದ ಅವಳನ್ನು ಸಂತೈಸಿ ಇರಲು ಅವಳಿಗೆ ಒಂದು ದೊಡ್ಡ ಮನೆಯನ್ನು ಕೊಡಿಸಿದನು. ಆಗಾಗ ಅವಳ ಮನೆಗೆ ಹೋಗಿ ಬರುತ್ತಿದ್ದನು. ಒಂದು ದಿನ ಅವನು ಮಂತ್ರಿಯ ಮಗನೊಡನೆ ಭೋಜನ ಮಾಡಿದನು. ಇಬ್ಬರೂ ಆ ಮೇಲೆ ಯಥೇಚ್ಛವಾಗಿ ಮದ್ಯಪಾನ ಮಾಡಿದರು. ಉಗ್ರಸೇನನಿಗೆ ಪ್ರಜ್ಞೆ ಕೂಡಾ ತಪ್ಪಿತು. ಆಗ ಆ ಮಂತ್ರಿಸುತನು ಅವನನ್ನು ಆ ವೇಶ್ಯೆಯ ಮನೆಗೆ ಕಳಿಸಿಕೊಟ್ಟನು. ಉಗ್ರಸೇನನು ಮದ್ಯಪಾನದಿಂದ ಎಚ್ಚರವಪ್ಪಿರುವವನ್ನು ಕಂಡ ಆ ವೇಶ್ಯೆಯು ತಂದೆಯನ್ನು ಕರೆದು, "ಪೇಟೆಗೆ ತೆರಳಿ ವಿಷವನ್ನು ತನ್ನಿರಿ. ರತ್ನಗಳನ್ನು ಅಪಹರಿಸಲು ಇದೇ ಸುಸಂದರ್ಭ" ಎಂದಳು. ಆದರೆ ಅಷ್ಟರಲ್ಲಿ ಉಗ್ರಸೇನನಿಗೆ ಎಚ್ಚರವಾಯಿತು. ಆಗ ಆ ವೇಶ್ಯೆಯು

ಉಗ್ರಸೇನನ ಕೈಕಾಲುಗಳನ್ನು ಹಗ್ಗದಿಂದ ಬಿಗಿಸಿದಳು. ತಂದೆಯ ಕಡೆ ಹೊರಳಿ "ಅಪ್ಪಾ, ನೀನೀಗ ಎರಡು ಕುದುರೆಗಳನ್ನು ತೆಗೆದುಕೊಂಡು ಬಾ. ನಾವು ಇವನನ್ನು ಕೊಂದು, ಇವನ ರತ್ನಗಳನ್ನು ಅಪಹರಿಸಿ ಬೆಳಗಾಗುವದರೊಳಗೆ ಈ ನಗರವನ್ನು ತ್ಯಜಿಸಿ ಹೋಗೋಣ'' ಎಂದು ನುಡಿದಳು.

ಅವಳ ಮಾತುಗಳನ್ನು ಕೇಳಿ ಉಗ್ರಸೇನನು ದುಃಖಪಟ್ಟನು. "ನನ್ನ ರತ್ನಗಳನ್ನು ಕೊಡುತ್ತೇನೆ. ನೀನು ಪ್ರಾಣದಾನ ಮಾಡು" ಎಂದು ಪರಿಪರಿಯಾಗಿ ಹೇಳಿಕೊಂಡನು. ಆದರೂ ಅವಳಿಗೆ ಎಳ್ಳಷ್ಟು ದಯೆ ಬರಲಿಲ್ಲ. ಆಗ ಉಗ್ರಸೇನನು "ಪ್ರಿಯತಮೆ, ನಾನು ರಾಜಕುಮಾರನು. ಈಗ ನೀನು ನನ್ನ ಜೀವ ಉಳಿಸಿದರೆ ಈ ಎರಡು ರತ್ನಗಳೇಕೆ, ಅನಂತ ರತ್ನಗಳನ್ನು ಕೊಡುತ್ತೇನೆ. ಇವೆರಡರ ಆಶೆಗಾಗಿ ಅಂತಹ ಸಂದರ್ಭವನ್ನು ಕಳೆದುಕೊಳ್ಳಬೇಡ. ಹಾಲು ಕೊಡುವ ಆಡು ಇದ್ದರೆ ಯಾವಾಗಲೂ ಹಾಲು ದೊರೆತೀತು. ಕೊಂದರೆ ಹಾಲು ಬಂದೀತೇ ಹೇಗೆ? ಆರ್ತರಾದವರ ರಕ್ಷಣೆ ಮಾಡುವುದು ಧರ್ಮವಾಗಿದೆ. ನಿನ್ನಂತೆಯೇ ಇದ್ದ ಸ್ತ್ರೀಯೊಬ್ಬಳು ಪ್ರಾಣದಾನ ಮಾಡಿದ ಉದಾಹರಣೆ ಇದೆ" ಎಂದು ಹೇಳಿದನು. ಆಗ ಆ ವೇಶ್ಯೆಯು "ಆ ಉದಾಹರಣೆ ಯಾವುದು? ಬೇಗನೆ ಹೇಳು. ಆ ಮೇಲೆ ನಿನ್ನನ್ನು ಕೊಲ್ಲುತ್ತೇನೆ" ಎಂದು ಹೇಳಿದಳು.

## ೭. ಗುಮಾಸ್ತನ ಹೆಂಡತಿಯ ಕಥೆ

ಕಾಂತೀ ನಗರದಲ್ಲಿ ಇಂದ್ರನೆಂಬ ಒಬ್ಬ ವ್ಯಾಪಾರಿಯಿದ್ದನು. ರಮಾನಾಥನು ಅವನ ಗುಮಾಸ್ತ. ಈ ರಮಾನಾಥನು ತರುಣ. ಅಲ್ಲದೆ, ಸುಂದರನಾದ ಯುವಕ. ಗುಮಾಸ್ತನಾಗಿದ್ದಾಗ ದಕ್ಷತೆಯಿಂದ ಕೆಲಸ ಮಾಡಿದ. ಆದರಿಂದ ಆ ವ್ಯಾಪಾರಿಗೆ ಅವನ ಮೇಲೆ ವಿಶ್ವಾಸವುಂಟಾಯಿತು. ತನ್ನೊಡನೆ ಪಾಲು ವ್ಯಾಪಾರಮಾಡಲು ಅವಕಾಶವನ್ನಿತ್ತನು. ಮತ್ತು ಆ ರೀತಿಯ ಹುಂಡೀ ವ್ಯಾಪಾರದಿಂದ ತುಂಬಾ ಹಣ ಸಂಪಾದಿಸಿದನು. ಆದರೆ ರಮಾನಾಥನು ಮದುವೆ ಮಾಡಿಕೊಂಡಿರಲಿಲ್ಲ. ಸ್ತ್ರೀಯರು ಸಚ್ಚರಿತ್ರರಲ್ಲ ಎಂದವನ ಭಾವನೆ. ಆದರೆ ಸ್ವಲ್ಪ ಕಾಲ ಕಳೆದ ಮೇಲೆ ಕಾಮೇಚ್ಛೆಯನ್ನು ಸಹಿಸುವು

ದಾಗಲಿಲ್ಲ. ಆದುದರಿಂದ ಮದುವೆಯಾದನು.

ಅವನ ಹೆಂಡತಿ ಲಾವಣ್ಯವತಿ. ಅವಳನ್ನು ಕಂಡರೆ ಯಾರಾದರೂ ಇನ್ನಿತರರು ಮೋಹಿಸಿಯಾರು ಎಂದು ರಮಾನಾಥನ ಸಂಶಯ. ಅಲ್ಲದೆ ಸ್ತ್ರೀ ಬುದ್ಧಿ ಚಂಚಲವಾಗಿರುವುದರಿಂದ ಅವಳೂ ಇಷ್ಟಬಂದಂತೆ ವರ್ತಿಸ ಬಹುದೆಂದು ಬಗೆದ. ಆದುದರಿಂದ, ನಿರ್ಜನವಾದ ಒಂದು ಅರಣ್ಯದಲ್ಲಿ ಒಂದು ಮನೆಯನ್ನು ಕಟ್ಟಿಸಿದನು. ಮತ್ತು ಅಲ್ಲಿ ತನ್ನ ಹೆಂಡತಿಯನ್ನು ಇರಿಸಿದನು. ದಿನಂಪ್ರತಿ ಸಂಜೆ ಆ ಮನೆಗೆ ತೆರಳುತಿದ್ದನು.ಮತ್ತು ಮುಂಜಾನೆ ಪೇಟೆಗೆ ಬರುತಿದ್ದನು. ಹೆಂಡತಿಯ ಸೇವೆಗಾಗಿ ಇಬ್ಬರು ದಾಸಿಯರನ್ನೂ ಗೊತ್ತುಪಡಿಸಿದನು.

ಹೀಗೆ ಬಹಳ ಸಮಯ ಕಳೆಯಿತು. ಆ ಮೇಲೊಮ್ಮೆ ವ್ಯಾಪಾರದ ದೆಸೆಯಿಂದ ಅವನು ವಿದೇಶಕ್ಕೆ ಪ್ರಯಾಣ ಬೆಳೆಸಬೇಕಾಗಿ ಬಂದಿತು. ತಾನು ಇಲ್ಲದೇ ಇದ್ದಾಗ ಅವಳು ಮನೆಬಿಟ್ಟು ಹೊರಗೆ ಹೋಗಬಾರದೆಂದು ವಿಧಿಸಿ ದನು. ಮತ್ತು ತಾನು ನಿಶ್ಚಿಂತನಾಗಿ ಹೊರಟು ಹೋದನು. ಅವನು ಹೊರಟು ಹೋದ ಮೇಲೆ ಅವನ ಹೆಂಡತಿಯು ಮುಂಜಾನೆ ಗಾಳಿ ಸವಾರಿಗೆ ಹೋಗಲಾರಂಭಿಸಿದಳು. ಒಂದು ದಿನ ಅದೇ ಅರಣ್ಯಕ್ಕೆ ಬೇಟೆಗೆ ಬಂದಿದ್ದ ರಾಜಕುಮಾರನನ್ನು ಅವಳು ಕಂಡಳು. ಅವನ ರೂಪಸೌಂದರ್ಯ ವನ್ನು ನೋಡಿ ಅವಳು ತುಂಬಾ ಮೋಹಿತಳಾದಳು. ಅವನನ್ನು ತನ್ನ ಮನೆಗೆ ಕರೆದುಕೊಂಡು ಹೋದಳು. ಮತ್ತು ರಾಜಕುಮಾರನೊಡನೆ ರತಿ ಸುಖವನ್ನು ಪಡೆಯತೊಡಗಿದಳು. ರಾಜಪುತ್ರನು ತನ್ನ ಶಯ್ಯಾ ಮಂದಿರಕ್ಕೆ ಬರಲು ಅನುಕೂಲವಾಗುಂತೆ ಒಂದು ಗುಪ್ತ ದಾರಿಯನ್ನು ಕೂಡಾ ಮಾಡಿ ಸಿದಳು. ಆ ರಾಜಕುಮಾರನನ್ನು ಅವಳು ಹೆಚ್ಚಾಗಿ ಪ್ರೀತಿಸತೊಡಗಿದಳು. ಗಂಡನ ಮೇಲೆ ಬಹಳ ತಾತ್ಸಾರವೂ ಹುಟ್ಟಿತು. ಒಂದು ದಿನ ಅವಳು ತನ್ನ ಆ ಉಪಪತಿಯೊಡನೆ "ಸ್ವಾಮಿ, ಇದೇ ರೀತಿ ನಾವು ಎಷ್ಟು ದಿನಗಳ ವರೆಗೆ ಇರಬೇಕೋ ತಿಳಿಯಲಾರದು. ನೀನು ನನ್ನ ಪತಿಯನ್ನು ಕೊಂದರೆ ನಾವು ಇಷ್ಟಬಂದ ಕಡೆ ತೆರಳಿ ಸುಖವಾಗಿ ಜೀವಿಸಬಲ್ಲೆವು" ಎಂದಳು.

ರಾಜಕುಮಾರನಿಗೆ ಈ ಮಾತು ರುಚಿಸಲಿಲ್ಲ. "ಅವನು ನಿನ್ನ ಪತಿ. ನಿನ್ನನ್ನು ಇಷ್ಟರ ವರೆಗೆ ಸಾಕಿ ಸಲಹಿರುವನು. ಈಗ ಅವನನ್ನು ಕೊಲ್ಲುವುದು

ಉಚಿತವಲ್ಲ. ಅಲ್ಲದೆ ಅದು ಮಹಾಪಾಪ" ಎಂದು ಪರಿಪರಿಯಾಗಿ ಬೋಧಿಸಿದನು. ಆದರೂ ಅವಳ ಮನಸ್ಸು ಬದಲಾಗಲಿಲ್ಲ. ಹೀಗಿರುತ್ತಿರಲು ಒಂದು ದಿನ ಅವಳ ಪತಿ ವಿದೇಶದಿಂದ ಮರಳಿದನು. ವಿಶೇಷ ದೇಹಾಯಾಸವಾಗಿದ್ದುದರಿಂದ ಮಲಗಿದ ಕೂಡಲೇ ಅವನಿಗೆ ಗಾಢವಾದ ನಿದ್ದೆ ಬಂದಿತು. ರಾತ್ರಿ ಅವಳ ಉಪಪತಿಯಾದ ರಾಜಕುಮಾರನು ಬಂದನು. ಅವನನ್ನು ಕಂಡ ಕೂಡಲೇ ಈ ದುಷ್ಟೆಯು ಒಂದು ಖಡ್ಗವನ್ನು ಅವನ ಕೈಯಲ್ಲಿತ್ತು ತನ್ನ ಪತಿ ಮಲಗಿದ್ದ ಸ್ಥಳಕ್ಕೆ ಕರೆದುಕೊಂಡು ಬಂದಳು. ಆದರೆ ಅವನನ್ನು ಕೊಲ್ಲಲು ರಾಜಕುಮಾರನು ಒಪ್ಪಲಿಲ್ಲ. ಆಗ ಅವಳು ತಾನೇ ಆ ಖಡ್ಗವನ್ನು ತೆಗೆದುಕೊಂಡು ತನ್ನ ಪತಿಯ ತಲೆಯನ್ನು ಕಡಿದಳು. ಆ ಘೋರ ದೃಶ್ಯವನ್ನು ಕಂಡ ರಾಜಕುಮಾರನಿಗೆ ತುಂಬಾ ಸಂಕಟವಾಯಿತು. ಅವಳ ಮೇಲೆ ತಿರಸ್ಕಾರ ಹುಟ್ಟಿತು. "ನಿನ್ನನ್ನು ಸಾಕಿ ಸಲಹಿದ ಪತಿಯನ್ನೇ ನೀನು ಕೊಂದೆಗೆದೆ. ಅವನು ನಿರಪರಾಧಿ ನಾನು ಅವನಂತೆ ನಿನಗೆ ಹಿತವನ್ನೂ ಮಾಡಿಲ್ಲ. ನಿನ್ನ ಪತಿಯನ್ನೇ ಕೊಂದವಳು ನನ್ನನ್ನು ಏನು ಮಾಡುತ್ತೀಯೋ ಏನೋ! ಆದುದರಿಂದ ನಿನ್ನೊಡನೆ ನಾನು ಇರಲಾರೆ'' ಎಂದು ಹೇಳಿ ಅವನು ಹೊರಟು ಹೋದನು.

ಆಗ ಅವಳು ಕಂಗೆಟ್ಟಳು. ದುಃಖದಿಂದ ಅವಳ ತಲೆಯೇ ಕೆಟ್ಟಿತು. ಅರಣ್ಯದಲ್ಲಿ ಜೀವನ ನಡೆಸುವುದೂ ಕಷ್ಟವಾಯಿತು. ಕೊನೆಗೆ ಹುಚ್ಚಿಯಂತೆ ಕಾಡಿನಲ್ಲಿ ಅಲೆದಾಡತೊಡಗಿದಳು. ಹಾಗೆ ತಿರುಗುತಿದ್ದಾಗ ಒಂದು ಹುಚ್ಚು ನರಿಯು ಅವಳ ಕಾಲನ್ನು ಕಚ್ಚಿತು. ಅವಳಿಗೂ ಹುಚ್ಚು ಹಿಡಿಯಿತು. ಮೈ ಮೇಲಿನ ಬಟ್ಟೆಬರೆಗಳನ್ನೆಲ್ಲ ತೆಗೆದೆಸೆದು ನಗ್ನಳಾಗಿ ವನದಲ್ಲಿ ಸಂಚರಿಸತೊಡಗಿದಳು. ಹೀಗಿರಲು ಅದೇ ಅರಣ್ಯಕ್ಕೆ ಮತ್ತೊಬ್ಬ ರಾಜಕುಮಾರನು ಬೇಟೆಗೆ ಬಂದಿದ್ದನು. ಅವನು ಈ ಹುಚ್ಚಿಯನ್ನು ಕಂಡು ಅವಳ ರೂಪಕ್ಕೆ ಸೋತು ತನ್ನ ನಗರಕ್ಕೆ ಕರೆದುಕೊಂಡು ಹೋದನು. ಯಾವ ಯಾವ ಔಷಧವನ್ನು ಮಾಡಿಸಿದರೂ ಅವಳ ರೋಗವು ಗುಣವಾಗಲಿಲ್ಲ. ಹುಚ್ಚಿಯಾದ ಅವಳು ಅನೇಕರನ್ನು ಕಚ್ಚಿದಳು. ಮತ್ತು ಕಾಲಾನುಭಾಗದಲ್ಲಿ ಅವರಿಗೂ ಹುಚ್ಚು ಹಿಡಿಯಿತು. ಇದು ರಾಜನಿಗೆ ತಿಳಿದ ಕೂಡಲೇ ಅವನು ಅವರೆಲ್ಲರನ್ನು ಹಿಡಿಸಿ ಶಿರಚ್ಛೇದನ ಮಾಡಿಸಿದನು.

ಹೀಗೆ ನೀನು ನನ್ನನ್ನು ಕೊಲ್ಲಬೇಡ. ನನ್ನನ್ನು ಕೊಂದರೆ ಅಲ್ಲಿಗೇ ಮುಗಿಯಲಿಲ್ಲ. ಪರಮಾತ್ಮನು ಮತ್ತೊಬ್ಬರಿಂದ ನಿನ್ನನ್ನು ಕೊಲ್ಲಿಸದೇ ಬಿಡಲಾರನು. ಆದುದರಿಂದ ಈ ದುಷ್ಕರ್ಮಕ್ಕೆ ಎಳಸಬೇಡ. ಮಾನವ ಜನ್ಮ ಎಲ್ಲಕ್ಕಿಂತಲೂ ದೊಡ್ಡದು. ನಿನಗೆ ಬೇಕಾದ ವಸ್ತ್ರ ಒಡವೆಗಳನ್ನು ನಾನು ಕೊಡುತ್ತೇನೆ" ಎಂದನು. ಆದರೆ ಆ ವೇಶ್ಯೆಗೆ ಉಗ್ರಸೇನನ ಮೇಲೆ ದಯ ಬರಲಿಲ್ಲ. ಆಗ ಅವಳು "ಈಗ ನಿನ್ನನ್ನು ನಾನು ಕೊಲ್ಲದೆ ಬಿಟ್ಟರೆ ಆ ಮೇಲೆ ನೀನು ನನ್ನ ಮೇಲೆ ಮುಯ್ಯಿ ತೀರಿಸಲಿಕ್ಕಿಲ್ಲವೇ? ಆದುದರಿಂದ ನಿನ್ನನ್ನು ಬಿಡಲಾರೆ'' ಎಂದಳು. ಅದನ್ನು ಕೇಳಿ ಉಗ್ರಸೇನನು "ನಾರೀಮಣಿಯೇ, ಸ್ತ್ರೀ ಹತ್ಯಾ ದೋಷವು ಬಹಳ ಕೆಟ್ಟದು. ಸತ್ಕುಲ ಪ್ರಸೂತನಾದ ನಾನು ಅಂತಹ ದುಷ್ಕಾರ್ಯವನ್ನು ಮಾಡಲಾರೆ. ಪ್ರತಿಜ್ಞೆ ಮಾಡಬೇಕೆಂದು ನೀನು ಹೇಳಿದರೆ ಅದನ್ನು ಮಾಡಲು ಸಿದ್ಧನಿದ್ದೇನೆ. ನಾನಿಷ್ಟು ಹೇಳಿದರೂ ನಿನ್ನ ಮನಸ್ಸು ಕರಗದೇ ಇದ್ದರೆ ಧರ್ಮದಾಸನ ಪತ್ನಿಯಂತೆ ನೀನು ಕೊನೆಗೆ ಪಶ್ಚಾತ್ತಾಪಪಡಬೇಕಾದೀತು'' ಎಂದು ಹೇಳಿದನು. ಆಗ ಆ ವೇಶ್ಯೆಯು ಆ ಕಥೆಯನ್ನು ಕೇಳಲು ಇಚ್ಛಿಸಿದುದರಿಂದ ಉಗ್ರಸೇನನು ಹೇಳುತ್ತಾನೆ.

## ೮. ಧರ್ಮದಾಸನ ಪತ್ನಿಯ ಕಥೆ

ಪ್ರಾಚೀನ ಕಾಲದಲ್ಲಿ ರತ್ನಾವಳಿ ಪಟ್ಟಣದಲ್ಲಿ ಧರ್ಮದಾಸನೆಂಬ ವ್ಯಾಪಾರಿಯೊಬ್ಬನಿದ್ದನು. ಅವನ ಹೆಂಡತಿ ಸಚ್ಚರಿತ್ರಳಲ್ಲ. ಯಾವಾಗಲೂ ಪರಪುರುಷರೊಡನೆ ಭೋಗಿಸುತ್ತಿದ್ದಳು. ತತ್ಪರಿಣಾಮವಾಗಿ ಅವಳಿಗೆ ಮಕ್ಕಳೇ ಆಗಲಿಲ್ಲ. ಮಕ್ಕಳಾಗಬೇಕೆಂದು ಧರ್ಮದಾಸನ ಆಶೆ. ಆದುದರಿಂದ ಅವನು ಅನೇಕ ತೀರ್ಥಕ್ಷೇತ್ರಗಳನ್ನು ಸಂದರ್ಶಿಸಿದನು. ಆದರೂ ಪರಿಣಾಮವಾಗಲಿಲ್ಲ. ಆದರಿಂದ ಅವನಿಗೆ ತುಂಬಾ ವ್ಯಸನವಾಯಿತು. ಒಂದು ದಿನ ಅವನು ಈ ರೀತಿ ಚಿಂತಾಕ್ರಾಂತನಾಗಿ ಕುಳಿತಿದ್ದಾಗ ಅವನ ಹೆಂಡತಿಯು ಬಂದು "ಇಲ್ಲಿಂದ ಹನ್ನೆರಡು ಮೈಲು ದೂರದಲ್ಲಿರುವ ಅರಣ್ಯದಲ್ಲಿ ಒಂದು ದೇವಿಯ ಗುಡಿಯಿದೆ. ಆ ದೇವಿಯ ದರ್ಶನ ಮಾಡಿ ಬಂದರೆ ಮಕ್ಕಳಾಗುತ್ತವೆಂದು ಹಿರಿಯರು ಹೇಳುತ್ತಿದ್ದಾರೆ. ಅದರಂತೆ ಹರಕೆಹೊತ್ತ

ಅನೇಕ ಸ್ತ್ರೀಯರಿಗೆ ಪುತ್ರ ಸಂತಾನವಾಗಿದೆ'' ಎಂದು ಹೇಳಿದಳು. ಈ ಮಾತಿಗೆ ಧರ್ಮಧಾಸನು ಒಪ್ಪಿದನು.

ಆ ಕೂಡಲೇ ಅವನ ಹೆಂಡತಿಯು ತನ್ನ ಪ್ರಿಯತಮನ ಮನೆಗೆ ಹೋಗಿ "ನಾವು ಇಷ್ಟರಲ್ಲೇ ದೇವೀ ದರ್ಶನಕ್ಕೆ ಹೊರಡುತ್ತೇವೆ. ಅದು ಕಾಡು ದಾರಿ. ನೀನು ಬಂದು ನನ್ನ ಗಂಡನನ್ನು ಕೊಲ್ಲು. ನಾನು ಬರುವಾಗ ಇದ್ದ ಎಲ್ಲ ಚಿನ್ನಾಭರಣಗಳನ್ನು ತೊಟ್ಟುಕೊಂಡು ಬರುತ್ತೇನೆ. ಆ ಮೇಲೆ ನಾನು ನಿನ್ನೊಡನೆ ಹೊರಟು ಬರುತ್ತೇನೆ. ಯಾವ ಪರಸ್ಥಳಕ್ಕಾದರೂ ತೆರಳಿ ನಾವು ಸುಖದಿಂದ ಇರೋಣ" ಎಂದು ಹೇಳಿದಳು. ಅವನು ಅದಕ್ಕೆ ಒಪ್ಪಿದನು. ಆದರಿಂದ ಅವಳಿಗೆ ತುಂಬಾ ಸಂತೋಷವಾಯಿತು. ಮನೆಗೆ ತಿರುಗಿ ಪ್ರಯಾಣಕ್ಕೆ ಬೇಕಾದ ಸಿದ್ಧತೆಗಳನ್ನು ಮಾಡತೊಡಗಿದಳು. ತನ್ನಲ್ಲಿದ್ದ ಎಲ್ಲ ಬೆಳ್ಳಿ ಬಂಗಾರಗಳನ್ನೆಲ್ಲ ಹಿಡಿದುಕೊಂಡಳು. ಬಿಸಿಲಿಗೆ ನಡೆದು ಅವಳಿಗೆ ಅಭ್ಯಾಸವಿಲ್ಲ. ಅಲ್ಲದೆ ಅದು ಕಾಡುದಾರಿ. ದಾರಿಯೂ ಕೊರಕಲು. ಮುಳ್ಳು ಕಲ್ಲುಗಳು ಬಿದ್ದಿದ್ದುವು. ಆದುದರಿಂದ ಅಲ್ಲಲ್ಲಿ ಅವಳು ತುಳಿದು ಬಿಡುತ್ತಿದ್ದಳು. ಒಮ್ಮೆ ಬಾಯಾರಿಕೆ ಆಗುತ್ತದೆಂದಳು. ಧರ್ಮದಾಸನು ಅವಳನ್ನು ಒಂದೆಡೆ ಕುಳ್ಳಿರಿಸಿ ತಾನು ನೀರನ್ನು ಹುಡುಕುತ್ತಾ ಹೋದನು ಮತ್ತು ನೀರನ್ನು ತಂದು ಅವಳಿಗೆ ಕುಡಿಯಲು ಕೊಟ್ಟನು. ಮಧ್ಯಾಹ್ನವಾದ ಕೂಡಲೇ ಇಬ್ಬರೂ ಫಲಾಹಾರ ಮಾಡಿದರು. ಆ ಮೇಲೆ ಮತ್ತೆ ಅವಳಿಗೆ ಬಾಯಾರಿಕೆಯಾಯಿತು: ಆ ನದಿಯ ಕಡೆಗೆ ಪತಿಯನ್ನು ಕರೆದುಕೊಂಡು ಹೋದಳು. ಅವನು ನದಿಯಲ್ಲಿ ಬಗ್ಗಿ ಬೊಗಸೆಗೈಗಳಿಂದ ನೀರನ್ನು ಕುಡಿಯ ತೊಡಗಿದಾಗ ಅವಳು ಹಿಂದಿನಿಂದ ಬಂದು ದೂಡಿದಳು. ಧರ್ಮದಾಸನು ಪ್ರವಾಹದಲ್ಲಿ ಬಿದ್ದುಬಿಟ್ಟನು. ಈಸುತ್ತ ದಡಕ್ಕೆ ಬರಲು ಯತ್ನಿಸಿದಾಗ ಅವಳು ಅಲ್ಲೇ ಇದ್ದ ಕಲ್ಲುಗಳಿಂದ ಅವನನ್ನು ಹೊಡೆದಳು. ಅವನು ನೀರಲ್ಲಿ ಮುಳುಗಿ ಪ್ರಾಣ ತೊರೆದನು.

ಅಷ್ಟರಲ್ಲಿ ಅವಳ ಉಪಪತಿಯು ಅಲ್ಲಿಗೆ ಬಂದನು. ಅವಳು ಅತ್ಯಂತ ಸಂತೋಷದಿಂದ ಅವನ ಬೆಂಬತ್ತಿದಳು. ಇಬ್ಬರೂ ನಗುತ್ತ ನಲಿಯುತ್ತ ಮುಂದೆ ಮುಂದೆ ಹೋಗುತ್ತಿದ್ದರು. ಸ್ವಲ್ಪ ಹೊತ್ತಾದಾಗ ಅವಳ ಅಣ್ಣನು ಇದಿರಾದನು. ಅವಳ ನಡೆ ನುಡಿ ಕಂಡು ಅವನಿಗೆ ಸಂದೇಹ ಹುಟ್ಟಿತು.

ಪತಿಯು ಸುದ್ದಿ ಕೇಳಿದಾಗ ಉತ್ತರ ಕೊಡಲೂ ಅವಳಿಂದಾಗ ಆಗಲಿಲ್ಲ. ಆಗ ಅವನು ರೇಗಿ ಇಬ್ಬರನ್ನೂ ಮರಕ್ಕೆ ಕಟ್ಟಿ ಹೊಡೆಯಲಾರಂಭಿಸಿದನು. ನೋವನ್ನು ಸಹಿಸಲಾರದೆ ಇಬ್ಬರೂ ಇದ್ದ ಸಂಗತಿಯನ್ನು ಬಿಚ್ಚಿದರು. ಆ ಕಥೆ ಕೇಳಿ ಅವನು ಇನ್ನಷ್ಟು ರೇಗಿ ಅವರಿಬ್ಬರನ್ನೂ ಕೊಂದನು."

ಅದರಂತೆ ಪ್ರಿಯೇ, ನೀನು ಕೂಡಾ ಈಗ ನನ್ನನ್ನು ಕೊಂದರೆ ನಿನ್ನ ಪ್ರಾಣಕ್ಕೂ ಗಂಡಾಂತರವಿದೆ. ಬೆಳಗಾದ ಮೇಲೆ ನನ್ನನ್ನು ಹುಡುಕಿಸುವರು. ನನ್ನನ್ನು ಮಂತ್ರಿಸುತನೇ ಇಲ್ಲಿ ಕಳಿಸಿದ. ಆದುದರಿಂದ ನಿನ್ನ ಮೇಲೆಯೇ ಸಂಶಯಬರುತ್ತದೆ. ನಿನ್ನನ್ನು ಅವರು ಕೊಲ್ಲದೆ ಬಿಡಲಾರರು. ಆ ಕಾರಣದಿಂದ ನನ್ನನ್ನು ಬಿಡು"ಎಂದನು. ಉಗ್ರಸೇನನ ಈ ಪ್ರಾಣಭಿಕ್ಷೆಯನ್ನು ಕೇಳಿ ಆ ವೇಶ್ಯೆಯು"ನನಗೆ ಮಂತ್ರಿಸುತನ ಹೆದರಿಕೆಯಿಲ್ಲ. ನಿನ್ನಂತಹ ಅನೇಕ ಶ್ರೀಮಂತರಾದ ತರುಣರನ್ನು ನಾನು ಕೊಂದಿದ್ದೇನೆ. ನನ್ನನ್ನು ಯಾರೂ ಏನೂ ಮಾಡಿಲ್ಲ"ಎಂದಳು. ಆಗ ಉಗ್ರಸೇನನು "ನಿನ್ನ ಹೃದಯದಲ್ಲಿ ದಯೆಯುಂಟಾಗುವಂತೆ ಇನ್ನೊಂದು ಕಥೆಯನ್ನು ಹೇಳುತ್ತೇನೆ. ಅದನ್ನು ಕೇಳಿ ಕರುಣೆಯಾದರೆ ಜೀವದಾನ ಮಾಡು. ಇಲ್ಲದಿದ್ದರೆ ಕೊಂದು ಬಿಡು'' ಎಂದು ಹೇಳಿದನು. ಅವಳು ಒಪ್ಪಿದುದರಿಂದ ಅವನು ಹೇಳತೊಡಗಿದನು.

## ೯. ಸೋಮಶೇಖರನ ಕಥೆ

ಪ್ರಾಚೀನ ಕಾಲದಲ್ಲಿ ಮಹಾಬಲಿ ಎಂಬ ನಗರದಲ್ಲಿ ಸೋಮಶೇಖರನೆಂಬ ಅರಸನಿದ್ದನು. ಅವನಿಗೆ ಬೇಟೆಯೆಂದರೆ ಬಹಳ ಪ್ರೀತಿ. ಯಾವಾಗಲೂ ತನ್ನ ಮಿತ್ರರನ್ನು, ಸೈನಿಕರನ್ನು ಕಟ್ಟಿಕೊಂಡು ಬೇಟೆಯಾಡಲು ತೆರಳುತಿದ್ದನು. ಅದರಂತೆ ಒಂದು ದಿನ ಅವನು ತನ್ನ ಪರಿವಾರದೊಂದಿಗೆ ಘೋರವಾದ ಒಂದು ಕಾಡಿಗೆ ತೆರಳಿದನು. ಅಲ್ಲೇ ಕೆಲವು ದಿನಗಳ ವರೆಗೆ ರಾಜ ಪರಿವಾರದವರು ಡೇರೆಯನ್ನು ಹೊಡೆದರು. ಬೇಟೆಯಾಡುತ್ತ ಒಂದು ದಿನ ಆ ರಾಜನು ತನ್ನ ಸಂಗಡಿಗರನ್ನು ಬಿಟ್ಟು ಬಹುದೂರ ಹೋದನು. ಅವನಿಗೂ ಇನ್ನಿತರರಿಗೂ ಸಂಬಂಧವೇ ಉಳಿಯಲಿಲ್ಲ. ರಾಜನು ಮುಂದೆ ಮುಂದೆ ಹೋದನು. ಕೊನೆಗೆ ಮಧ್ಯಾಹ್ನವಾಯಿತು. ಬಿಸಿಲಿನ ತಾಪವೂ

ಬಹಳವಾಯಿತು. ಅವನಿಗೆ ಬಾಯಾರಿಕೆಯನ್ನು ಸಹಿಸಲಾಗಲಿಲ್ಲ. ಬೇಟೆ ಯಾಡುವುದನ್ನು ಬಿಟ್ಟು ನೀರನ್ನು ಹುಡುಕಲು ತೊಡಗಿದನು.

ಸ್ವಲ್ಪ ದೂರದಲ್ಲಿ ನೀರು ತೊರೆಯಾಗಿ ಹರಿಯುತಿದ್ದುದು ಕಂಡಿತು. ಅದರ ಬಳಿಯಲ್ಲಿ ಒಂದು ವಟವೃಕ್ಷವೂ ಇದ್ದಿತು. ಶೇಖರನು ಆ ವಟವೃಕ್ಷದ ಎಲೆಗಳನ್ನೇ ಕಿತ್ತು ದೊನ್ನೆ ಮಾಡಿ ಅದರಿಂದ ನೀರನ್ನು ತುಂಬಿ ಕುಡಿಯಲು ಬಾಯಿಗೆ ಎತ್ತಿದ. ಅಷ್ಟರಲ್ಲಿ ಫಕ್ಕನೇ ಅವನು ಸಾಕಿದ್ದ ಅವನ ಹೆಗಲ ಮೇಲೆ ಕುಳಿತಿದ್ದ ಸಾಳ್ವ ಪಕ್ಷಿಯು ಹಾರಿ ರೆಕ್ಕೆಯಿಂದ ಬಡಿದು ಆ ದೊನ್ನೆ ಯನ್ನು ಕೆಳಗೆ ಉರುಳಿಸಿತು. ಅದನ್ನು ಕಂಡ ರಾಜನಿಗೆ ಬಹಳ ಕೋಪ ವೇರಿತು. ಅವನು ಆ ಪಕ್ಷಿಯನ್ನು ಬೈದನು. ಮತ್ತು ಪುನಃ ಆ ದೊನ್ನೆ ಯಿಂದ ನೀರನ್ನು ತುಂಬಿ ಕುಡಿಯುವುದರಲ್ಲಿದ್ದನು. ಆಗ ಆ ಪಕ್ಷಿಯು ಪುನಃ ಬಾಣದಂತೆ ಹಾರಿ ಬಂದು ಆ ದೊನ್ನೆಯನ್ನು ಕೆಡವಿತು. ಶೇಖರನಿಗೆ ಸಿಟ್ಟನ್ನು ತಡೆಯುವುದಾಗಲಿಲ್ಲ. ಆ ಪಕ್ಷಿಯನ್ನು ಒಂದು ಕಲ್ಲಿಗೆ ಬಡಿದು ಕೊಂದನು.

ಮೂರನೇ ಸಲ ಮತ್ತೆ ಶೇಖರನು ದೊನ್ನೆಯನ್ನು ತೆಗೆದು ನೀರನ್ನು ತುಂಬಿಸಿದನು. ಆದರೆ, ಆ ಪಕ್ಷಿಯು ಎರಡು ಸಲವೂ ದೊನ್ನೆಯನ್ನು ಉರು ಳಿಸಿತೇಕೆ ಎಂದು ಅವನು ವಿಚಾರ ಮಾಡತೊಡಗಿದನು. ದೊನ್ನೆಯನ್ನು ನೀರಿಗೆ ಮುಳುಗಿಸುತ್ತಿದ್ದಾಗ ಅತ್ತಿತ್ತ ತಲೆ ಎತ್ತಿನೋಡಿದನು. ಆಗ ಸ್ವಲ್ಪ ದೂರದಲ್ಲಿ ದೊಡ್ಡ ಹಾವೊಂದು ಬಿದ್ದುದು ಕಾಣಿಸಿತು. ಆದರ ತಲೆ ನೀರಿನ ತೊರೆಯ ಬಳಿ ಇದ್ದಿತು. ಅದರ ಬಾಯಿಂದ ನೊರೆಯು ನೀರಿನ ಮೇಲೆ ಬೀಳುತ್ತಿತ್ತು. ನೀರಿನ ಸೆಲೆ ಬಹಳ ಸಣ್ಣದು. ಅದುದರಿಂದ ಆ ನೀರೆಲ್ಲ ವಿಷ ಮಯವಾಗಿದ್ದಿತು. ಶೇಖರನು ಅದನ್ನು ಕುಡಿಯುತ್ತಿದ್ದರೆ ನಿಶ್ಚಯಃ ಗಿಯೂ ಬದುಕಿ ಉಳಿಯುತ್ತಿದ್ದಿಲ್ಲ. ಇದನ್ನು ಅರಿತ ಆ ರಾಜನಿಗೆ ಜ್ಞಾನೋ ದಯವಾಯಿತು. ಸಾಳ್ವಪಕ್ಷಿಯು ತನ್ನ ಪ್ರಾಣವನ್ನು ಉಳಿಸಿತೆಂದೂ ಅವನು ತಿಳಿದನು. ಅವಿಚಾರದಿಂದ ಆ ಪಕ್ಷಿಯನ್ನು ಕೊಂದುದಕ್ಕಾಗಿಯೂ ಅವನು ಪರಿತಪಿಸಿದನು ಆ ಪಕ್ಷಿಯ ಕಳೇಬರವನ್ನು ಎತ್ತಿಕೊಂಡು ಅದರ ಗುಣಗಾನ ಮಾಡುತ್ತ ಕಣ್ಣೀರು ಸುರಿಸಿದನು. ಆದರೆ ಆ ಪಕ್ಷಿಯ ಪ್ರಾಣವು ಬಂದೀತೇ?

ಅದರಂತೆ ಪ್ರಿಯೇ ನೀನೂ ನನ್ನನ್ನು ಕೊಲ್ಲಬೇಡ. ಕೊಂದಮೇಲೆ

ನಿನಗೂ ಪಶ್ಚಾತ್ತಾಪವಾದೀತು. ನನ್ನನ್ನು ಬಿಡು ನನ್ನ ಕೈಕಾಲುಗಳಿಗೆ ತೊಡಿಸಿದ ಹಗ್ಗಗಳನ್ನು ಬಿಚ್ಚು. ದೇವರು ನಿನ್ನನ್ನು ಸದಾ ಕಾಪಾಡುತ್ತಾನೆ. ಎಂದನು. ಆದರೆ ಆ ವೇಶ್ಯೆಗೆ ದಯೆಯುಂಟಾಗಲಿಲ್ಲ.

ಎಂದು ಮೋಹನದಾಸನು ಮೋಹಿನಿಗೆ ಹೇಳುತ್ತಿರುವಾಗಲೇ ರಾತ್ರಿಯ ಮೂರುಪ್ರಹರಗಳು ಕಳೆದುವು. ಅದನ್ನು ಕಂಡ ಮೋಹನದಾಸನು "ಮೋಹಿನೀ, ಬೆಳಗಾಗಲು ಇನ್ನು ಬಹಳ ತಡವಿಲ್ಲ. ನೀನು ಕೂಡಲೇ ನಿನ್ನ ಮನೆಗೆ ಹೊರಟು ಹೋಗು. ನಿನ್ನ ಕಾಮವಾಸನೆಯನ್ನು ಬಿಡು. ಸ್ವಂತ ಪುರುಷನೊಡನೆ ಬೇಕಾದ ಸುಖ ಸಂತೋಷವನ್ನು ಪಡೆ" ಎಂದು ಹೇಳಿದನು ಅದನ್ನು ಕೇಳಿ ಮೋಹಿನಿಯು "ವೈದ್ಯನೇ, ಈ ರಾತ್ರಿಯಲ್ಲಿ ನಾನು ಹೇಗೆ ಹೋಗಲಿ ? ಯಾರಾದರೂ ತಡೆದರೆ ನನ್ನ ನಿಜಸ್ವರೂಪವು ಅವರಿಗೆ ಗೊತ್ತಾಗದೇ ಇರಲಾರದು. ಆದರಿಂದ ನನ್ನ ಜೀವಕ್ಕೂ ಅಪಾಯವಿದೆ. ಅದುದರಿಂದ ನೀನು ಬಂದು ನನ್ನನ್ನು ಮನೆಯ ವರೆಗೆ ಮುಟ್ಟಿಸು"ಎಂದಳು. ಅದರಂತೆ ಮೋಹನದಾಸನು ಅವಳನ್ನು ಅವಳ ಮನೆಯ ವರೆಗೆ ಮುಟ್ಟಿಸಿ ನಿಶ್ಚಿಂತೆಯಿಂದ ಹಿಂತೆರಳಿದನು.

ಆದರೆ ಮರುದಿನ ಮಧ್ಯರಾತ್ರಿ ಮತ್ತೆ ಮೋಹಿನಿಯು ಪುರುಷ ವೇಷ ಧರಿಸಿ ಮೋಹನದಾಸನ ಮನೆಗೆ ಬಂದು ಅವನನ್ನು ಎಬ್ಬಿಸಿದಳು. ಅವಳನ್ನು ಪುನಃ ಕಂಡಕೂಡಲೇ ಅವನ ಎದೆ ಧಸಕ್ಕೆಂದಿತು. "ಮೋಹಿನೀ ನಿನ್ನೆ ನಾನು ನಿನ್ನನ್ನು ಮನೆಗೆ ಮುಟ್ಟಿಸಿ ಬಂದಿದ್ದೆ. ನಿನ್ನ ದುಷ್ಟ ಕಾಮವಾಸನೆ ಯನ್ನು ತ್ಯಜಿಸು ಎಂದು ನಾನಾ ಪರಿಯಾಗಿ ಬೋಧಿಸಿದೆ. ಆದರೆ ನಿನ್ನ ಮೇಲೆ ಯಾವ ಪರಿಣಾಮವೂ ಆದಂತೆ ಇಲ್ಲವಲ್ಲ! ನೀನು ಮತ್ತೇಕೆ ಬಂದೆ?" ಎಂದು ಹೌಹಾರಿ ಕೇಳಿದನು.

ಮೋಹಿನಿಯು "ವೈದ್ಯನೇ, ನೀನು ಹೇಳಿದ ಕಥೆಯು ಪೂರ್ಣವಾಗ ಲಿಲ್ಲ. ವೇಶ್ಯೆಯಿಂದ ಬಂಧಿತನಾದ ಆ ಉಗ್ರ ಸೇನನ ಗತಿಯೇನಾಯಿತು ? ಅದರಂತೆ ತನ್ನನ್ನು ತೊರೆದು ಹೋಗ ಬೇಡಿರೆಂದು ನಿಮ್ಮನ್ನು ಬಲಾತ್ಕರಿ ಸಿದ ಆ ಸುಶೀಲೆ ಏನಾದಳು ? ಅವಳ ಕೈಯಿಂದ ನೀವು ಹೇಗೆ ಪಾರಾಗಿ ಬಂದಿರಿ ? ಇವೆಲ್ಲವನ್ನು ತಿಳಿಯಲು ಕುತೂಹಲಳಾಗಿದ್ದೇನೆ." ಎಂದಳು.

ಆಗ ವೈದ್ಯನಾದ ಮೋಹನದಾಸನು ಹೇಳತೊಡಗಿದನು. ಮೋಹಿನೀ

ನಾನು ಸುಶೀಲೆಗೆ ಉಗ್ರಸೇನನ ಕಥೆಯನ್ನು ಹೇಳುತ್ತಿದ್ದೆನಷ್ಟೇ. ಆ ಉಗ್ರ ಸೇನನು ವೇಶ್ಯೆಯಿಂದ ಪಾರಾಗಲು ಅವಳಿಗೆ ನಾನಾ ಕಥೆಗಳನ್ನು ಹೇಳಿದರೂ ಅವಳ ಮನಸ್ಸು ಕರಗಲಿಲ್ಲ. ಕೊನೆಗೆ ಅವನು ಇನ್ನೊಂದು ಕಥೆಯನ್ನು ಹೇಳತೊಡಗಿದನು. ವೇಶ್ಯೆಯು ಅದನ್ನು ಕೇಳತೊಡಗಿದಳೆಂದು ನಾನು ಸುಶೀಲೆಗೆ ಹೇಳಿದೆ.

## ೧೦. ನಂಬಿಗೆಯ ನಾಯಿಯ ಕಥೆ

ವಿಜಯಪುರದಲ್ಲಿ ಧನದಾಸನೆಂಬ ಒಬ್ಬ ವ್ಯಾಪಾರಿಯಿದ್ದನು. ವ್ಯಾಪಾರದಲ್ಲಿ ಅವನಿಗೆ ಒಮ್ಮೆ ದೊಡ್ಡ ನಷ್ಟವಾಯಿತು. ಆತನ ಇದ್ದ ಆಸ್ತಿ ಪಾಸ್ತಿ ಸಂಪತ್ತು ಎಲ್ಲವೂ ಕೈಬಿಟ್ಟಿತು. ಅವನು ತೀರ ಬಡತನಕ್ಕಿಳಿವನು. ಊಟ ಮಾಡುವದೂ ಕಷ್ಟವಾಗಿ ಪರಿಣಮಿಸಿತು. ಸಂಪಾದನೆಯ ದಾರಿಯೇ ಅವನಿಗೆ ತೋರಲಿಲ್ಲ. ಅವನ ಬಳಿಯಲ್ಲಿ ಒಂದು ನಂಬಿಗೆಯ ನಾಯಿ ಮಾತ್ರ ಇತ್ತು. ಒಂದು ದಿನ ಅವನು ಆ ನಾಯಿಯನ್ನು ಕರೆದುಕೊಂಡು ಗೋಪಿನಾಥನೆಂಬ ತನ್ನ ಮಿತ್ರನ ಮನೆಗೆ ಹೋದನು. ಅವನ ಮಿತ್ರನು ಅವನನ್ನು ಆದರದಿಂದ ಸ್ವಾಗತಿಸಿ ಉಪಚರಿಸಿದನು. ಧನದಾಸನು ಯೋಗ ಕ್ಷೇಮ ಮಾತನಾಡುತ್ತ ಕೊನೆಗೆ "ಈಗ ನಾನು ತುಂಬಾ ಆರ್ಥಿಕ ದುಸ್ಥಿತಿಗೆ ಒಳಗಾಗಿದ್ದೇನೆ. ಈ ನಾಯಿಯನ್ನು ನೀನು ನಿನ್ನ ಹತ್ತಿರ ಇಟ್ಟುಕೋ. ಈಗ ನನಗೆ ಅದರ ಬದಲು ಒಂದು ಸಾವಿರ ರೂಪಾಯಿ ಸಾಲಕೊಡು. ಆ ಹಣವನ್ನು ಸಲ್ಲಿಸಿ ನಾನು ನನ್ನ ಈ ಪ್ರೀತಿಯ ನಾಯಿಯನ್ನು ಕರೆದ್ಯೊಯ್ಯುತ್ತೇನೆ'' ಎಂದನು. ಅದಕ್ಕೆ ಗೋಪೀನಾಥನು ಒಪ್ಪಿ ಅವನಿಗೆ ಒಂದು ಸಾವಿರ ರೂಪಾಯಿಗಳನ್ನು ಕೊಟ್ಟನು. ಮತ್ತು ಆ ನಾಯಿ ಅಲ್ಲೇ ಇರಹತ್ತಿತು.

ಗೋಪೀನಾಥನು ವ್ಯಾಪಾರಕ್ಕಾಗಿ ಒಮ್ಮೆ ವಿದೇಶಕ್ಕೆ ಹೋಗುವ ಅವಶ್ಯಕತೆ ಬಿತ್ತು. ಆಗ ಅವನು ತನ್ನ ಧರ್ಮಪತ್ನಿಯನ್ನು ಕರೆದು "ನೀನು ಎಲ್ಲಿಯೂ ಹೋಗಬೇಡ. ಈ ನಾಯಿಯನ್ನು ಬಹಳ ಪ್ರೀತಿಯಿಂದ ರಕ್ಷಿಸು" ಎಂದನು. ಅವಳು ಅದಕ್ಕೆ ಒಪ್ಪಿದಳು. ವಿದೇಶಕ್ಕೆ ತೆರ

ಳಿದ ಗೋಪೀನಾಥನು ಬಹಳ ಸಮಯದ ವರೆಗೆ ಹಿಂತಿರುಗಲಿಲ್ಲ. ಅವನ ಹೆಂಡತಿಗೆ ಕಾಮಬಾಧೆಯನ್ನು ತಡೆಯುವದಾಗಲಿಲ್ಲ. ಕೊನೆಗೆ ಅವಳು ಪರಪುರುಷನೊಡನೆ ಸಖ್ಯ ಬೆಳೆಸಿದಳು. ದಿನಂಪ್ರತಿ ಅವನನ್ನು ತನ್ನ ಮನೆಗೆ ಕರೆದುಕೊಂಡು ಬರುತ್ತಿದ್ದಳು ಮತ್ತು ಅವನೊಡನೆ ರತಿಸುಖವನ್ನು ಪಡೆಯುತ್ತಿದ್ದಳು. ಇದನ್ನು ಆ ನಾಯಿ ನೋಡುತ್ತಿತ್ತು ಮತ್ತು ಅವಳ ವರ್ತನೆ ಅದಕ್ಕೆ ಸರಿಬರುತ್ತಿರಲಿಲ್ಲವೋ ಏನೋ! ಅವನು ಮನೆಗೆ ಬಂದಕೂಡಲೇ ಅದು ಬೊಗಳುತ್ತಿತ್ತು. ಮೈಮೇಲೆ ಹಾರುವವರಂತೆ ಬರುತ್ತಿತ್ತು. ಒಂದು ದಿನ ಅವನ ಎದೆಯ ಮೇಲೆ ಹಾರಿ ಕುತ್ತಿಗೆಯನ್ನೇ ಕಡಿಯಿತು. ಅವನು ಪ್ರಾಣ ತೊರೆದನು.

ಇದರಿಂದ ಅವಳಿಗೆ ಸಿಟ್ಟು ಬಂದಿತು. ಅವಳು ಆ ನಾಯಿಯನ್ನು ಚನ್ನಾಗಿ ಹೊಡೆದಳು. ಸತ್ತ ತನ್ನ ಉಪಪತಿಯನ್ನು ಮನೆಯ ಹಿತ್ತಿಲಲ್ಲಿ ಹುಗಿಸಿದಳು. ಆ ನಾಯಿ ಮನೆಗೆ ಬಂದರೆ ಹೊಡೆಯಿರಿ ಎಂದು ಆಳುಗಳಿಗೆ ತಿಳಿಸಿದಳು. ಅದಕ್ಕೆ ಆಹಾರವನ್ನೂ ಹಾಕಲಿಲ್ಲ. ಹೀಗಾಗಿ ಅದು ಹಗಲು ಅವರ ಕಣ್ಣಿಗೆ ಬೀಳುತ್ತಿರಲಿಲ್ಲ. ರಾತ್ರಿ ಮಾತ್ರ ಬಂದು ಆ ಮನೆಯನ್ನು ಕಾಯುತ್ತಿತ್ತು. ಹೀಗೆ ಸ್ವಲ್ಪ ಕಾಲ ಕಳೆದ ಮೇಲೆ ಗೋಪೀನಾಥನು ಮನೆಗೆ ಬಂದನು ನಾಯಿಯು ದಾರಿಯಲ್ಲೇ ಅವನನ್ನು ಭೆಟ್ಟಿಯಾಯಿತು. ಅದು ನಿತ್ರಾಣವಾಗಿತ್ತು. ಅದರ ಹೀನಸ್ಥಿತಿಯನ್ನು ಕಂಡು ಗೋಪೀನಾಥನಿಗೆ ಬಹಳ ಕಳವಳವಾಯಿತು. ಮನೆಗೆ ಬಂದವನೇ ನಾಯಿಯು ಹಾಗಾಗಲು ಕಾರಣವೇನೆಂದು ಕೇಳಿದನು. ಆಗ ಅವಳು "ನೀವು ಹೋದಂದಿನಿಂದ ಈ ನಾಯಿಯು ಮನೆಯಲ್ಲೇ ಇರಲಿಲ್ಲ. ಈ ಹೊತ್ತೇ ಮನೆಗೆ ಬಂದಿದೆ. ನೆರೆಮನೆಗಳನ್ನೆಲ್ಲ ಹೊಕ್ಕು ತನ್ನ ಆಹಾರಗಳನ್ನು ತಿನ್ನುತ್ತಿತ್ತು. ಸಿಕ್ಕವರನ್ನು ಕಚ್ಚುತ್ತಿತ್ತು. ಎಲ್ಲರೂ ಅದರ ಬಗ್ಗೆ ಸಿಟ್ಟಾಗಿದ್ದರು ಮತ್ತು ದಿನಂಪ್ರತಿ ನನ್ನಲ್ಲಿ ಬಂದು ದೂರು ಹೇಳುತ್ತಿದ್ದರು. ಅದು ಒಳ್ಳೆಯ ನಾಯಿಯಲ್ಲ'' ಎಂದಳು.

ಅದನ್ನು ಕೇಳಿದ ಆ ನಾಯಿಯು ಯಜಮಾನನ ಧೋತರವನ್ನು ಹಿಡಿದು ಎಳೆಯ ತೊಡಗಿತು. ಅವನು ಅದು ಎಳೆದಂತೆ ಹೋದನು. ನಾಯಿಯು ಹಿತ್ತಲ ಬದಿಗೆ ತೆರಳಿ ಅಲ್ಲಿ ಕಾಲುಗಳಿಂದ ಮಣ್ಣನ್ನು ಕೆರೆಯ

ತೊಡಗಿತು. ಯಜಮಾನನು ಸಂದೇಹದಿಂದ ಅಲ್ಲಿ ಮಣ್ಣನ್ನು ಅಗೆಸಿದನು. ಆಗ ಕೊಳೆತ ಶವವು ಅವನ ಕಣ್ಣಿಗೆ ಬಿದ್ದಿತು. ಅದರಿಂದ ಅವನ ಸಂಶಯವು ಬಲಿಯಿತು. ಅವನು ತನ್ನ ಆಳುಗಳನ್ನೂ ಹೆಂಡತಿಯನ್ನೂ ಹೊಡೆಯ ತೊಡಗಿದನು. ಅವರು ನೋವನ್ನು ಸಹಿಸಲಾರದೆ ಇದ್ದ ಸಂಗತಿಯನ್ನು ಒಪ್ಪಿಕೊಂಡರು. ಅದರಿಂದ ಆ ವ್ಯಾಪಾರಿಯು ರೇಗಿ ತನ್ನ ಹೆಂಡತಿಯನ್ನು ಕೊಲ್ಲಿಸಿದನು ಮತ್ತು ಆ ನಾಯಿ ಮೇಲೆ ಬಹಳ ಮಮತೆಯುಂಟಾಯಿತು. ನಾಯಿಯ ಯಜಮಾನನ ಸಾಲ ಮುಟ್ಟಿತು ಎಂದು ಹೇಳಿ ಒಂದು ಚೀಟಿಯನ್ನು ಬರೆದು ಅದರ ಕೊರಳಿಗೆ ಕಟ್ಟಿ "ಇನ್ನು ನೀನು ನಿನ್ನ ಮನೆಗೆ ಹೋಗು" ಎಂದು ಹೇಳಿದನು. ಅದು ಸಂತೋಷದಿಂದ ತನ್ನ ಮನೆಯ ದಾರಿ ಹಿಡಿಯಿತು.

ಆದರೆ ಅದೇ ದಿನ ಅದರ ಯಜಮಾನನಾದ ಧನದಾಸನು ಸಾಲದ ಹಣವನ್ನು ಹಿಡಿದುಕೊಂಡು ತನ್ನ ಮಿತ್ರನಾದ ಗೋಪೀನಾಥನ ಮನೆಗೆ ಬರುತ್ತಿದನು. ದಾರಿಯಲ್ಲಿ ತನ್ನ ನಾಯಿಯನ್ನು ಕಂಡು ಅವನಿಗೆ ಸಿಟ್ಟು ಬಂದಿತು. ಸಾಲದ ಹಣವನ್ನು ತಿಳಿಸದೆ ಬಂದುದರಿಂದ ಅವನ ಕೋಪವನ್ನು ಹೇಳಲಳವಲ್ಲ. ನಾಯಿ ತನ್ನ ಮಾನವನ್ನು ಕಳೆಯಿತು ಎಂದು ಕೋಪೋದ್ರೇಕದಿಂದ ಒಂದು ಕಲ್ಲನ್ನು ಎತ್ತಿ ಅದರ ತಲೆಯ ಮೇಲೆ ಎಸೆದು ಕೊಂದನು. ಆಗ ಅದರ ಕೊರಳಲ್ಲಿ ಕಟ್ಟಿದ್ದ ಚೀಟಿಯು ಅವನ ದೃಷ್ಟಿಗೆ ಬಿದ್ದಿತು. ಅದನ್ನು ಬಿಚ್ಚಿ ನೋಡಲು ಅವನಿಗೆ ನಾಯಿ ಬಂದ ನಿಜಕಾರಣವು ತಿಳಿಯಿತು. ತಾನು ಮಾಡಿದ ಅನ್ಯಾಯವನ್ನು ಕಂಡು ಅವನು ದುಃಖಿಸ ತೊಡಗಿದನು.

ಅದೇ ರೀತಿ ನೀನಾದರೂ ಈಗ ನನ್ನನ್ನು ಕೊಂದರೆ ಮುಂದೆ ಪಶ್ಚಾತ್ತಾಪ ಪಡದೆ ಇರುವವಳಲ್ಲ. ಆದರೆ ನಾನು ಸತ್ತ ಮೇಲೆ ದುಃಖಿಸಿ ಫಲವಿಲ್ಲ. ಆದುದರಿಂದ ಈಗಲೇ ಸುಮತಿಯುಳ್ಳವಳಾಗು ಮತ್ತು ನನ್ನನ್ನು ನೀನು ಕೊಲ್ಲಬೇಡ. ಕೃಪೆದೋರು" ಎಂದನು. ಆದರೂ ಆ ವೇಶ್ಯೆಯ ಹೃದಯ ಕರಗಲಿಲ್ಲ. ಅದನ್ನು ಕಂಡು ಉಗ್ರಸೇನನು ಅವಳಿಗೆ ಗಿಳಿಯ ಕಥೆಯನ್ನು ಹೇಳಿದನು.

## ೧೧. ಗಿಳಿಯ ಕಥೆ

ಪ್ರಾಚೀನ ಕಾಲದಲ್ಲಿ ರಾಜಗಿರಿ ನಗರದಲ್ಲಿ ಭೂಪಾಲನೆಂಬ ದೊರೆಯಿದ್ದನು. ಅವನು ಒಂದು ಶ್ರೇಷ್ಠ ಗಿಳಿಯನ್ನು ಸಾಕಿದ್ದನು. ಅದು ಕಲಿಸಿದ ಮಾತುಗಳನ್ನಷ್ಟೇ ಅಲ್ಲ, ಇನ್ನಿತರ ಮಾತುಗಳನ್ನೂ ಆಡುತ್ತಿತ್ತು. ಸ್ವಕಪೋಲ ಕಲ್ಪಿತ ಕಥೆಗಳನ್ನು ಹೇಳುತ್ತಿತ್ತು. ಅದರ ಬಾಯಿಂದ ಕಥೆಗಳನ್ನು ಕೇಳುವುದೆಂದರೆ ರಾಜನಿಗೆ ಬಹಳ ಇಷ್ಟ. ಯಾವಾಗಲೂ ಮನಸ್ಸಿಗೆ ಬೇಸರವೆನಿಸಿದಾಗ ಅದೇ ಗಿಳಿಯು ಸರಸವಾದ ಕತೆಗಳನ್ನು ಹೇಳಿ ಅವನ ಮನಸ್ಸನ್ನು ಸಂತೋಷಗೊಳಿಸುತ್ತಿತ್ತು.

ಹೀಗಿರುತ್ತಿರಲು, ಒಂದು ದಿನ ಗಿಳಿಗಳ ಒಂದು ದೊಡ್ಡ ಬಳಗ ಅರಮನೆಯ ಉದ್ಯಾವನದಲ್ಲಿ ಬಂದಿಳಿದುವು. ಮರಗಳು ಅರಮನೆಗೆ ತೀರ ಸಮೀಪವಿದ್ದುವು. ಕೆಲವು ರೆಂಬೆಗಳು ಅರಮನೆಯ ಕೋಣೆಗಳ ಗೋಡೆಗಳ ವರೆಗೂ ನೀಡಿದ್ದವು. ಆದುದರಿಂದ ರಾಜಗಿಳಿಗೆ ಆ ಕಾಡುಗಿಳಿಗಳೊಡನೆ ಮಾತನಾಡಲು ಸಾಧ್ಯವಾಯ್ತು. ತಾವು ಒಂದು ರಾಜ್ಯಕ್ಕೆ ಪ್ರಯಾಣ ಬೆಳಿಸುತ್ತಿದ್ದೇವೆಂದೂ ಅಲ್ಲಿ ದೊಡ್ಡ ಮದುವೆ ಸಮಾರಂಭ ನಡೆಯುತ್ತಿದೆಯೆಂದೂ ಅವು ಹೇಳಿದವು ಮತ್ತು ರಾಜಗಿಳಿಗೂ ಬರಲು ಆಮಂತ್ರಣ ಕೊಟ್ಟವು. ಅದನ್ನು ಕೇಳಿ ಈ ರಾಜಗಿಳಿಗೂ ಆ ಮದುವೆಗೆ ತೆರಳಲು ಆಸೆಯಾಯಿತು. ಆದುದರಿಂದ ಅದು ಆದಿನ ಅತಿ ಸುರಸವಾದ ಒಂದು ಕಥೆಯನ್ನು ರಾಜನಿಗೆ ಒರೆದು, ತನ್ನ ಮನೋಭಿಲಾಷೆಯನ್ನು ತಿಳಿಸಿತು. ಆ ಮೇಲೆ ಅದು ಎರಡು ತಿಂಗಳುಗಳ ರಜೆಯನ್ನು ಪಡೆದುಕೊಂಡು ಆ ಗಿಳಿಗಳೊಂದಿಗೆ ಬೇರೆ ರಾಜ್ಯಕ್ಕೆ ಹಾರಿಹೋಯಿತು.

ಆ ರಾಜ್ಯದಿಂದ ಮರಳಿ ಬಂದಾಗ ಆ ರಾಜಗಿಳಿಯು ರಾಜನಿಗಾಗಿ ಒಂದು ಶ್ರೇಷ್ಠವಾದ ಮಾವಿನಹಣ್ಣನ್ನು ತಂದಿತು. "ಮಹಾರಾಜ, ಅತಿ ಕಷ್ಟದಿಂದ ಇದನ್ನು ನಾನು ತಂದಿದ್ದೇನೆ. ಇದನ್ನು ತಿಂದರೆ ದಿವ್ಯದೇಹಿಗಳಾಗುತ್ತಾರೆ. ದೇಹದ ರೋಗಗಳೆಲ್ಲ ನಿವಾರಣೆ ಹೊಂದುವವು. ಇದರಷ್ಟು ರುಚಿಕರವಾದ ಹಣ್ಣು ಇನ್ನೊಂದಿಲ್ಲ'' ಎಂದಿತು. ರಾಜನು ಅದ

ಕ್ಕೊಪ್ಪಿ ಅದನ್ನು ತೆಗೆದುಕೊಂಡು ಹೋದನು ಮತ್ತು ಒಂದು ಕಿಡಿಕಿಯ ಬಳಿ ಇಟ್ಟನು. ಅದನ್ನು ತಿನ್ನಲು ಮರೆತನು. ರಾತ್ರಿ ಗೋಡೆಯ ಮೇಲೆ ಸುಳಿಯುತ್ತಿದ್ದ ಒಂದು ವಿಷಹಾವು ಆ ಹಣ್ಣನ್ನು ಕಚ್ಚಿತು. ಆದರೆ ಯಾರೂ ಅದನ್ನು ನೋಡಲಿಲ್ಲ.

ಮುಂಜಾನೆ ರಾಜನಿಗೆ ಆ ಹಣ್ಣಿನ ನೆನಪಾಯಿತು. ಅವನು ಅದನ್ನು ತರಿಸಿ ಕೊಯ್ಸಿದನು. ತಾನು ತಿನ್ನುವ ಮೊದಲು ಒಂದು ತುಂಡನ್ನು ಸೇವಕನಿಗೆ ಕೊಟ್ಟನು. ಅವನು ಅದನ್ನು ತಿಂದ ಕೂಡಲೇ ವಿಷವೇರಿ ಮರಣ ಹೊಂದಿದದು. ಇದನ್ನು ಕಂಡ ಅರಸನಿಗೆ ಕೋಪವುಕ್ಕಿತು. ಆ ವಿಷದ ಹಣ್ಣನ್ನು ತಂದ ಗಿಳಿಯ ಮೇಲೆ ಅದು ಹಾಯ್ದಿತು. ತನ್ನನ್ನು ಕೊಲ್ಲುವ ಉದ್ದೇಶದಿಂದಲೇ ಈ ಗಿಳಿ ಅದನ್ನು ತಂದಿರಬೇಕೆಂದು ಅವನು ಊಹಿಸಿದನು. ಅಂತಹ ಗಿಳಿಗೆ ಶಿಕ್ಷೆ ಕೊಡದೆ ಬಿಡತಕ್ಕದ್ದಲ್ಲವೆಂದು ಭಾವಿಸಿ ಅದನ್ನು ನೆಲಕ್ಕೆ ಅಪ್ಪಳಿಸಿ ಕೊಂದನು. ಆ ಹಣ್ಣನ್ನು ಒಂದು ತಗ್ಗಿನಲ್ಲಿ ಹುಗಿಸಿದನು.

ಮಳೆಗಾಲ ಬಂದ ಕೂಡಲೇ ಆ ಮಾವಿನ ಹಣ್ಣಿನಲ್ಲಿದ್ದ ಬೀಜವು ಮೊಳಿಕೆ ಒಡೆಯಿತು. ಸಣ್ಣ ಸಸಿ ಹುಟ್ಟಿತು. ವರುಷಗಳು ಕಳೆದಂತೆ ಗಿಡವು ದೊಡ್ಡದಾಗುತ್ತ ಬಂದಿತು. ಕೆಲವು ವರುಷಗಳಾದ ಮೇಲೆ ಅದು ಫಲ ಬಿಟ್ಟಿತು. ಆದರೆ ಅದು ವಿಷವೃಕ್ಷವೆಂದು ಎಲ್ಲರ ಭಾವನೆ. ಆದುದರಿಂದ ಯಾರೂ ಅದರ ಫಲವನ್ನು ಕೊಯ್ದು ತಿನ್ನುತ್ತಿದ್ದಿಲ್ಲ. ಅದರ ಸಮೀಪ ತೆರ ಳಲೂ ಹೆದರುತ್ತಿದ್ದರು. ಅದರ ಹಣ್ಣನ್ನು ತಿಂದರೆ ತಕ್ಷಣ ಮರಣ ಹೊಂದು ವುದಾಗಿಯೂ ಜನರು ನಂಬಿದ್ದರು.

ಒಂದು ದಿನ ಜೀವದ ಮೇಲೆ ಬೇಸರ ಬಂದ ವೃದ್ಧ ಅಗಸನೊಬ್ಬನು ಆ ಮರದಡಿ ಬಂದನು. ತಂದೆ ಮಕ್ಕಳ ಜಗಳದಿಂದ ಅವನಿಗೆ ಜೀವದ ಮೇಲೆ ಜಿಗುಪ್ಸೆ ಹುಟ್ಟಿತು. ಹೇಗಾದರೂ ಮಾಡಿ ಪ್ರಾಣ ನೀಗಬೇಕೆಂದು ಅವನು ಬಯಸಿದನು. ಆದುದರಿಂದ ಆ ಮರದ ಫಲವನ್ನು ಕೊಯ್ದು ತಿಂದನು. ಆದರೆ ಅವನು ಸಾಯಲಿಲ್ಲ. ಅವನ ದೇಹದಲ್ಲಿದ್ದ ಅನೇಕ ರೋಗಗಳು ಪರಿಹಾರವಾದವು ಇದರಿಂದ ಸಂತೋಷಗೊಂಡ ಅವನು ಮನೆಗೆ ಓಡಿ ಬಂದು ಈ ಸುದ್ದಿಯನ್ನು ಮಕ್ಕಳಿಗೆ ತಿಳಿಸಿದನು. ಅವರೂ ಬಂದು

ಒಂದೊಂದು ಫಲವನ್ನು ತಿಂದರು ಅವರೂ ದಿವ್ಯದೇಹಧಾರಿಗಳಾದರು. ಈ ವಿಚಿತ್ರವಾದ ಸುದ್ದಿ ರಾಜನ ಕಿವಿಗೂ ಮುಟ್ಟಿತು.

ಆಗ ಆ ಭೂಪಾಲ ರಾಜನು ಆ ಹಣ್ಣುಗಳನ್ನು ತರಿಸಿದನು. ಒಂದನ್ನು ತನ್ನ ಸೇವಕನಿಗೆ ತಿನ್ನಲು ಕೊಟ್ಟನು. ಅದನ್ನು ತಿಂದ ಕೂಡಲೇ ಆ ವೃದ್ಧನು ದಿವ್ಯದೇಹಧಾರಿಯಾದನು. ಆಗ ಆ ರಾಜನಿಗೆ ತಾನು ಕೊಂದ ಗಿಳಿಯ ಸ್ಮರಣೆಯಾಯಿತು. ನಿರಪರಾಧಿಯಾದ ಆ ಗಿಳಿಯನ್ನು ಕೊಂದೆ ನಲ್ಲಾ ಎಂದವನು ಹಂಬಲಿಸಿದನು.

ಇದನ್ನು ಹೇಳಿ ಉಗ್ರಸೇನನು "ಅದರಂತೆ ನೀನೂ ಈಗ ನನ್ನನ್ನು ಕೊಲ್ಲಬೇಡ. ಜೀವವನ್ನು ರಕ್ಷಿಸು'' ಎಂದನು. ಆದರೆ ಆ ವೇಶ್ಯೆಯ ಕಲ್ಲುಹೃದಯ ಕರಗಲಿಲ್ಲ. ಅವಳು "ಉಗ್ರಸೇನ ನಾನು ವಾರಾಂಗನೆ. ದಯೆ ದಾಕ್ಷಿಣ್ಯವಿಲ್ಲದೆ ಪುರುಷರ ಧನಕನಕ ಕೊನೆಗೆ ಪ್ರಾಣವನ್ನೇ ಹೀರು ವವಳು. ಆದುದರಿಂದ ನಿನ್ನ ಮೇಲೆ ಹೇಗೆ ದಯಯುಂಟಾದೀತು ಹೇಳು" ಎಂದು ನುಡಿದಳು. ಉಗ್ರಸೇನನು ಅದರಿಂದಲೂ ಅಧೀರನಾಗದೆ "ಹಾಗಾ ದರೆ ಮಾಣಿಕಚಂದನ ಕಥೆ ಹೇಳುತ್ತೇನೆ. ಕೇಳು. ಆ ಮೇಲಾದರೂ ದಯ ದೋರಿದರೆ ನನ್ನನ್ನು ಕೊಲ್ಲದೆ ಬಿಟ್ಟು ಬಿಡು'' ಎಂದನು.

## ೧೨. ಮಾಣಿಕಚಂದನ ಕಥೆ

ಹಿಂದೆ ಪಾಟಲೀಪುರದಲ್ಲಿ ವಿಕ್ರಮನೆಂಬ ರಾಜನಿದ್ದನು. ಅವನ ಮಗನು. ಈ ರಾಜಪುತ್ರನಿಗೆ ನಗರದ ಶ್ರೀಮಂತನೊಬ್ಬನ ಪುತ್ರನಾದ ಮಾಣಿಚಂದ ನೊಡನೆ ಅತ್ಯಂತ ಸ್ನೇಹವಿದ್ದಿತು. ಬಾಲ್ಯದಿಂದಲೂ ಅವರಿಬ್ಬರು ಗೆಳೆಯರು. ಆದುದರಿಂದ ಇಬ್ಬರೂ ನಿಕಟದ ಮಿತ್ರರಾಗಿದ್ದರು. ಹೀಗಿರುತ್ತಿರಲು ವಿಕ್ರಮನು ಕಾಲವಾದನು. ಆದಿತ್ಯನಿಗೆ ಪಟ್ಟವು ದೊರೆಯಿತು. ಆ ಮೇಲೆ ಕೆಲವು ವರುಷಗಳ ಮೇಲೆ ಪ್ರಧಾನ ಮಂತ್ರಿಯೂ ತೀರಿಕೊಂಡನು. ಮುಖ್ಯ ಮಂತ್ರಿಯ ಮಗನಿಗೇ ಆ ಸ್ಥಾನಸಲ್ಲಬೇಕೆಂಬ ನಿಯಮವಿತ್ತು. ಆದರೆ ಆ ಮುಖ್ಯ ಮಂತ್ರಿಯ ಮಗನು ಅಷ್ಟು ಯೋಗ್ಯತೆಯುಳ್ಳವನಾಗಿದ್ದಿರಲಿಲ್ಲ. ಬೇರೊಬ್ಬ ಪ್ರಧಾನ ಮಂತ್ರಿಯನ್ನು ನೇಮಿಸಿಕೊಳ್ಳದೆ ಗತ್ಯಂತರವಿರಲಿಲ್ಲ.

ಆಗ ಆದಿತ್ಯನು ತನ್ನ ಮಿತ್ರನಾದ ಮಾಣಿಕಚಂದನನ್ನು ಕರೆಸಿ, "ಮಿತ್ರಾ, ನಾವಿರ್ವರೂ ಬಾಲ್ಯ ಸ್ನೇಹಿತರು. ಆದುದರಿಂದ ನಿನ್ನನ್ನು ಪ್ರಧಾನ ಮಂತ್ರಿಯನ್ನಾಗಿ ನೇಮಿಸಬೇಕೆಂಬ ವಿಚಾರ ಬಂದಿದೆ. ನೀನೂ ನಾನೂ ಒಟ್ಟಿಗಿದ್ದಂತೆಯೇ ಆಯಿತು. ಇಬ್ಬರೂ ಕೂಡಿ ದೇಶವನ್ನು ಆಳೋಣ" ಎಂದು ನುಡಿದನು.

ಆದರೆ ಮಾಣಿಕಚಂದನಿಗೆ ಅದು ಇಷ್ಟವಿರಲಿಲ್ಲ. ಅವನು "ಸ್ವಾಮಿ, ನನಗೆ ರಾಜ್ಯವಾಳುವ ಅನುಭವವಿಲ್ಲ. ವ್ಯಾಪಾರವೇ ನನ್ನ ಕುಲಕಸುಬು. ಇದರಲ್ಲಿ ನನಗೆ ಲಾಭವೂ ದೊರೆಯುತ್ತಿದೆ. ಸುಖಸಂತೋಷದಿಂದ ಇದ್ದೇನೆ. ಈಗ ಈ ಅಧಿಕಾರವನ್ನು ವಹಿಸಲು ನೀವು ಹೇಳುತಿದ್ದೀರಿ. ಆದರೆ ಅದು ಅತಿ ಕಠಿನ ಕೆಲಸ. ಕೆಲಸದಲ್ಲಿ ನನ್ನಿಂದ ಏನಾದರೂ ತಪ್ಪಾದರೆ ನೀವು ಕೋಪಿಸಿಕೊಳ್ಳಬಹುದು. ನನ್ನ ಪ್ರಾಣಕ್ಕೂ ಗಂಡಾಂತರ ಬಂದೀತು" ಎಂದನು. ಅದನ್ನು ಕೇಳಿ ಆದಿತ್ಯನು "ಮಿತ್ರಾ, ನೀನು ಇದಕ್ಕಾಗಿ ಚಿಂತೆ ಮಾಡಬೇಡ. ನಾನು ಬುದ್ಧಿವಂತರನ್ನೇ ಅಧಿಕಾರಿಗಳನ್ನಾಗಿ ನೇಮಿಸಿಕೊಂಡಿದ್ದೇನೆ. ಈಗ ನೀನೂ ಬಂದು ನೆರವಾದರೆ ಸಂತೋಷವಾಗುತ್ತದೆ" ಎಂದನು.

ಅರಸನ ಒತ್ತಾಯಕ್ಕೆ ಒಳಗಾಗಿ ಮಾಣಿಕಚಂದನು ಅಮಾತ್ಯನಾದನು. ಧರ್ಮದಿಂದ ರಾಜ್ಯಪಾಲನೆ ಮಾಡತೊಡಗಿದನು. ಅದರಿಂದ ಅರಸನಿಗೆ ಬಹಳ ಸಂತೋಷವಾಯಿತು. ಆದರೆ ಆ ಸ್ಥಾನದಲ್ಲಿದ್ದ ಇನ್ನಿತರ ಅಧಿಕಾರಿಗಳಿಗೆ ಮಾಣಿಕಚಂದನ ಮೇಲೆ ಅಸೂಯೆಯುಂಟಾಯಿತು. ಅದು ಕೊನೆಗೆ ದ್ವೇಷಕ್ಕೂ ಅವಕಾಶ ಕೊಟ್ಟಿತು. ಸರದಾರರೆಲ್ಲರೂ ಒಂದೆಡೆ ಗುಪ್ತ ಸಭೆ ಕೂಡಿಸ ಅವನನ್ನು ರಾಜ್ಯದಿಂದ ಓಡಿಸಲು ಇಲ್ಲವೇ ಕೊಲ್ಲಲು ಹಂಚಿಕೆ ಹೂಡಿದರು. ಮತ್ತು ಒಂದು ದಿನ ರಾಜನಿಗೆ ಅತಿ ಸುಂದರಿಯಾದ ತರುಣಿಯ ಚಿತ್ರವೊಂದನ್ನು ತೋರಿಸಿದರು. ಅವಳು ಸಿಂಹಳದ ರಾಜಪುತ್ರಿಯೆಂದೂ ರಾಜನಿಗೆ ಯೋಗ್ಯಳಾದ ರಾಣಿಯಾಗುವುದರಲ್ಲಿ ಸಂದೇಹವಿಲ್ಲವೆಂದೂ ತಿಳಿಸಿದರು.

ರಾಜನು ಒಪ್ಪಿ ಸಭೆಯಲ್ಲಿ ಈ ಪ್ರಸ್ತಾಪವನ್ನು ತೆಗೆದನು. ಸಿಂಹಳ ದ್ವೀಪಕ್ಕೆ ತೆರಳಿ ಕನ್ಯೆಯನ್ನು ನಿಶ್ಚಯಿಸಿಕೊಂಡು ಬಂದವರಿಗೆ ಅಪಾರ

ಉಡುಗೊರೆಗಳನ್ನು ಕೊಡುವುದಾಗಿ ನುಡಿದನು. ಆದರೆ ಈ ರಾಜಕಾರ್ಯವನ್ನು ಮಾಡಲು ಒಬ್ಬರೂ ಮುಂದೆ ಬರಲಿಲ್ಲ. ಏಕೆಂದರೆ ಸಿಂಹಳಕ್ಕೆ ಕನ್ಯಾರ್ಥಿ ಯಾಗಿ ತೆರಳಿದವರು ಒಬ್ಬರೂ ಮರಳುವಂತಿರಲಿಲ್ಲ. ಬಂದವರನ್ನು ಅಂತಃ ಪುರಕ್ಕೆ ಕಳಿಸುತಿದ್ದರು. ರಾಜಪುತ್ರಿಯು ಅವರನ್ನು ಸ್ವಾಗತಿಸಿ ಒಂದು ಎಲೆ ಅಡಿಕೆಯ ಡಬ್ಬಿಯನ್ನು ಅವರ ಮುಂದೆ ಇಡುತಿದ್ದಳು. ಅದರಂತೆ ಅವರು ಎಲೆ ಅಡಿಕೆ ಡಬ್ಬಿಯ ಮುಚ್ಚಳ ತೆಗೆದ ಕೂಡಲೇ ಅದರೊಳಗಿನಿಂದ ವಿಷದ ಗಾಳಿ ಬೀಸಿ ಅವರ ಕಣ್ಣುಗಳು ಕುರುಡಾಗುತಿದ್ದುವು. ಆ ಕಾರಣ ದಿಂದ ಒಬ್ಬರೂ ಮುಂದೆ ಬರಲಿಲ್ಲ. ಇದನ್ನು ಕಂಡ ರಾಜನಿಗೆ ಚಿಂತೆಯಾ ಯಿತು. ಆಗ ಮಾಣಿಕಚಂದನನ್ನು ಕಳಿಸಿ ಕೊಡಬೇಕೆಂದು ಅನೇಕರು ರಾಜನಿಗೆ ಬೋಧಿಸಿದುದರಿಂದ ಅವನು ಆ ಕಾರ್ಯವನ್ನು ಅವನಿಗೇ ಒಪ್ಪಿಸಿ ದನು. ಈ ಕಾರ್ಯದಲ್ಲಿ ತನಗೆ ಪ್ರಾಣಾಪತ್ತು ನಿಶ್ಚಯವೆಂದು ಪ್ರಧಾನ ಮಂತ್ರಿಗೆ ತಿಳಿಯದೇ ಇರಲಿಲ್ಲ. ಆದರೂ ರಾಜಾಜ್ಞೆಯನ್ನು ಮೀರಲಾಗದೇ ಅವನು ಸಿಂಹಳ ದ್ವೀಪಕ್ಕೆ ಹೊರಟು ಹೋದನು.

ಸಿಂಹಳದ ರಾಜನನ್ನು ಕಂಡು ಅವನಿಗೆ ಅಮೂಲ್ಯವಾದ ಉಡುಗೊರೆ ಅರ್ಪಿಸಿದನು. ಬಂದ ಕಾರಣವೇನೆಂದು ರಾಜನು ಕೇಳಲು "ಅದು ತಮಗೆ ತಿಳಿಯದ ವಿಷಯವಲ್ಲ" ಎಂದು ಉತ್ತರವಿತ್ತನು. ಅವನು ಕನ್ಯಾರ್ಥಿಯಾ ಗಿಯೇ ಬಂದಿರುವನೆಂದು ರಾಜನು ಅರಿತು ಮರುದಿನ ರಾಜಪುತ್ರಿಯ ಭೆಟ್ಟಿ ಮಾಡಿಸುತ್ತೇನೆಂದು ಅಪ್ಪಣೆಕೊಟ್ಟನು. ಮಾಣಿಕಚಂದನು ಹೊರಟು ಹೋದ ಮೇಲೆ ರಾಜನು ತನ್ನ ಮಗಳಿದ್ದಲ್ಲಿ ತೆರಳಿ "ಮಗಳೇ, ಪಾಟಲಿ ಪುರದ ರಾಜನ ಅಮಾತ್ಯನು ನಮ್ಮ ಆ ಸ್ಥಾನಕ್ಕೆ ಬಂದಿದ್ದಾನೆ. ಆ ರಾಜನು ತರುಣನು. ವಿದ್ಯಾವಿನಯ ಸಂಪನ್ನನು. ಇಂಥ ಸಂಬಂಧವು ನಮಗೆ ದುರ್ಲಭವಾಗಿದೆ. ಆದುದರಿಂದ ನೀನು ವಿವೇಕದಿಂದ ವರ್ತಿಸು" ಎಂದು ನುಡಿದನು. ಆ ರಾಜಪುತ್ರಿಯು ತಂದೆಯ ಮಾತನ್ನು ಆಲಿಸಿ, "ತಂದೆಯೇ ಆ ಮಂತ್ರಿಯನ್ನು ನಾನಿದ್ದಲ್ಲಿಗೆ ಕಳಿಸಿಕೊಡು" ಎಂದು ಹೇಳಿದಳು.

ಅದರಂತೆ ಮರುದಿನ ಮಾಣಿಕಚಂದನು ರಾಜಪುತ್ರಿಯ ಭವ್ಯವಾದ ಅಂತಃಪುರಕ್ಕೆ ಹೋದನು. ಅವಳು ಅವನನ್ನು ಸ್ನೇಹದಿಂದ ಸ್ವಾಗತಿಸಿ, ಉಚಿತ ಆಸನದಲ್ಲಿ ಕುಳ್ಳಿರಿಸಿದಳು. ಯೋಗಕ್ಷೇಮವನ್ನು ವಿಚಾರಿಸಿದಳು.

ಆ ಮೇಲೆ ವೀಳ್ಯದೆಲೆಯ ಡಬ್ಬಿಯನ್ನು ಅವನ ಮುಂದೆ ತಂದಿರಿಸಿ ತಾಂಬೂಲವನ್ನು ಹಾಕಿಕೊಳ್ಳಬೇಕೆಂದಳು ಆಗ ಮಾಣಿಕಚಂದನು "ರಾಜಪುತ್ರಿ, ನಾನು ಬಂದ ಕೆಲಸವಾಗಿಲ್ಲ. ಅದು ಮುಗಿದ ಮೇಲೆಯೇ ತಾಂಬೂಲವನ್ನು ತೆಗೆದುಕೊಳ್ಳುತ್ತೇನೆ. ಹಾಗೆ ನನ್ನ ರಾಜನ ಮುಂದೆ ಪ್ರತಿಜ್ಞೆ ಕೂಡಾ ಮಾಡಿದ್ದೇನೆ'' ಎಂದನು ಅದನ್ನು ಕೇಳಿ ಆ ರಾಜಸುತೆಗೆ ಬಹಳ ಸಂತೋಷವಾಯಿತು. ಅವನನ್ನು ಆದರಿಸಿ ಕಳಿಸಿಕೊಟ್ಟಳು. ಮಾಣಿಕಚಂದನು ಸುರಕ್ಷಿತವಾಗಿ ಮರಳಿದುದನ್ನು ಕಂಡು ಎಲ್ಲರೂ ಆಶ್ಚರ್ಯಚಕಿತರಾದರು.

ರಾಜಪುತ್ರಿಯು ತನ್ನ ತಂದೆಯ ಅಪ್ಪಣೆಯನ್ನು ಪಡೆದು ಕಾವಲುಗಾರರು ಹಾಗೂ ದಾಸಿಯರೊಂದಿಗೆ ಮಾಣಿಕಚಂದನೊಡನೆ ಪಾಟಲೀಪುತ್ರಕ್ಕೆ ಹೊರಟಳು. ಆದಿತ ರಾಜನನ್ನು ನೋಡಿ ಕೊನೆಗೆ ಮದುವೆಗೆ ಸಮ್ಮತಿಸಿದಳು. ಅವರೀರ್ವರ ವಿವಾಹವೂ ಸಂಭ್ರಮದಿಂದ ನೆರವೇರಿತು. ರಾಜನು ಅಮಾತ್ಯನಾದ ಮಾಣಿಕಚಂದನಿಗೆ ಅಮಿತ ಉಡುಗೊರೆಗಳನ್ನು ಕೊಟ್ಟನು. ಇದರಿಂದ ರಾಜಸ್ಥಾನದ ಸರದಾರರಿಗೆ ಇನ್ನಷ್ಟು ಕೋಪವಾಯಿತು. ಹೇಗಾದರೂ ಮಾಡಿ ಅಮಾತ್ಯನನ್ನು ಕೊಲ್ಲಿಸಬೇಕೆಂದು ನಿರ್ಧರಿಸಿದರು. ಆ ಮೇಲೆ ರಾಜನ ಅಂಗರಕ್ಷಕನೊಬ್ಬನ ವಿಶ್ವಾಸ ಪಡೆಯಲೆತ್ನಿಸಿದರು. ಅವನಿಗೆ ಅಪಾರವಾದ ದ್ರವ್ಯವನ್ನು ಕೊಟ್ಟರು. ಅವನು ಅವರ ಬಲೆಗೆ ಬಿದ್ದ ಮೇಲೆ "ಮಾಣಿಕಚಂದನಿಗೂ ರಾಜಪತ್ನಿಗೂ ಅಕ್ರಮ ಸಂಬಂಧವಿದ್ದೆಯೆಂದು ನೀನು ಸುದ್ದಿ ಹರಡು. ಅದು ರಾಜನ ಕಿವಿಗೂ ಮುಟ್ಟಲಿ" ಎಂದು ತಿಳಿಸಿದರು.

ದುಷ್ಟರು ಹೇಳಿಕೊಟ್ಟ ಮಾತುಗಳನ್ನು ಆ ಅಂಗರಕ್ಷಕನು ಸಮಯ ಸಾಧಿಸಿ ರಾಜನಿಗೆ ಕೇಳಿಸುವಂತೆ ನುಡಿದನು. ಅದರಿಂದ ರಾಜನಿಗೆ ವಿಶೇಷ ಕೋಪ ಬಂದಿತು. ಒಂದು ದಿನ ರಾಜನು ಮಾಣಿಕಚಂದನೊಡನೆ ಏಕಾಂತದಲ್ಲಿದ್ದಾಗ "ಮಂತ್ರಿ, ತನ್ನ ಒಡೆಯನ ಪತ್ನಿಯೊಡನೆ ಅನೀತಿ ಸಂಬಂಧವಿಟ್ಟುಕೊಂಡವನಿಗೆ ಯಾವ ಶಿಕ್ಷೆಯನ್ನು ವಿಧಿಸಬೇಕು?'' ಎಂದು ಕೇಳಿದನು. ಅದಕ್ಕೆ ಆ ಅಮಾತ್ಯನು "ಸ್ವಾಮಿ, ಅವನಿಗೆ ಮರಣ ಶಿಕ್ಷೆಯೇ ಯೋಗ್ಯವಾದುದು'' ಎಂದುತ್ತರವಿತ್ತನು. ಅದನ್ನು ಕೇಳಿದ ಕೂಡಲೇ ರಾಜನು ತನ್ನ ಕಠಾರಿಯಿಂದ ಮಾಣಿಕಚಂದನನ್ನು ಇರಿದನು. ಅಮಾತ್ಯನು

ನೆಲಕ್ಕೆ ಬಿದ್ದನು. ಆಗ ಅವನು ಮೋರೆಯನ್ನೆತ್ತಿ "ಪ್ರಭು, ತಮಗೆ ನನ್ನ ಮೇಲೆ ಈ ಸಂಶಯ ಹುಟ್ಟಿದುದಕ್ಕಾಗಿ ದುಃಖವಾಗುತ್ತದೆ. ಯಾರು ಈ ವಿಷವನ್ನು ತಮ್ಮ ತಲೆಯಲ್ಲಿ ತುಂಬಿದರೋ ನಾನರಿಯೆ. ಆಗಲಿ, ನಾನು ಸಾಯಲು ಹೆದರುವದಿಲ್ಲ. ಮನುಷ್ಯನಿಗೆ ಮರಣ ಕಟ್ಟಿಟ್ಟದ್ದೆ. ಅಲ್ಲದೆ ರಾಜರ ಕೈಯಿಂದ ಮರಣ ಹೊಂದುವ ಭಾಗ್ಯ ಬಂದುದೂ ಒಳ್ಳೆಯದೇ ಆಯಿತು. ಆದರೆ ಸಾಯುವ ಕಾಲಕ್ಕೆ ನನ್ನ ಮೇಲೆ ಈ ಒಂದು ಅಪವಾದ ಬಂದಿತಲ್ಲ ಎಂದು ವ್ಯಸನ ಪಡುತ್ತೇನೆ. ಆದುದರಿಂದ ಯಾರು ನಿಮಗೆ ಈ ಸುದ್ದಿಯನ್ನು ಹೇಳಿದರೋ ಅವರನ್ನು ಕರೆಸಿ ಯೋಗ್ಯ ವಿಚಾರಣೆ ನಡೆಸಿರಿ. ಆಗ ನಿಮಗೆ ಸತ್ಯವು ವೇದ್ಯವಾಗುವದು'' ಎಂದು ಹೇಳಿ ಮರಣ ಹೊಂದಿದನು.

ಆ ಕೂಡಲೇ ರಾಜನು ಅಂಗರಕ್ಷಕನನ್ನು ಕರೆದು ನಿಜಸಂಗತಿಯನ್ನು ತಿಳಿಸಲು ಆಜ್ಞಾಪಿಸಿದನು. ಆಗ ಸರದಾರರು ಹೂಡಿದ ಒಳಸಂಚೆಲ್ಲ ಬಯಲಾಯಿತು. ಮಾಣಿಕಚಂದನು ನಿರಪರಾಧಿಯೆಂದು ರಾಜನಿಗೆ ಗೊತ್ತಾಯಿತು. ತನ್ನ ಮಿತ್ರನ ಗುಣಗಳನ್ನು ನೆನಸುತ್ತ ಅವನು ದುಃಖಿಸ ತೊಡಗಿದನು.

ಈ ರೀತಿ ಉಗ್ರಸೇನನು ವೇಶ್ಯೆಯ ಮುಂದೆ ನುಡಿದು "ನನ್ನನ್ನು ಕೊಲ್ಲಬೇಡ" ಎಂದನು. ಆದರೆ ಅವಳು ತನ್ನ ನಿಶ್ಚಯವನ್ನು ಬದಲಿಸಲಿಲ್ಲ. ಉಗ್ರಸೇನನನ್ನು ಕಡಿಯಲು ಸಿದ್ಧಳಾದಳು. ಅಷ್ಟರಲ್ಲಿ ಹೊರಗೆ ಮಂತ್ರಿಸುತನ ಮಾತು ಕೇಳಿಸಿತು. ಅವಳು ಗಾಬರಿಯಾದಳು. ಮೈ ಬೆವರಿತು. ತುಟಿಗಳು ಒಣಗಿದುವು. ಆಗ ಅವಳು "ಸ್ವಾಮಿ, ನನ್ನ ಜೀವವನ್ನು ಉಳಿಸುವುದಾಗಿ ವಚನ ಕೊಡಿರಿ. ಇಲ್ಲದಿದ್ದರೆ ನಿಮ್ಮನ್ನು ಕೊಂದು ನಾನೂ ಆತ್ಮಹತ್ಯ ಮಾಡಿಕೊಳ್ಳುತ್ತೇನೆ'' ಎಂದಳು. ಆಗ ಉಗ್ರಸೇನನು "ನಿನ್ನ ಮೇಲೆ ಪ್ರೇಮಾಸಕ್ತನಾಗಿದ್ದೇನೆ. ನಿನ್ನ ಪ್ರಾಣವನ್ನು ತೆಗೆವ ವಿಚಾರ ನನಗಿಲ್ಲ" ಎಂದನು. ವೇಶ್ಯೆಯು ಕೂಡಲೇ ಅವನ ಕೈಕಾಲುಗಳಿಗೆ ಕಟ್ಟಿದ್ದ ಹಗ್ಗಗಳನ್ನು ಬಿಚ್ಚಿದಳು. ಉಗ್ರಸೇನನು ನಗುತ್ತ ಕುಳಿದನು. ಮಂತ್ರಿಸುತನನ್ನು ಆತ್ಮಾದರದಿಂದ ಸ್ವಾಗತಿಸಿದನು. ಹೀಗೆ ಕೆಲವು ದಿವಸಗಳಾದ ಬಳಿಕ ಆ ದುಷ್ಟೆಯಾದ ವೇಶ್ಯೆಯನ್ನು ವಿಷದಿಂದ ಕೊಲ್ಲಿಸಿದನು".

ಮೋಹಿನೀ, ಸುಶೀಲೆಗೂ ನಾನು ಈ ಕಥೆಯನ್ನು ಹೇಳಿ "ನೀನಾದರೂ ವಿವೇಕ ತಂದುಕೋ. ನನ್ನನ್ನು ಪೀಡಿಸದೆ ಬಿಡು. ನನ್ನನ್ನು ಕೊಂದರೆ ನಿನಗೂ ಸುಖ ದೊರೆಯಲಾರದು. ನಿನಗೆ ಕೊನೆಗೆ ಪಶ್ಚಾತ್ತಾಪವಾಗಬಹುದು. ನಿನ್ನ ಮನಸ್ಸೇ ನಿನ್ನನ್ನು ಚುಚ್ಚಬಹುದು. ಜನರು ನಿನ್ನನ್ನು ನಿಂದಿಸದೇ ಇರಲಾರರು. ನಿನ್ನನ್ನು ನಾನು ಕರೆದುಕೊಂಡು ಹೋಗಲಾರೆ. ನಿನ್ನನ್ನು ತೃಪ್ತಿಗೊಳಿಸುವ ಶ್ರೀಮಂತಿಕೆ ನನ್ನಲ್ಲಿಲ್ಲ. ಕಾಮಾತುರರಾಗಿ ಅನಂತ ಕಷ್ಟಗಳಿಗೊಳಗಾದ ಇಂದ್ರ, ವಿಶ್ವಾಮಿತ್ರ, ನಾರದ, ರಾವಣ, ವಾಲಿ, ಕೀಚಕ, ಕಾರ್ತವೀರ್ಯಾರ್ಜುನ ಮೊದಲಾದವರ ಗತಿ ಏನಾಯಿತೆಂದು ನೋಡು" ಎಂದು ನುಡಿದೆನು. ಅದರಿಂದಲೂ ಅವಳ ದುರ್ಬುದ್ಧಿ ಅಳಿಯಲಿಲ್ಲ. ಆಗ ನಾನು ಒಬ್ಬ ತಪಸ್ವಿಯ ಕಥೆಯನ್ನು ಹೇಳಿದೆ. ಕೇಳು–

## ೧೩. ತಪಸ್ವಿಯ ಕಥೆ

ಪ್ರಾಚೀನ ಕಾಲದಲ್ಲಿ ಭಾರತಿ ಎಂಬ ಹೆಸರಿನ ಋಷಿಯೊಬ್ಬನಿದ್ದನು. ಅವನು ಸೂರ್ಯೋಪಾಸಕ. ಅದರಲ್ಲಿ ಸಿದ್ಧಿಯನ್ನು ಪಡೆದಿದ್ದನು. ಆ ವಿದ್ಯೆಯ ಬಲದಿಂದ ಅವನು ರೋಗಗಳನ್ನು ಗುಣಪಡಿಸುತ್ತಿದ್ದನು. ದೊಡ್ಡ ದೊಡ್ಡ ವೈದ್ಯರಿಂದ ನಿರಾಶೆ ಹೊಂದಿದ ರೋಗಿಗಳು ಅವನಲ್ಲಿ ಬರುತ್ತಿದ್ದರು.

ಧರಣಿಪಾಲನೆಂಬ ಅರಸನಿಗೂ ಈ ಸುದ್ದಿ ಮುಟ್ಟಿತು. ಅವನಿಗೆ ಪಾಂಡುವರ್ಣದ ರೋಗದಿಂದ ಬಳಲುತ್ತಿದ್ದ ಮಗಳೊಬ್ಬಳಿದ್ದಳು. ಒಂದು ದಿನ ಅವಳನ್ನು ಈ ಭಾರತೀ ಋಷಿಯ ಆಶ್ರಮಕ್ಕೆ ಕರೆದುಕೊಂಡು ಬಂದರು. ಅವನು ನಸುಕಿನಲ್ಲಿ ನದಿಗೆ ಸ್ನಾನಕ್ಕೆ ಹೋಗುತ್ತಿದ್ದನು. ಆದುದರಿಂದ ರಾಜಪುತ್ರಿಯನ್ನು ದಾರಿಯಲ್ಲಿ ಮಲಗಿಸಿ ಹೊರಟು ಹೋದರು. ಪೂರ್ಣ ಬೆಳಗಾಗುವ ಮೊದಲೇ ಭಾರತಿ ಋಷಿಯು ಹೊರಟನು. ಕಾಲಿಗೆ ಆ ಸ್ತ್ರೀಶರೀರವು ತಗುಲಿತು. ಅವನು ಆಶ್ಚರ್ಯಭರಿತನಾದನು. ಕೆಳಗೆ ಬಗ್ಗಿ ಅವಳ ದೇಹದ ಮೇಲೆಲ್ಲ ಕೈಯ್ಯಾಡಿಸಿದನು. ಆಗ ಅವನ ಕೈಗೆ ರಾಜಪುತ್ರಿಯ ಕುಚ ಸ್ಪರ್ಶವಾಯಿತು. ಆ ಕೂಡಲೇ ಋಷಿಗೆ ಕಾಮವಿಕಾರ

ವುಂಟಾಯಿತು. ಅದನ್ನು ಪರಿಹರಿಸಿಕೊಳ್ಳಲೂ ಅವನು ನಿರ್ಧರಿಸಿದನು. ಸುತ್ತುಮುತ್ತಲೂ ಯಾರೂ ಜನರೂ ಇರಲಿಲ್ಲ. ಅವನು ಬಲಾತ್ಕಾರ ಮಾಡತೊಡಗಿದುದನ್ನು ಕಂಡ ರಾಜಪುತ್ರಿಯು "ಋಷಿಯೇ, ನಾನಿನ್ನೂ ಸಣ್ಣವಳು. ಪುರುಷ ಸಂಪರ್ಕವಿಲ್ಲದವಳು. ರೋಗಗ್ರಸ್ಥಳಾಗಿಯೂ ಇದ್ದೇನೆ ಆದುದರಿಂದ ಈಗ ನನ್ನ ಮೇಲೆ ಬಲಾತ್ಕಾರ ಮಾಡಬೇಡ. ಮೊದಲು ನನ್ನ ರೋಗವನ್ನು ಗುಣಮಾಡು. ಆ ಮೇಲೆ ನಿನ್ನನ್ನು ನಾನೇ ಮದುವೆಯಾಗುತ್ತೇನೆ" ಎಂದು ನುಡಿದಳು.

ಆದರೆ ಆ ವಿವೇಕದ ಮಾತು ಋಷಿಗೆ ರುಚಿಸಲಿಲ್ಲ. ಅವನು ಕಾಮೋದ್ರೇಕನಾಗಿದ್ದುದರಿಂದ ಅದೊಂದನ್ನೂ ಕೇಳಲಿಲ್ಲ. ತನ್ನನ್ನು ತೃಪ್ತಿಪಡಿಸಿದರೆ ಮಾತ್ರ ರೋಗವನ್ನು ಗುಣಪಡಿಸುವುದಾಗಿ ಹೇಳಿದನು. ಅವಳು ಒಪ್ಪಿದುದರಿಂದ ಅವಳೊಡನೆ ರತ್ಯಾಸಕ್ತನಾದನು. ರತಿಲೀಲೆ ಮುಗಿದ ಮೇಲೆ ನದಿಗೆ ತೆರಳಿ ಸ್ನಾನ ಮಾಡಿದನು. ಆ ಮೇಲೆ ಆ ರಾಜಕುಮಾರಿಯಿದ್ದಲ್ಲಿ ಬಂದು ಕುಳಿತು ಅವಳ ರೋಗ ನಿವಾರಣೆ ಮಾಡಲು ಯತ್ನಿಸಿದನು. ಆದರೆ ಅವನೆಷ್ಟು ಯತ್ನಿಸಿದರೂ ಅದು ಸಫಲವಾಗಲಿಲ್ಲ. ಇದರಿಂದ ಅವನಿಗೆ ಹೆದರಿಕೆಯಾಯಿತು. ಲೋಕಾಪವಾದ ಬರುವುದೆಂದು ಹೆದರಿದ. ಅಪಕೀರ್ತಿ ಬರುವುದು ನಿಶ್ಚಯವೆಂದೂ ಯೋಚಿಸಿದ. ಕೊನೆಗೆ ಅವಳನ್ನು ಒಯ್ದು ನದೀ ದಂಡೆಯಲ್ಲಿದ್ದ ಒಂದು ಹೊಂಡದಲ್ಲಿ ಅವಳನ್ನು ಹಾಕಿ ಮೇಲೆ ಉಸುಕು ಮುಚ್ಚಿದನು.

ರಾಜಪುತ್ರಿಯ ದಾಸಿಯರು ಸ್ವಲ್ಪ ಹೊತ್ತಿನ ಮೇಲೆ ಭಾರತಿ ಋಷಿಯ ಆಶ್ರಮಕ್ಕೆ ಬಂದರು. ಆದರೆ ಅಲ್ಲಿ ರಾಜಪುತ್ರಿ ಇರಲಿಲ್ಲ. ಅದರಿಂದ ಗಾಬರಿಯಾದರು. ಎಲ್ಲ ಕಡೆಗಳಲ್ಲೂ ಅವಳನ್ನು ಹುಡುಕಿದರು. ಮಳಲಿನಲ್ಲಿ ಕಾಲ ಹೆಜ್ಜೆಗಳು ಕಾಣಿಸಿದುದರಿಂದ ಅಲ್ಲಿ ತೆರಳಿ ಉಸುಕನ್ನು ಅಗೆದರು. ಆಗ ಆ ರಾಜಪುತ್ರಿಯನ್ನು ಕಂಡು ತಬ್ಬಿಬ್ಬಾದರು. ಅವಳನ್ನು ಹೊರತೆಗೆದು ಉಪಚಾರ ಮಾಡಿದರು. ಪ್ರಾಣವಿನ್ನೂ ಹೋಗಿರಲಿಲ್ಲ. ಸ್ವಲ್ಪ ಹೊತ್ತಿನ ಮೇಲೆ ಅವಳಿಗೆ ಪ್ರಜ್ಞೆ ಬಂದಿತು. ಆಗ ಅವಳು ಸನ್ನೆಯಿಂದಲೇ ಋಷಿಯ ಕಡೆ ಕೈತೋರಿಸಿದಳು. ಅವಳನ್ನು ಈ ದುರವಸ್ಥೆಗೆ ಈಡುಮಾಡಿದವನು ಅವನೇ ಎಂದು ಎಲ್ಲರೂ ತಿಳಿದುಕೊಂಡರು. ರಾಜ

ನಿಗೂ ಈ ಸುದ್ದಿಯನ್ನು ತಿಳಿಸಿದರು. ಕೂಡಲೇ ಸೈನಿಕರು ಬಂದು ಅವ ನನ್ನು ಬಂಧಿಸಿ ಗಲ್ಲಿಗೇರಿಸಿದರು.

ಸುಶೀಲೆ, ಅದರಂತೆ ನೀನೂ ಕಾಮಾತುರಳಾಗಿ ಅನ್ಯಾಯಕ್ಕೆಳೆಸ ಬೇಡ. ಹಿಂದೆ ಅನೀತಿ ಪ್ರವೃತ್ತರಾದ ಸ್ತ್ರೀ ಪುರುಷರನ್ನು ರಾಜರು ನಾನಾ ರೀತಿಯಾಗಿ ಚಿತ್ರಹಿಂಸೆಗೆ ಗುರಿಪಡಿಸುತ್ತಿದ್ದರು. ಇಲ್ಲದಿದ್ದರೂ ಈ ಕಾಮೋ ದ್ರೇಕದಿಂದ ಸ್ವತಃ ಸ್ತ್ರೀ ಪುರುಷರಿಗೇ ಹಾನಿಯಿದೆ. ಅವರ ದ್ರವ್ಯ, ಯೌವನ, ಕೀರ್ತಿಗಳೆಲ್ಲವೂ ನಾಶವಾಗುತ್ತವೆ. ಮನಸ್ಸನ್ನು ವಿವೇಕದಿಂದ ಬಿಗಿಹಿಡಿದಿರಬೇಕು. ಇದಕ್ಕೆ ತಪ್ಪಬಾರದು. ನಾನು ಇಷ್ಟರವರೆಗೆ ಅನೇಕ ಕಥೆಗಳನ್ನು ಹೇಳಿದೆ. ಇನ್ನಾದರೂ ಧರ್ಮಬುದ್ಧಿಯಿಂದ ವರ್ತಿಸು. ಮನೆ ಯನ್ನು ತ್ಯಜಿಸಬೇಡ'' ಎಂದು ಹೇಳಿದೆನು. ಆದರೆ ನನ್ನ ಮಾತುಗಳೆಲ್ಲ ಬೋರ್ಗಲ್ಲ ಮೇಲೆ ಹೊಯ್ದ ನೀರಿನಂತೆಯೇ ಆಯಿತು. "ವೈದ್ಯಶ್ರೇಷ್ಠನೇ, ನಾನಿನ್ನು ಮನೆಯಲ್ಲಿ ಇರುವವಳಲ್ಲ. ನನ್ನನ್ನು ಎಲ್ಲಾದರೂ ಕರೆದು ಕೊಂಡು ಹೋಗಿರಿ. ನಾಳೆ ಸಂಜೆ ನಾನು ಪುರುಷವೇಷ ಧರಿಸಿ ಅಂಬಾ ಭವಾನಿ ದೇವಸ್ಥಾನದ ಹತ್ತಿರ ಬರುತ್ತೇನೆ. ಅಲ್ಲಿ ಎರಡು ಕುದುರೆಗಳನ್ನು ನಿಲ್ಲಿಸುತ್ತೇನೆ. ಇಬ್ಬರೂ ಕುದುರೆಗಳನ್ನೇರಿ ಬೆಳಗಾಗುವುದರೊಳಗೆ ಶೋಭನ ಪುರಕ್ಕೆ ಹೋಗೋಣ" ಎಂದು ನುಡಿದಳು. ನಾನು ಅದಕ್ಕೊಪ್ಪಲೇಬೇಕಾ ಯಿತು ಮತ್ತು ಮರುದಿನ ರಾತ್ರಿ ಇಬ್ಬರೂ ಕುದುರೆ ಏರಿ ಶೋಭನಪುರಕ್ಕೆ ಹೋದೆವು. ಅಲ್ಲಿ ನನ್ನ ಮಿತ್ರನ ಮನೆಯಲ್ಲಿ ಸುಶೀಲೆಯನ್ನು ಇಟ್ಟೆ.

ಸುಶೀಲೆಯು ಓಡಿ ಹೋದ ಸುದ್ದಿ ಎಲ್ಲ ಕಡೆಗಳಿಗೂ ವ್ಯಾಪಿಸಿತು. ಅವಳ ಪತಿಗೆ ನನ್ನ ಮೇಲೆಯೇ ಸಂದೇಹ. ಅವಳ ಚಿನ್ನಾಭರಣಗಳನ್ನು ನಾನು ಅಪಹರಿಸಿರುವೆನೆಂದು ರಾಜನಲ್ಲಿ ದೂರು ಕೊಟ್ಟನು. ಮತ್ತು ಸೈನಿಕರು ಬಂದು ಮನೆಯನ್ನೆಲ್ಲ ಹುಡುಕಿದರು. ಆದರೆ ಅವರಿಗೆ ಏನೂ ಸಿಗಲಿಲ್ಲ. ನಾನು ಸುಶೀಲೆಯನ್ನೂ ಅಲ್ಲೇ ಇರಿಸಿ ಕಾರ್ಯ ನಿಮಿತ್ತ ಬೇರೊಂದು ನಗರಕ್ಕೆ ಹೋದೆನು. ಅಲ್ಲಿಗೆ ತೆರಳಿದ ಕೆಲವು ದಿವಸಗಳ ಮೇಲೆ ಶೋಭನ ಪುರದ ಮಿತ್ರನು ನನಗೊಂದು ಪತ್ರವನ್ನು ಬರೆದು ಕಳಿಸಿದನು. ಸುಶೀಲೆಯು ದುರ್ಮಾರ್ಗ ಪ್ರವೃತ್ತಳಾಗಿರುವಳೆಂದು ಅದರಲ್ಲಿ ಬರೆದಿತ್ತು. ಅದನ್ನು ಓದಿ ನೋಡಿ ನನಗೆ ಬಹಳ ವ್ಯಸನವಾಯಿತು. ನಾನು ಮತ್ತೆ ಶೋಭನಪುರಕ್ಕೆ

ಬಂದೆ. ಬಂದವನು ಸುಶೀಲೆಯ ಮನೆಯ ಬಳಿಯೇ ಅಡಗಿನಿಂತೆ. ರಾತ್ರಿ ಆವಳ ವಿಟಪುರುಷನು ಮನೆಯೊಳಗೆ ಪ್ರವೇಶಿಸುವುದು ನನ್ನ ದೃಷ್ಟಿಗೂ ಬಿತ್ತು. ಸ್ವಲ್ಪ ಹೊತ್ತಿನ ಮೇಲೆ ನಾನು ಮನೆಯ ಬಾಗಿಲು ದೂಡಿದೆ. ನನ್ನ ಧ್ವನಿ ಕೇಳಿದ ಕೂಡಲೇ ಅವಳು ತುಂಬಾ ಗಾಬರಿಯಾದಳು. ಬಾಗಿಲು ತೆರೆಯಲು ಸ್ವಲ್ಪ ವೇಳೆಯೂ ಹಿಡಿಯಿತು. ಬಾಗಿಲು ತೆರೆದ ಮೇಲೆ ನನ್ನನ್ನು ಕಂಡೊಡನೆಯೇ ಬಹಳ ಮೃದು ಮಧುರವಾಗಿ ಮಾತನಾಡಿಸಿದಳು.

ಆದರೆ ನನಗೆ ಅದೊಂದೂ ಬೇಕಾಗಿರಲಿಲ್ಲ. ಮನೆಯನ್ನೆಲ್ಲ ಹುಡುಕಿದೆ. ಆಗ ಮಂಚದ ಮೇಲೆ ಮತ್ತೊಬ್ಬಳು ಸ್ತ್ರೀ ಕುಳಿತಿದ್ದುದು ನನ್ನ ಕಣ್ಣಿಗೆ ಬಿತ್ತು. "ಅವಳು ಯಾರು ?'' ಎಂದು ಕೇಳಿದೆ. ಆಗ ಸುಶೀಲೆಯು "ನೀವು ಹೋದ ಮೇಲೆ ನನಗೆ ಬೇಸರವಾಗುತಿತ್ತು. ರಾತ್ರಿ ನಿದ್ದೆಯೂ ಬರುತ್ತಿರ ಲಿಲ್ಲ. ಆದಕ್ಕೆ ನೆರಮನೆಯಾಕೆಯನ್ನು ಕರೆದುಕೊಂಡು ಬರುತಿದ್ದೇನೆ" ಎಂದಳು. ನನಗೆ ಆ ಮಾತಿನ ಮೇಲೆ ವಿಶ್ವಾಸವುಂಟಾಗಲಿಲ್ಲ. ಕೂಡಲೇ ಆ ನೆರೆಮನೆಯಾಕೆಯ ಸೀರೆಯನ್ನು ಹಿಡಿದು ಎಳೆಯತೊಡಗಿದೆ. ಸುಶೀಲೆಯ ಮೋರೆಯಲ್ಲಿ ವಿವರ್ಣವಾಯಿತು. ಆಗ ನಾನು "ಇನ್ನು ನೀನು ನನ್ನನ್ನು ನಂಬಬೇಡ. ನಿನ್ನ ಇಷ್ಟವಿದ್ದಂತೆ ನೀನು ಇರು'' ಎಂದು ಹೇಳಿ ಹೊರಟು ಬಂದೆನು. ಸುಶೀಲೆಯು ಅದೇ ವಿಟಪುರುಷನೊಡನೆ ವಾಸಿಸತೊಡಗಿದಳು. ಅವನು ಅವಳ ಮೇಲೆ ಬಹಳ ಪ್ರೇಮಾಸಕ್ತನಾದವನಂತೆ ನಟಿಸಿದನು. ಅವಳು ನಂಬಿದಳು. ಕಾಲಕ್ರಮೇಣ ಅವಳಲ್ಲಿದ್ದ ಎಲ್ಲ ಚಿನ್ನಾಭರಣಗಳನ್ನು ಅವನು ಅಪಹರಿಸಿದನು. ಅವಳ ಜೀವನ ನಿರ್ವಾಹವೂ ನಡೆಯದಂತೆ ಆಯಿತು. ಉಪಾಯವಿಲ್ಲದೆ ಅವಳು ವೇಶ್ಯಾವೃತ್ತಿಗಿಳಿದಳು. ಸ್ವಲ್ಪ ಕಾಲ ದಲ್ಲೇ ರೋಗಗಳ ಬಾಧೆಗಳಿಂದ ಬಳಲತೊಡಗಿದಳು. ವ್ರಣಗಳಿಂದ ಅವಳ ಮೋರೆ ಹಾಗೂ ಅಂಗಾಂಗಗಳೆಲ್ಲವೂ ಕಳೆಗೆಟ್ಟು ಹೋದುವು.

ಕೆಲವು ಕಾಲ ಕಳೆದ ಬಳಿಕ ಶೋಭನಪುರಕ್ಕೆ ನಾನು ತೆರಳಿದಾಗ ನನ್ನ ಮಿತ್ರನು ಈ ಸಂಗತಿಯನ್ನೆಲ್ಲ ಹೇಳಿದನು. ಅವಳ ಕಥೆ ಕೇಳಿ ನನಗೆ ಬಹಳ ದುಃಖವಾಯಿತು. ನಾನು ಅವಳಿದ್ದಲ್ಲಿ ತೆರಳಿ ಮಾತನಾಡಿಸಿದೆ. ನನ್ನನ್ನು ಕಂಡಕೂಡಲೇ ಅವಳ ಕಣ್ಣುಗಳಿಂದ ನೀರು ಧಾರಾಕಾರವಾಗಿ ಸುರಿಯತೊಡಗಿತು. "ವೈದ್ಯವರನೇ, ನನಗೆ ಈ ಬದುಕಿನಲ್ಲಿ ಯಾವ

ಆಶೆಯೂ ಇಲ್ಲ. ಬೇಗನೇ ಮರಣ ಬಂದರೆ ಒಳ್ಳೇದು. ಬರುವುದಿಲ್ಲವಲ್ಲ! ಅಂತಹ ಒಂದು ಔಷಧವನ್ನು ಕೊಡುತಿದ್ದರೆ ಬಹಳ ಉಪಕಾರವಾಗುತಿತ್ತು. ಎಂದು ನುಡಿದಳು. ಅದನ್ನು ಕೇಳಿದ ಮೇಲೆ ನನಗೆ ಇನ್ನಷ್ಟು ಪರಿತಾಪವಾಯಿತು. ನಾನು ಸಮಾಧಾನದ ನಾಲ್ಕು ಮಾತುಗಳನ್ನು ಹೇಳಿದೆ. ಅವಳ ವೆಚ್ಚಕ್ಕೆಂದು ಸ್ವಲ್ಪ ಹಣವನ್ನೂ ಕೊಟ್ಟೆ ಆದರೆ ರೋಗವು ಬಂತು ಅವಳು ಬೇಗನೇ ಮರಣ ಹೊಂದಿದಳು.

ಮೋಹಿನೀ, ನೀನಾದರೂ ಆ ಸುಶೀಲೆಯಂತೆ ಸತ್ಕುಲದವಳು. ನೀನೂ ಅವಳಂತೆ ದುರ್ಬುದ್ಧಿಗೊಳಗಾಗಬೇಡ. ಆದರಿಂದ ಕೊನೆಗೆ ತನಮನಧನಗಳೆಲ್ಲ ನಾಶವಾಗುತ್ತವೆ. ನಾನೂ ಆ ಮೋಹ ಜಾಲದಲ್ಲಿ ಸಿಕ್ಕು ನಾನಾ ದುಃಖ ದುಮ್ಮಾನಗಳಿಗೊಳಗಾಗಿದ್ದೆ. ಕೊನೆಗೆ ದೇವರ ದಯೆಯಿಂದಲೇ ಅದರಿಂದ ಪಾರಾದೆ. ಪಶುಪಕ್ಷಿಗಳು ಕೂಡಾ ಅನ್ಯ ಜಂತುಗಳೊಡನೆ ಸಂಸರ್ಗ ಮಾಡುವುದಿಲ್ಲ" ಎಂದು ನಾನು ಹೇಳಿದೆ. ನನ್ನ ಹಿತೋಪದೇಶದಿಂದ ಮೋಹಿನಿಯ ಮೇಲೆ ಪರಿಣಾಮವಾದಂತೆ ತೋರುತ್ತದೆ. ಅವಳು "ವೈದ್ಯನೇ, ನೀನು ಹೇಳಿದ ಕಥೆಗಳಿಂದ ನನ್ನ ಅಜ್ಞಾನವು ತೊಲಗಿತು. ಸ್ತ್ರೀಯರು ವಿದ್ಯಾವಿಹೀನರಾಗಿರುವುದರಿಂದಲೇ ಅವರು ಬೇಗನೇ ದುರ್ವಿಚಾರಕ್ಕೊಳಗಾಗುತ್ತಾರೆ. ವಿದ್ಯಾವಂತರಾದರೆ ಸುಬುದ್ಧಿಯಿಂದ ತಮ್ಮನ್ನು ತಾವು ತಿದ್ದಿಕೊಳ್ಳಲಾಗುತ್ತದೆ. ಆದರೆ ಈ ಕಾಮವು ಅಸ್ವಭಾವಿಕವಲ್ಲ. ಸ್ತ್ರೀಪುರುಷರೆಲ್ಲರೂ ಆದರ ಬಲೆಗೆ ಬೀಳುತ್ತಾರೆ. ವಿಶ್ವಾಮಿತ್ರನಂತಹ ಋಷಿಯನ್ನೂ ಅದು ಬಾಧಿಸಿತು. ಪುರುಷರಿಗಿಂತಲೂ ಸ್ತ್ರೀಯರಿಗೆ ಅದು ಹೆಚ್ಚಾಗಿದೆ. ಈ ವಿಷಯದಲ್ಲಿ ನನಗೊಂದು ಕಥೆ ಗೊತ್ತಿದೆ. ಎಂದು ಹೇಳಿದಳು. ಮತ್ತು ಅದನ್ನು ವಿವರಿಸತೊಡಗಿದಳು.

## ೧೪. ವಯೋವೃದ್ಧರ ಕಥೆ

ಕಾಶ್ಮೀರ್ ನಗರದಲ್ಲಿ ತ್ರಿವಿಕ್ರಮನೆಂಬ ಒಬ್ಬ ಅರಸನಿದ್ದನು. ರಾತ್ರಿ ಕಾಲದಲ್ಲಿ ಅವನು ವೇಷಪಲ್ಲಟ ಮಾಡಿಕೊಂಡು ನಗರವನ್ನು ಸುತ್ತುತ್ತಿದ್ದನು. ಪ್ರಜೆಗಳು ಯಾವ ರೀತಿ ಬಾಳಿ ಬದುಕುತ್ತಿದಾರೆಂದು ಅವನು

ನೋಡಲೆತ್ನಿಸುತ್ತಿದ್ದನು. ಒಂದು ದಿನ ಅವನು ಹಾಗೆ ಸಂಚರಿಸುತ್ತಿದ್ದಾಗ ಒಂದು ಮನೆಯಲ್ಲಿ ಅಂಗಳದಲ್ಲೇ ವಯೋವೃದ್ಧರಾದ ಇಬ್ಬರು ರತ್ಯಾಸಕ್ತರಾಗಿದ್ದುದು ಅವನ ದೃಷ್ಟಿಗೆ ಬಿದ್ದಿತು. ಕಿಡಿಕಿಯು ಬಾಗಿಲುಗಳನ್ನು ಅವರು ಹಾಕಿಕೊಂಡಿದ್ದಿಲ್ಲ. ವಿಕ್ರಮನು ಅದನ್ನು ನೋಡಿ ಮನೆಯ ಗುರುತು ಹಿಡಿದು ಹೊರಟು ಹೋದನು. ಮರುದಿನ ಚಾರರನ್ನು ಕಳಿಸಿ ಆ ಮುದುಕ ಮತ್ತು ಮುದುಕಿಯನ್ನು ಅರಮನೆಗೆ ಕರೆಸಿದನು. ಅದರ ಕಾರಣವನ್ನು ಚಾರರು ಅವರಿಗೆ ತಿಳಿಸಿದರು. ಆಗ ಆ ವಯೋವೃದ್ಧರಿಬ್ಬರೂ ಕಂಗೆಟ್ಟರು. ಏನು ಮಾಡಬೇಕೆಂಬುದೇ ತೋಚದಾಯಿತು. ಕೊನೆಗೆ ವಿಚಾರ ಮಾಡಿ ಮುದುಕನು ಕೈಯೊಳಗೆ ಸ್ವಲ್ಪ ಅಕ್ಕಿಯನ್ನು ಹಿಡಿದುಕೊಂಡನು. ಮುದುಕಿಯು ಕೈಯಲ್ಲಿ ಸ್ವಲ್ಪ ಬೂದಿಯನ್ನು ಹಿಡಿದುಕೊಂಡಳು. ಆ ಮೇಲೆ ಅವರು ಅರಮನೆಗೆ ತೆರಳಿದರು.

ಅವರನ್ನು ಕಂಡಕೂಡಲೇ ತ್ರಿವಿಕ್ರಮ ರಾಜನು "ನೀವಿಬ್ಬರೂ ಒಬ್ಬರಿಗೊಬ್ಬರು ಏನು ಸಂಬಂಧ?" ಎಂದು ಕೇಳಿದನು ಆಗ ಅವರು "ಗಂಡ-ಹೆಂಡತಿ" ಎಂದು ಉತ್ತರ ಕೊಟ್ಟರು ಆಗ ಆ ರಾಜನು "ನೀವಿಷ್ಟು ವಯೋವೃದ್ಧರಾದರೂ ವಿಷಯಾಭಿಲಾಷೆಯು ತೀರಿಲ್ಲವೇ?" ಎಂದು ಪ್ರಶ್ನಿಸಿದನು. ಆಗ ಆ ಮುದುಕನು ತನ್ನ ಕೈಯೊಳಗಿದ್ದ ಅಕ್ಕಿಯನ್ನು ಅಲ್ಲಿ ಸುರಿಸಿದನು. ಮುದುಕಿಯು ಬೂದಿಯನ್ನು ಸುರಿಸಿದಳು. ಅದರ ಅರ್ಥವೇನೆಂದು ರಾಜನಿಗೆ ಹೊಳೆಯಲಿಲ್ಲ. ಆಗ ಆ ಮುದುಕನು "ಮಹಾರಾಜ, ನನಗೆ ದಿನಂಪ್ರತಿ ಸ್ವಲ್ಪ ಅಕ್ಕಿ ಬೇಕಾಗಿರುತ್ತದೆ. ಈ ಅಕ್ಕಿಯನ್ನು ತಿನ್ನುವ ವರೆಗೆ ಕಾಮವಾಸನೆಯುಂಟೇ ಉಂಟು. ಅದನ್ನು ನಿವಾರಿಸಿಕೊಳ್ಳಲೇ ಬೇಕಾಗುತ್ತದೆ. ಅಕ್ಕಿ ತಿನ್ನುವುದು ನಿಂತಾಗ ವಿಷಯವಾಸನೆ ತೊಲಗುತ್ತದೆ" ಎಂದುತ್ತರವಿತ್ತನು. ಆ ಮೇಲೆ ಆ ವೃದ್ಧೆಯು "ಮಹಾಪ್ರಭು, ಸ್ಮರಣೆ, ದರ್ಶನ ಹಾಗೂ ಸ್ಪರ್ಶಗಳಿಂದ ಪುರುಷರಿಗೆ ಕಾಮಾತುರವುಂಟಾಗುವದು. ಆದರೆ ಸ್ತ್ರೀಯರಿಗೆ ಹಾಗಲ್ಲ. ಯಾವಾಗಲೂ ಇದ್ದೇ ಇರುತ್ತದೆ. ಶರೀರವು ಭಸ್ಮವಾಗಿ ಹೋದ ಮೇಲೆಯೇ ಅದು ನಿಲ್ಲುತ್ತದೆ'' ಎಂದಳು. ಆ ದಂಪತಿಗಳ ಉತ್ತರವನ್ನು ಕೇಳಿ ತ್ರಿವಿಕ್ರಮನು ಸಂತೋಷಭರಿತನಾದನು ಮತ್ತು ಅವರನ್ನು ಆದರಿಸಿ ಕಳಿಸಿಕೊಟ್ಟನು. ಅದರಂತೆ ವೈದ್ಯವರನೇ, ನಾನೂ ಮನುಷ್ಯ ಜೀವಿ.

ಶರೀರವಿರುವ ವರೆಗೆ ಆ ಕಾಮುಬಾಧೆಯು ತಪ್ಪಿದ್ದಲ್ಲ. ಉಪದೇಶದಿಂದ ಅದು ಪರಿಹಾರವಾಗಲಾರದು. ಆದರೆ ಅಂತಹ ದಿವ್ಯ ಔಷಧವೇನಾದರೂ ಇದ್ದರೆ ಅದನ್ನು ಕೊಡಿರಿ. ಅದನ್ನು ಸೇವಿಸುತ್ತೇನೆ."

ಆಗ ಮೋಹನದಾಸನು "ಮೋಹಿನೀ, ಸ್ತ್ರೀಯರಿಗೆ ಕಾಮವಾಸನೆಯು ವಿಶೇಷವಿದೆಯೆಂದು ಹೇಳಿದೆಯಲ್ಲ. ಆದರೆ ಅವರಲ್ಲಿ ಲಜ್ಜೆಯೂ ಇದೆಯಲ್ಲ! ಮಾನ ಎಂಬುದು ಎಲ್ಲರಿಗೂ ದೊಡ್ಡದು. ಹಿಂದೆ ತನ್ನ ಹೆಂಡತಿ ನೀತಿಭ್ರಷ್ಟಳಾಗಿರುವಳೆಂದು ಯಾರೋ ಹೇಳಿದುದನ್ನು ಕೇಳಿದಾಕ್ಷಣವೇ ತ್ರಿವಿಕ್ರಮ ರಾಜನು ತನ್ನ ಹೆಂಡತಿಯ ಪ್ರಾಣಹರಣ ಮಾಡಿದನು. ಆದುದರಿಂದ ನೀನೂ ಲಜ್ಜೆಯನ್ನು ಬಿಡಬೇಡ'' ಎಂದನು. ಆಗ ಮೋಹಿನಿಯು ವಿಕ್ರಮನ ಹೆಂಡತಿಯ ಕಥೆಯನ್ನು ಕೇಳಲು ಆತುರಪಟ್ಟಳು.

## ೧೫. ವಿಕ್ರಮನ ಹೆಂಡತಿಯ ಕಥೆ

ಪೂರ್ವಕಾಲದಲ್ಲಿ ಮಾಯಾ ನಗರದಲ್ಲಿ ಅಜಿತಸೇನನೆಂಬ ರಾಜನಿದ್ದನು. ಅವನಿಗೆ ಅನೇಕ ಪತ್ನಿಯರೂ ಮಕ್ಕಳೂ ಇದ್ದರು. ಅಜಿತಸೇನನು ಮರಣಹೊಂದಿದ ಮೇಲೆ ಹಿರಿಮಗನು ಪಟ್ಟಕ್ಕೆ ಬಂದನು. ಆದರೆ ಅವನು ಧರ್ಮದಿಂದ ರಾಜ್ಯವಾಳಲಿಲ್ಲ. ಇದನ್ನು ಕಂಡ ಎರಡನೇ ತಮ್ಮನಾದ ತ್ರಿವಿಕ್ರಮನು ರಾಜನನ್ನು ಕೊಲ್ಲಿಸಿ ತಾನೇ ರಾಜನಾದನು. ಅವನ ಆಳಿಕೆಯಲ್ಲಿ ರಾಜ್ಯವು ಪ್ರಗತಿಯನ್ನು ಹೊಂದಲಾರಂಭಿಸಿತು.

ಒಂದು ದಿನ ತ್ರಿವಿಕ್ರಮನು ತನ್ನ ಪಟ್ಟದ ರಾಣಿಯಾದ ಕಮಲೆಯೊಡನೆ ಭೋಜನ ಮಾಡುತ್ತಿದ್ದನು. ಆಗ ಮತ್ಸ್ಯದ ಅಡಿಗೆಯನ್ನು ಮಾಡಿದ್ದರು. ಆದರೆ ರಾಣಿಯು ಆ ಮತ್ಸ್ಯವನ್ನು ಮುಟ್ಟಲಿಲ್ಲ. ಅದನ್ನು ತಿಂದರೆ ಪರಪುರುಷ ಸಂಗದೋಷವು ಬರುತ್ತದೆಂದು ನುಡಿದಳು. ಅದನ್ನು ಕೇಳಿ ಆ ಮತ್ಸ್ಯವು ಗಹಗಹಿಸಿ ನಕ್ಕಿತು. ಅದನ್ನು ಕಂಡ ರಾಜನು ಆಶ್ಚರ್ಯಚಕಿತನಾದನು. ಮಂತ್ರವಾದಿಗಳನ್ನೂ, ಜ್ಯೋತಿಷ್ಯರನ್ನು ಕರೆಸಿ ಅದರ ಅರ್ಥವೇನೆಂದು ಪ್ರಶ್ನಿಸಿದನು. ಆದರೆ ಯಾರಿಂದಲೂ ಹೇಳಲಾಗಲಿಲ್ಲ. ಆ ಮೇಲೆ ರಾಜನು ತನ್ನ ಕುಲಪುರೋಹಿತರನ್ನು ಕರೆಸಿ ಕೇಳಿದನು.

ಅದಕ್ಕೆ ಅರ್ಥ ಹೇಳದಿದ್ದರೆ ಅವರ ಪ್ರಾಣಕ್ಕೆ ಗಂಡಾಂತರ ತಪ್ಪಿದ್ದಲ್ಲ ಎಂದು ಬೆದರಿಕೆ ಹಾಕಿದನು. ಕೆಲವು ದಿವಸಗಳ ಸಮಯಾವಕಾಶವನ್ನು ಕೊಟ್ಟರೆ ಉತ್ತರ ಹೇಳುವುದಾಗಿ ಕುಲಪುರೋಹಿತನು ನುಡಿದನು.

ಪುರೋಹಿತನು ಮನೆಗೆ ಬಂದು ಚಿಂತೆಯಿಂದ ಮಲಗಿದನು. ಅನ್ನ ಆಹಾರಗಳ ಮೇಲಿನ ಆಸೆಯನ್ನು ಬಿಟ್ಟನು. ಅವನ ದುರವಸ್ಥೆ ಕಂಡು ಅವನ ಮಗಳಾದ ಬಾಲಪಂಡಿತೆಯು ದುಃಖಿತಳಾದಳು. ತಂದೆಯನ್ನು ನಾನಾ ರೀತಿಯಾಗಿ ಸಮಧಾಯಿಸಲೆತ್ನಿಸಿದಳು. ಆಗ ಅವನು ರಾಜಸ್ಥಾನದಲ್ಲಿ ನಡೆದ ಸಂಗತಿಯನ್ನು ಮಗಳಿಗೆ ತಿಳಿಸಿದನು. ಆಗ ಆ ಬಾಲಪಂಡಿತೆಯು ಬಹಳ ಖಿನ್ನಳಾದಳು. "ತಂದೆಯೇ, ರಾಜನ ಮೈತ್ರಿ, ಜೂಜುಗಾರರ ಸತ್ಯವಾಕ್ಯ, ಸರ್ಪ ಮತ್ತು ವ್ಯಾಘ್ರಗಳ ಕ್ಷಮೆ, ಸ್ತ್ರೀಯರ ಕಾಮ ಶಾಂತಿ, ನಪುಂಸಕನಲ್ಲಿ ಧೈರ್ಯ, ಮದ್ಯಪಾಯಿಯಲ್ಲಿ ಪರಮಾರ್ಥ ವಿಚಾರ, ಕಾಗೆಯಲ್ಲಿ ಪವಿತ್ರ ಬುದ್ಧಿ, ನದಿಯಲ್ಲಿ ಕೃಪೆ ಆಶಿಸುವದು ತಪ್ಪು. ಆದರೂ ಮನುಷ್ಯನಿಗೆ ದೇವರು ಮತಿ ಕೊಟ್ಟಿರುವದರಿಂದ ಎಲ್ಲರನ್ನೂ ವಶಪಡಿಸಿಕೊಳ್ಳಲು ಶಕ್ಯವಿದೆ. ನೀನು ರಾಜನಿದ್ದಲ್ಲಿಗೆ ತೆರಳಿ "ನನ್ನ ಮಗಳು ಯೋಗ್ಯ ಉತ್ತರ ಹೇಳುವಳು" ಎಂದು ಹೇಳು'' ಎಂದಳು.

ಮರುದಿನ ಈ ಬಾಲಪಂಡಿತೆಯು ರಾಜಸಭೆಗೆ ತೆರಳಿದಳು. ಅವಳು "ಮಹಾರಾಜ, ಮತ್ಸ್ಯವು ನಕ್ಕಿದುದು ಅಥವಾ ಅಪಹಾಸ್ಯ ಮಾಡಿದುದು ಸೋಜಿಗದ ಸಂಗತಿಯೇ ಸರಿ. ಇಷ್ಟರವರೆಗೆ ಇಂಥ ವಿಚಾರವನ್ನು ಯಾರೂ ಕಂಡಿಲ್ಲ; ಕೇಳಿಲ್ಲ. ಇದು ತೀರ ಅಸಂಮಜಸವಾಗಿದೆ. ಇದು ಮಹಾರಾಜರಿಗೆ ತಿಳಿಯದ ವಿಷಯವೇನಲ್ಲ. ಆದರೂ ಸಂಶಯವುಂಟಾಗಿರುವದರಿಂದ ಅದನ್ನು ನಿವಾರಿಸಲು ನಾನೊಂದು ಉದಾಹರಣೆಯನ್ನು ಹೇಳುತ್ತೇನೆ'' ಎಂದಳು. ರಾಜನು ಒಪ್ಪಿದುದರಿಂದ ಆ ಬಾಲಪಂಡಿತೆಯು ಸುಂದರಸೇನನ ಕಥೆಯನ್ನು ಹೇಳಿದಳು.

## ೧೬. ಸುಂದರಸೇನನ ಕಥೆ

ಪೂರ್ವಕಾಲದಲ್ಲಿ ಸುಂದರಸೇನನೆಂಬ ರಾಜನು ಅಮರಾವತಿ ರಾಜ್ಯ

ದಲ್ಲಿರುತಿದ್ದನು. ಒಮ್ಮೆ ಶತ್ರುಗಳು ಅವನ ರಾಜ್ಯಕ್ಕೆ ಮುತ್ತಿಗೆ ಹಾಕಿದರು. ಸುಂದರಸೇನನು ತನ್ನ ಪರಿವಾರ ಹಾಗೂ ಸೈನಿಕರೊಂದಿಗೆ ಅಭೇದ್ಯವಾದ ಒಂದು ಕೋಟೆಯಲ್ಲಿ ಆಶ್ರಯಪಡೆದನು. ಕೋಟೆಗೆ ಆಹಾರ ಸಾಮಗ್ರಿಗಳು ತೆರಳದಂತೆ ವೈರಿಗಳು ಯತ್ನಿಸಿದರು. ಆದರೆ ಕೋಟೆಯೊಳಗೇ ಅನೇಕ ವರುಷಗಳಿಗೆ ಸಾಕಾಗುವಷ್ಟು ಆಹಾರವಿದ್ದುದರಿಂದ ಸುಂದರಸೇನನು ಅಂಜ ಲಿಲ್ಲ. ಹೀಗೆ ಐದು ವರುಷಗಳ ವರೆಗೂ ಯುದ್ಧ ಸಾಗಿತು.

ಆದರೆ ಮುಂದಿನ ವರುಷ ಮಳೆಯೇ ಬರಲಿಲ್ಲ. ಅದರ ಮುಂದಿನ ವರುಷವೂ ಹಾಗೆಯೇ ಆಯಿತು. ಕೋಟೆಯಲ್ಲಿ ನೀರಿನ ಅಭಾವ ಉಂಟಾ ಯಿತು. ಆಗ ಸುಂದರಸೇನನು ತನ್ನೆಲ್ಲ ಸರದಾರನನ್ನು ಕರೆದು ಮಂತ್ರಾ ಲೋಚನೆ ಮಾಡಿದನು. ಕೆಲವರು ಸಂಧಾನಮಾಡಿಕೊಳ್ಳೋಣವೆಂದರು. ಕೆಲವರು ಯುದ್ಧಾಸಕ್ತರಾಗಿಯೇ ಇದ್ದರು. ಶರಣಾಗತರಾಗುವುದೇ ಉಚಿತ ವೆಂದು ಕೆಲವರಿಗೆ ತೋರಿತು. ತಂತಮ್ಮ ಸ್ವಭಾವಕ್ಕನುಗುಣವಾದ ಅಭಿ ಪ್ರಾಯವನ್ನು ಅವರು ಕೊಟ್ಟರು. ಸುಂದರಸೇನನಿಗೆ ಆ ಉತ್ತರಗಳಿಂದ ತೃಪ್ತಿಯಾಗಲಿಲ್ಲ. ಅವನು ಅಲ್ಲಿಂದ ಅಂತಃಪುರಕ್ಕೆ ತೆರಳಿ ತನ್ನ ರಾಣಿಯನ್ನು ಕಂಡನು.

ರಾಣಿಯು ಎಲ್ಲ ಸಂಗತಿಗಳನ್ನು ತಿಳಿದುಕೊಂಡಳು. "ಮಹಾರಾಜ, ನಿಮ್ಮ ಕಷ್ಟವು ನನ್ನ ಕಷ್ಟ. ನಿಮ್ಮ ಅಪಕೀರ್ತಿ ನನ್ನ ಅಪಕೀರ್ತಿಯೇ ಸರಿ. ಅಬಲೆಯಾದ ನನ್ನಿಂದ ಈ ಪ್ರಶ್ನೆಯನ್ನು ಬಿಡಿಸಲಾದೀತೇ? ಆದರೂ ಒಂದು ದಿನದ ಅವಕಾಶವನ್ನು ಕೊಡಿರಿ. ವಿಚಾರ ಮಾಡಿ ನನ್ನ ಅಭಿಪ್ರಾಯವನ್ನು ಅರಿಕೆ ಮಾಡುತ್ತೇನೆ" ಎಂದಳು. ರಾಜನು ಒಪ್ಪಿ ಹೊರಟು ಬಂದನು. ಆ ಮೇಲೆ ರಾಣಿಯು ಒಂದು ಗುಪ್ತ ಪತ್ರವನ್ನು ಬರೆದು ನಂಬಿಗಸ್ಥಳಾದ ತನ್ನ ದಾಸಿಯ ಕೈಯಲ್ಲಿ ಅದನ್ನು ಕೊಟ್ಟು ವೈರಿ ರಾಜನ ಡೇರೆಗೆ ಕಳಿಸಿದಳು. "ನಾವು ಇನ್ನೂ ಅನೇಕ ವರುಷಗಳ ವರೆಗೆ ಯುದ್ಧ ಮಾಡಬಲ್ಲೆವು. ಅಷ್ಟು ಕಾಳುಕಡಿ ಸಂಗ್ರಹ ನಮ್ಮಲ್ಲಿದೆ. ಆದರೆ ನೀರಿನ ಅಭಾವದಿಂದ ನಮಗೆ ತೊಂದರೆಯಾಗಿದೆ. ನೀರು ತರಿಸಿಕೊಳ್ಳಲು ನೀವು ಅವಕಾಶ ಕೊಡಬೇಕು. ಧರ್ಮ ಯುದ್ಧ ಮಾಡಲು ಮನಸ್ಸಿದ್ದರೆ ಹಾಗೆ ಮಾಡಬೇಕು'' ಎಂದು ರಾಣಿಯು ಬರೆದಿದ್ದಳು. ಅದಕ್ಕೆ ಆ ರಾಜನು "ನೀವು ನೀರಿನ ಅಭಾವದಿಂದ

ಕಷ್ಟಕ್ಕೊಳಗಾಗಿರುವುದು ನಮಗೆ ಗೊತ್ತಿದೆ. ಆದರೆ ಇದು ದೈವಾಧೀನ. ಮಳೆ ಬಂದರೆ ನಿಮಗೇ ಜಯ ದೊರೆಯಲೂ ಬಹುದು" ಎಂದು ಬರೆದು ಕಳಿಸಿದನು.

ರಾಣಿಯು ಈ ಪತ್ರ ಹಾಗೂ ಅದಕ್ಕೆ ಬಂದ ಉತ್ತರವನ್ನು ಸುಂದರ ಸೇನನಿಗೆ ತೋರಿಸಿ "ಮಹಾರಾಜ, ದೈವೀಚ್ಛೆ ಇದ್ದರೆ ಇಂದೇ ಮಳೆ ಬಂದೀತು. ನಾವು ಅವನನ್ನೇ ಪ್ರಾರ್ಥಿಸಬೇಕು. ಅವನಿಗೆ ದಯಬಾರದಿದ್ದರೆ ಶರಣಾಗತರಾಗುವುದು ಲೇಸು. ವೈರಿಗಳು ನಮ್ಮನ್ನು ದಯಯಿಂದ ನಡೆಸಿ ಕೊಂಡಾರು" ಎಂದು ಹೇಳಿದಳು. ಅದನ್ನು ಕೇಳಿ ರಾಜನು ದೇವರ ಪ್ರಾರ್ಥನೆ ನಡೆಸಿದನು. ಅಂದೇ ರಾತ್ರಿ ವಿಶೇಷ ಜಡಿ ಮಳೆ ಬಿತ್ತು. ಅದೇ ಸಂದರ್ಭ ನೋಡಿ ಸುಂದರಸೇನನ ಸೈನಿಕರು ಉತ್ಸಾಹಭರಿತರಾಗಿ ಯುದ್ಧ ವನ್ನಾರಂಭಿಸಿದರು. ವೈರಿಗಳು ಓಡಿ ಹೋದರು"

ಮಹಾರಾಜ, ಆದರಂತೆ ನೀನು ಕೇಳಿದ ಪ್ರಶ್ನೆಗೆ ನಾನು ಏನು ಉತ್ತರವನ್ನು ಹೇಳಲಿ. ನೀನೇ ಅದನ್ನು ಬಲ್ಲವರೊಡನೆ ಕೇಳಿದರೆ ಯೋಗ್ಯ ಉತ್ತರಕೊಟ್ಟರು. ಆದರೂ............ ಈ ಶ್ಲೋಕವೊಂದನ್ನು ಹೇಳುತ್ತೇನೆ. ನಿನ್ನ ಪ್ರಶ್ನೆಗೆ ಅದೇ ಉತ್ತರ" ಎಂದಳು. ಬಾಲಪಂಡಿತೆಯಾಡಿದ ಆ ಶ್ಲೋಕದ ಅರ್ಥ ರಾಜನಿಗಾಗಲಿಲ್ಲ. ಆಗ ಅವನು "ಅದರ ಅರ್ಥವನ್ನು ಹೇಳಿದರೆ ಸುಮತಿಯ ಪತ್ನಿಯಂತೆ ನೀನೂ ಕೊನೆಗೆ ಪಶ್ಚಾತ್ತಾಪಪಡಬೇ ಕಾದೀತು" ಎಂದಳು. ಅದನ್ನು ಕೇಳಲು ರಾಜನು ಬಯಸಿದುದರಿಂದ ಬಾಲ್ಲ ಪಂಡಿತೆಯು ಹೇಳಲಾರಂಭಿಸಿದಳು. "ಮೋಹಿನೀ ಕೇಳು ಅದನ್ನು ಹೇಳು ತ್ತೇನೆ'' ಎಂದು ಮೋಹನದಾಸನು ಮತ್ತೆ ಅವನ್ನು ಆರಂಭಿಸಿದನು.

## ೧೭. ಸುಮತಿಯ ಪತ್ನಿಯ ಕಥೆ

ಪೂರ್ವಕಾಲದಲ್ಲಿ ಕಾಶ್ಮೀರ್ ನಗರದಲ್ಲಿ ಸುಮತಿ ಎಂಬೊಬ್ಬ ವ್ಯಾಪಾ ರಿಯಿದ್ದನು. ಮೊದಲು ಅವನು ಬಹಳ ಧನಿಕನಾಗಿದ್ದನು. ಆದರೆ ದುರ ದೃಷ್ಟದಿಂದ ವ್ಯಾಪಾರದಲ್ಲಿ ಅವನಿಗೆ ಬಹಳ ನಷ್ಟವೊದಗಿತು. ಬಡತನ ಬಂದಿತು. ಯಾರೂ ಅವನನ್ನು ಮಾತನಾಡಿಸಲಿಲ್ಲ. ಕಾಡಿಗೆ ಹೋಗಿ ಕಟ್ಟಿಗೆ

ಕಡಿದು ತಂದು ಮಾರಾಟ ಮಾಡಿ ಅವನು ಜೀವನನಿರ್ವಾಹವನ್ನು ಸಾಗಿಸ ಬೇಕಾಗಿ ಬಂದಿತು.

ಒಂದು ದಿನ ಅವನು ಕಾಡಿನಲ್ಲಿ ಅಲೆಯುತಿದ್ದಾಗ ಒಂದು ದೇವಸ್ಥಾನ ಗೋಚರಿಸಿತು. ಆಶ್ಚರ್ಯದಿಂದ ಒಳಹೊಕ್ಕು ನೋಡಿದ. ಆಗ ಅಲ್ಲಿ ಮರದಿಂದ ಕೆತ್ತಿದ ಒಂದು ಗಜಾನನ ಮೂರ್ತಿ ಇದ್ದಿತು. ಅದನ್ನೇ ಇತ್ತು ಒಡೆದರೆ ಎರಡು ಮೂರು ದಿನಗಳ ವರೆಗೆ ಕಟ್ಟಿಗೆಯಾಗುತ್ತದೆ ಎಂದವನು ಭಾವಿಸಿ ದನು. ಆ ರೀತಿ ನಿರ್ಧರಿಸಿ ಕೊಡಲಿಯನ್ನೆತ್ತಿದನು, ಅಷ್ಟರಲ್ಲಿ ಆ ಗಜಾನನ ಮೂರ್ತಿಯು "ಸುಮತಿ, ನೀನು ನನ್ನನ್ನು ಕಡಿಯಬೇಡ. ನೀನು ದಿನಂಪ್ರತಿ ಇಲ್ಲಿಗೆ ಬಾ. ನಿನಗೆ ಐದು ಭಕ್ಷ್ಯಗಳನ್ನು ಕೊಡುತ್ತೇನೆ. ಅದನ್ನು ತಿಂದು ನೀನೂ ನಿನ್ನ ಹೆಂಡತಿಯೂ ಸುಖದಿಂದಿರ್ರಿ. ಆದರೆ ಈ ಸಂಗತಿಯನ್ನು ಯಾರಿಗೂ ಹೇಳಬೇಡ" ಎಂದಿತು.

ಸುಮತಿಯು ಆದಕ್ಕೊಪ್ಪಿ ಪ್ರತಿದಿನ ಕಟ್ಟಿಗೆ ಕಡಿವ ನೆವದಿಂದ ಕಾಡಿಗೆ ಹೋಗುತಿದ್ದನು. ಬರುವಾಗ ಭಕ್ಷ್ಯಗಳನ್ನು ತರುತಿದ್ದನು. ಗಂಡ ಹೆಂಡತಿ ಸುಖವಾಗಿದ್ದರು. ಹೀಗಿರಲು ಒಂದು ದಿನ ಆ ವ್ಯಾಪಾರಿಯ ಹೆಂಡತಿಯು ಒಂದು ಭಕ್ಷ್ಯವನ್ನು ನೆರೆಮನೆಯ ತನ್ನ ಗೆಳತಿಗೆ ಕೊಟ್ಟಳು. ದನ್ನು ತುಪ್ಪದಿಂದಲೇ ತಯಾರಿಸಲಾಗಿತ್ತು. ಕಟ್ಟಿಗೆ ಕಡಿದು ಮಾರಾಟ ಮಾಡಿ ಜೀವಿಸುವವರು ಇಂತಹ ಭಕ್ಷ್ಯಗಳನ್ನು ತಿನ್ನುತ್ತಿರುವುದನ್ನು ನೋಡಿ ಆ ನೆರೆಮನೆಯವಳಿಗೆ ಆಶ್ಚರ್ಯವಾಯಿ:ತು. ತನ್ನ ಗೆಳತಿಯೊಡನೆ ಕೂಡಾ ಕಿಣಕಿ ಕಿಣಕಿ ಮಾತನಾಡಿಸಿದಳು. ಆಗ ಸುಮತಿಯ ಹೆಂಡತಿಯು "ನನ್ನ ಯಜಮಾನರು ದಿನಂಪ್ರತಿ ಅದನ್ನು ತರುತ್ತಾರೆ'' ಎಂದಳು. "ಎಲ್ಲಿಂದ? ಯಾರು ಕೊಡುತ್ತಾರೆ?'' ಎಂದು ಅವಳು ಕೇಳಲು ತನಗೆ ಗೊತ್ತಿಲ್ಲ ಎಂದು ತ್ತರವಿತ್ತಳು "ಅದನ್ನು ಹೇಳದಿದ್ದರೆ ಇನ್ನು ಮುಂದೆ ನನ್ನ ಸ್ನೇಹ ಉಳಿಯ ಲಾರದು'' ಎಂದು ಆ ಗೆಳತಿ ಮುನಿಸು ತೋರಿದಳು ಅದರಿಂದ ಸುಮತಿಯ ಹೆಂಡತಿಯು ಗಂಡನನ್ನು ಕಾಡಿ ಬೇಡಿ ತಿಳಿದುಕೊಂಡಳು. ಮತ್ತು ಮರು ದಿನ ಇದ್ದ ಸಂಗತಿಯನ್ನು ತನ್ನ ಗೆಳತಿಗೆ ತಿಳಿಸಿದಳು.

ಆಗ ಆ ಗೆಳತಿಯು ತನ್ನ ಗಂಡನನ್ನು ಕರೆದು "ನೀವು ಯಾಕಾಗು ತ್ತಿದ್ದೀರಿ? ನೋಡಿದಿರಾ ಆ ಸುಮತಿಯನ್ನು ಅವನಿಗೆ ಗಜಾನನೇ ಒಲಿದಿ

ದ್ದಾನೆ. ದಿನಂಪ್ರತಿ ಕಾಡಿನ ಗಜಾನನು ಭಕ್ಷ್ಯಗಳನ್ನು ಕೊಡುತ್ತಿದ್ದಾನಂತೆ. ನೀವೂ ಹೋಗಿ ತಿಳಿದುಕೊಂಡು ಬನ್ನಿ'' ಎಂದು ಜರೆದಳು. ಅದರಂತೆ, ಆವನು ಮರುದಿನ ಗುಪ್ತವಾಗಿ ಸುಮತಿಯನ್ನು ಹಿಂಬಾಲಿಸಿದನು. ಆ ದಿನ ಗಜಾನನು ಸುಮತಿಯನ್ನು ಕಂಡು ಕಿಡಿಕಿಡಿಯಾಗಿ "ಮೂರ್ಖ, ಯಾರಿಗೂ ಹೇಳಬೇಡ ಎಂದರೆ ನಿನ್ನ ಹೆಂಡತಿಗೆ ಹೇಳಿದೆಯಲ್ಲ! ಇನ್ನು ನೀನು ಒಯ್ದು ಭಕ್ಷ್ಯವನ್ನು ನಿನ್ನ ನೆರೆಮನೆಯವನಿಗೇ ಕೊಡು. ನೀನಾಗಲೀ ನಿನ್ನ ಹೆಂಡತಿಯಾಗಲೀ ಒಂದು ತುಂಡನ್ನೂ ತಿನ್ನಕೂಡದು. ತಿಂದರೆ ನೀವು ತಕ್ಷಣ ಮರಣ ಹೊಂದುವುದೇ ಸರಿ" ಎಂದನು. ಇದನ್ನು ಕೇಳಿದ ಸುಮತಿಯ ಹೆಂಡತಿ ಪಶ್ಚಾತ್ತಾಪ ಪಟ್ಟಳು.

"ಮಹಾರಾಜ, ಅದರಂತೆ ಆ ಮತ್ಸ್ಯವು ನಕ್ಕುದುದೇಕೆಂದು ಕೇಳಿದರೆ ತಿಳಿದ ಮೇಲೆ ನಿನಗೂ ಪಶ್ಚಾತ್ತಾಪವಾದೀತು. ಹಿಂದೆ ವಿಪ್ರಸುತನೂ ಹೀಗೆಯೇ ಅನುತಾಪ ಪಟ್ಟ" ಎಂದಳು. ರಾಜನು ಆ ಕಥೆಯನ್ನು ಕೇಳಲು ಇಷ್ಟಪಟ್ಟದುದರಿಂದ ಬಾಲಪಂಡಿತೆಯು ಅದನ್ನು ಹೇಳಿದಳು.

## ೧೮. ವಿಪ್ರಸುತನ ಕಥೆ

ಪ್ರಾಚೀನ ಕಾಲದಲ್ಲಿ ವಿದ್ಯಾ ನಗರದಲ್ಲಿ ಒಬ್ಬ ಬಡ ಬ್ರಾಹ್ಮಣನಿದ್ದನು. ದೇಶಾಂತರಕ್ಕೆ ತೆರಳಿ ಅಮಿತ ಹಣವನ್ನು ಗಳಿಸಬೇಕೆಂದು ಅವನು ನಿರ್ಧರಿಸಿ ಮನೆಯಿಂದ ಹೊರಟು ಹೋದನು. ಊರಿಂದ ಊರಿಗೆ ಅಲೆಯುತ್ತ ಅನೇಕ ತೀರ್ಥಕ್ಷೇತ್ರಗಳನ್ನು ಸಂಚರಿಸುತ್ತ ಅವನು ಉದ್ಯೋಗವನ್ನು ಹುಡುಕ ತೊಡಗಿದನು. ಎಲ್ಲಿಯೂ ಅವನಿಗೆ ಸರಿಯಾದ ಉದ್ಯೋಗ ಸಿಗಲಿಲ್ಲ. ಒಂದು ದಿನ ರಾತ್ರಿ ಅವನಿಗೆ ಮಲಗಿಕೊಳ್ಳಲು ಕೂಡಾ ಎಲ್ಲಿಯೂ ಸ್ಥಳ ಸಿಗಲಿಲ್ಲ. ಒಂದು ಸ್ಮಶಾನದಲ್ಲೇ ಅವನು ಆಶ್ರಯ ಪಡೆಯಬೇಕಾಗಿ ಬಂದಿತು.

ಆಗ ಅಲ್ಲೊಬ್ಬ ಸಿದ್ಧಪುರುಷನು ಕುಳಿತಿದ್ದನು. ಈ ಬಡಬ್ರಾಹ್ಮಣನು ಅವನನ್ನು ಕಂಡು ಅವನಿಗೆ ನಮಸ್ಕಾರ ಮಾಡಿದನು. ಸಿದ್ಧಪುರುಷನು ಕೇಳಿದ ಪ್ರಶ್ನೆಗಳಿಗೆಲ್ಲ ಯೋಗ್ಯ ಉತ್ತರ ಕೊಟ್ಟನು. ಬ್ರಾಹ್ಮಣನ ಸ್ಥಿತಿ

ಕಂಡು ಕೇಳಿ ಆ ಸಿದ್ಧ ಪುರುಷನಿಗೆ ಕರುಣೆ ಹುಟ್ಟಿತು. ಅವನು ತನ್ನ ಬಳಿ ಯಲ್ಲಿದ್ದ ವಿಭೂತಿಯನ್ನು ಅವನ ಕೈಗೆ ಕೊಟ್ಟು, "ನಿನಗೆ ಕಷ್ಟ ಬಂದಾಗ ನೀನು ಸಂಧ್ಯಾ ವಂದನೆಗಳನ್ನು ಮಾಡಿ, ಶುಚಿಯಾಗಿ ಈ ವಿಭೂತಿಯನ್ನು ಮುಟ್ಟಿದರೆ, ಐದು ಚಿನ್ನದ ನಾಣ್ಯಗಳು ಸಿಗುತ್ತವೆ. ಆದರೆ ಬೇರೆ ಯಾರಿಗೂ ಇದನ್ನು ಕೊಡಬಾರದು. ಕೊಟ್ಟರೆ ಮತ್ತೆ ನಿನಗೂ ಅದರ ಫಲ ದೊರೆಯಲಾರದು" ಎಂದು ಹೇಳಿ ಹರಸಿ ಕಳಿಸಿದನು. ಬ್ರಾಹ್ಮಣನು ಸಂತೋಷಪಟ್ಟನು. ಆ ವಿಭೂತಿಯನ್ನು ಜಾಗ್ರತೆಯಿಂದ ಕಾಪಾಡಿಕೊಂಡು ಅನೇಕ ನಗರಗಳನ್ನು ಅಲೆದಾಡಿದನು. ಕೊನೆಗೆ ಕನಕಾವತಿ ಎಂಬ ನಗ ರಕ್ಕೆ ಬಂದನು. ಅಲ್ಲಿ ಒಬ್ಬ ವೇಶ್ಯೆಯನ್ನು ಕಂಡು ಮೋಹಿತನಾದನು. ತನ್ನಲ್ಲಿದ್ದ ಸಂಪತ್ತನ್ನೆಲ್ಲ ಅವಳಿಗೆ ಕೊಟ್ಟು ಅವಳೊಡನೆ ಸುಖದಿಂದ ಇರ ತೊಡಗಿದನು.

ಕಾಲಕ್ರಮೇಣ ಆ ವೇಶ್ಯೆಗೆ ಬ್ರಾಹ್ಮಣನ ಉದ್ಯೋಗವೇನೆಂದು ತಿಳಿ ಯದೇ ಯೋಚನೆಗೆ ಬಿದ್ದಳು. ಕೆಲಸವೇನೂ ಇಲ್ಲ. ಆದರೂ ಚಿನ್ನದ ಮೋಹರುಗಳನ್ನೇ ಕೊಡುತ್ತಿದ್ದಾನಲ್ಲ! ಇದರ ಅರ್ಥವೇನೆಂದು ಅವಳಿಗೆ ತಿಳಿಯಲಿಲ್ಲ. ಆದುದರಿಂದ ಅವನನ್ನು ಪರಿಪರಿಯಾಗಿ ಒಲಿಸಿಕೊಂಡು ಅದರ ರಹಸ್ಯವನ್ನು ಕೇಳಿ ತಿಳಿದುಕೊಂಡಳು. ಆ ಮೇಲೆ ಆ ವಿಭೂತಿ ಯನ್ನು ತನಗೆ ಕೊಡಬೇಕೆಂದೂ ಬೇಡಿಕೊಂಡಳು. ಆಗ ಅವನು ಎಷ್ಟು ಸಮಧಾಯಿಸಿದರೂ ಅವಳು ಕೇಳಲಿಲ್ಲ. ಅದರ ಫಲ ಮತ್ತೆ ಯಾರಿಗೂ ದೊರೆಯುವದಿಲ್ಲ ಎಂದು ಅವನು ಹೇಳಿದರೂ ಅವಳು ನಂಬಲಿಲ್ಲ. ಕೊಡ ದಿದ್ದರೆ ಬ್ರಾಹ್ಮಣನ ಸ್ನೇಹಸಂಗವನ್ನೇ ಬಿಡುವುದಾಗಿ ಪಣತೊಟ್ಟಳು. ಆಗ ಅವನು ನಿರುಪಾಯನಾಗಿ ಕೊಟ್ಟನು. ಅವಳು ಸ್ಪರ್ಶಿಸಿದಾಗ ಚಿನ್ನದ ಮೊಹರುಗಳು ಹೊರಡಲಿಲ್ಲ. ಆ ಮೇಲೆ ಅವನು ಮುಟ್ಟಿದರೂ ನಿಷ್ಫಲವಾ ಯಿತು. ಇದನ್ನು ತಿಳಿದು ಖತಿಗೊಂಡ ಆ ವೇಶ್ಯೆಯು ಇನ್ನು ಈ ಬ್ರಾಹ್ಮ ಣನ ಸ್ನೇಹದಲ್ಲೇನೂ ಅರ್ಥವಿಲ್ಲವೆಂದು ಬಗೆದು ಹೊರಗೆ ಹಾಕಿದಳು. ಆ ಬ್ರಾಹ್ಮಣನು ಕೊನೆಗೆ ಪಶ್ಚಾತ್ತಾಪ ಪಟ್ಟ.

ಹಾಗೆಯೇ ನಾನು ಆ ಶ್ಲೋಕದ ಅಥವಾ ಮತ್ಸ್ಯವು ನಕ್ಕ ವಿಚಾರ ವನ್ನು ಗ್ರಹಿಸಿ ಅದರ ಅರ್ಥವನ್ನು ಹೇಳಿದರೆ ನಿಮಗೆ ಪಶ್ಚಾತ್ತಾಪವಾದೀತು"

ಎಂದಳು ರಾಜನು ಅದರ ಅರ್ಥ ಹೇಳಲೇಬೇಕೆಂದು ಒತ್ತಾಯ ಪಡಿಸಿದನು. ಆಗ ಅವಳು "ಮಹಾರಾಜ, ನಿನ್ನ ಸಚಿವನಾದ ಚಂದ್ರಹಾಸನನ್ನು ನೀನು ದೇಶಾಂತರಕ್ಕಟ್ಟಿದೆಯಲ್ಲ! ಅದರ ಕಾರಣವೇನು?'' ಎಂದು ಕೇಳಿದಳು. ಆಗ ರಾಜನು "ಅವನು ರಾಜಸಭೆಗೆ ಬಂದಕೂಡಲೇ ವಿನೋದ ಕಥಾಲಹರಿಯನ್ನೆಬ್ಬಿಸುತ್ತಿದ್ದನು. ಆಗ ಅವನ ಮುಖದಿಂದ ಪುಷ್ಪಗಳು ಉದುರುತ್ತಿದ್ದವು. ಈ ಸೋಜಿಗವನ್ನು ನೋಡಬೇಕೆಂಬ ಕುತೂಹಲದಿಂದ ಕಳಿಂಗದ ದೊರೆ ನನ್ನ ಆಸ್ಥಾನಕ್ಕೆ ಬಂದ. ಆದರೆ ಆಗ ಅವನು ಹಾಸ್ಯ ಮಾಡದೇ ನಗದೇ ತೆಪ್ಪಗೆ ಕುಳಿತ'' ಎಂದನು. ಆಗ ಆ ಸಚಿವಸುತೆಯು "ಚಂದ್ರಹಾಸನು ಏಕೆ ನಗಲಿಲ್ಲ?'' ಎಂದು ಕೇಳಿದಳು. ರಾಜನು ತನಗೆ ತಿಳಿದಿಲ್ಲವೆಂದನು. ಅವನನ್ನು ಕರೆಸಿ ಕೇಳಿದರೆ ತಾನು ಹೇಳಿದ ಶ್ಲೋಕದ ಹಾಗೂ ಮತ್ಸ್ಯವು ನಕ್ಕ ಅರ್ಥವು ರಾಜನಿಗೆ ಗೊತ್ತಾಗುವುದೆಂದು ಬಾಲ ಪಂಡಿತೆಯು ತಿಳಿಸಿದಳು.

ಆ ಕೂಡಲೇ ರಾಜನು ಚಂದ್ರಹಾಸನನ್ನು ಕರೆಸಲು ಕುದುರೆ ಸವಾರರನ್ನು ಅಟ್ಟಿದನು. ಚಂದ್ರಹಾಸನು ಮರಳಿದ ಬಳಿಕ ಏಕಾಂತ ಅರಮನೆಯಲ್ಲಿ ರಾಜನು ರಾಣಿ ಹಾಗೂ ಬಾಲಪಂಡಿತೆಯೊಡನೆ ಕುಳಿತು ಮಾತನಾಡ ತೊಡಗಿದನು. ರಾಜನು "ಚಂದ್ರಹಾಸ, ಆ ದಿನ ನೀನು ಕಳಿಂಗದ ದೊರೆ ಬಂದಾಗ ನಗಲಿಲ್ಲ. ಏಕೆ?" ಎಂದು ಪ್ರಶ್ನಿಸಿದನು. ಅದಕ್ಕೆ ಚಂದ್ರಹಾಸನು "ಮಹಾರಾಜ, ಅದರ ಹಿಂದಿನ ದಿನ ನನ್ನ ಹೆಂಡತಿಯು ಇದ್ದ ವಸ್ತ್ರಾಭರಣಗಳನ್ನೆಲ್ಲ ಕಟ್ಟಿಕೊಂಡು ಅಡಿಗೆಯವನೊಡನೆ ಓಡಿಹೋಗಿದ್ದಳು. ನನ್ನ ಮನೆ ದಾಸಿ ಮೂಲಕ ನನಗೆ ಅದು ತಿಳಿಯಿತು. ಆದುದರಿಂದ ನಾನು ಆ ದಿವಸ ಹಾಸ್ಯ ಮಾಡಲಿಲ್ಲ. ದುಃಖದಿಂದ ಮೌನವಾಗಿ ಕುಳಿತೆ" ಎಂದು ನುಡಿದನು. ಈ ಕಥೆಯನ್ನು ಕೇಳಿದ ರಾಣಿಯು ಗಹಗಹಿಸಿ ನಕ್ಕಳು. ಆಗ ರಾಜನು ಅಲ್ಲೇ ಇದ್ದ ಒಂದು ಪುಷ್ಪದಿಂದ ಅವಳ ಕೆನ್ನೆಗೆ ಹೊಡೆದನು. ಅವಳು ಮೂರ್ಛೆ ಹೋದವಳಂತೆ ಬಿದ್ದುಬಿಟ್ಟಳು. ರಾಜನೇ ಅವಳ ಉಪಚಾರ ಮಾಡಿದನು. ಅದನ್ನು ಕಂಡ ಚಂದ್ರಹಾಸನು ನಕ್ಕನು ಮತ್ತು ಅವನ ಮುಖದಿಂದ ಹೂಗಳು ಉದುರಿದುವು. ರಾಜನಿಗೆ ಕೋಪವುಕ್ಕೇರಿತು. "ರಾಣಿಯು ಮೂರ್ಛೆಹೋಗಿ ಬಿದ್ದಿರುವಾಗ ಯಾರಾದರೂ ನಗುವುದುಂಟೇ?

ನಗಲು ಕಾರಣವೇನು?" ಎಂದು ಕೇಳಿದನು.

ಆಗ ಚಂದ್ರಹಾಸನು "ಮಹಾರಾಜ, ತಾವು ಒಂದು ಪುಷ್ಪದಿಂದ ಹೊಡೆದಾಕ್ಷಣ ರಾಣಿಯವರು ಮೂರ್ಛೆ ಹೋದರು. ಆದರೆ ಅಶ್ವಪಾಲಕನು ಛಡಿಯಿಂದ ಹೊಡೆದರೂ ಏನೂ ಆಗಲಿಲ್ಲ. ಇದನ್ನು ಕಂಡು ನಗುಬಂದಿತು" ಎಂದನು. ಆಗ ರಾಜನು ಚಂದ್ರಹಾಸನನ್ನು ದೂರಕ್ಕೆ ಕರೆದು ಪ್ರಶ್ನಿಸಲು "ರಾಣಿಯು ಬೆನ್ನನ್ನು ನೋಡಿದರೆ ಗೊತ್ತಾಗುವುದು" ಎಂದು ಅರಿಕೆ ಮಾಡಿಕೊಂಡನು. ರಾಜನು ರಾಣಿಯ ಕಂಚುಕವನ್ನು ಬಿಚ್ಚಿ ನೋಡಲು ಬೆನ್ನ ಮೇಲೆ ಬಾಸುಂಡೆಗಳು ಕಾಣಿಸಿದುವು. ಕೂಡಲೇ ಅವಳ ಪಾತಿವ್ರತ್ಯದ ಬಗ್ಗೆ ರಾಜನು ಸಂಶಯ ಪಟ್ಟನು. ಮತ್ಸ್ಯವು ನಕ್ಕುದುದಾದರೂ ಇದಕ್ಕೇ ಮತ್ತು ಬಾಲಪಂಡಿತೆಯು ಆಡಿದ ಶ್ಲೋಕದ ಅರ್ಥವಾದರೂ ಅದೇ ಎಂದು ಚಂದ್ರಹಾಸನು ಹೇಳಿದನು. ಕೂಡಲೇ ರಾಜನು ಅವಳ ಶಿರಚ್ಛೇದನ ಮಾಡಿಸಿದನು.

ಆಗ ಮೋಹಿನಿಯು "ವೈದ್ಯನೇ, ಆ ಮೇಲೆ ತ್ರಿವಿಕ್ರಮನು ಏನು ಮಾಡಿದನು?" ಎಂದು ಪ್ರಶ್ನಿಸಿದಳು. ಮೋಹನದಾಸನು, "ಮೋಹಿನೀ, ತ್ರಿವಿಕ್ರಮನು ಆ ಮೇಲೆ ರಾಜಸಭೆಯನ್ನು ಕೂಡಿಸಿ, ತನಗೆ ಸ್ತ್ರೀ ನೀತಿ ಚರಿತ್ರೆಯನ್ನು ಅರುಹಬೇಕೆಂದು ಆಜ್ಞಾಪಿಸಿದನು. ಆಗ ಯಾರಿಗೂ ಮಾತನಾಡಲು ಧೈರ್ಯ ಬರಲಿಲ್ಲ. ವೃದ್ಧನಾದ ಮಂತ್ರಿಯೊಬ್ಬನು ಮಾತ್ರ ಎದ್ದು ನಿಂತು "ಮಹಾರಾಜ, ಅದನ್ನು ವಿವರಿಸಲು ಮನುಷ್ಯರಿಗೆ ಅಸಾಧ್ಯವಾಗಿದೆ" ಎಂದು ನುಡಿದನು. ಆದರೆ ದಾಸಿಯೊಬ್ಬಳು ಎದ್ದು ನಿಂತು "ಮಹಾರಾಜ, ಈ ನಗರದಲ್ಲಿ ರಂಗಾವತಿ ಎಂಬ ಹೆಸರಿನ ಒಬ್ಬಳು ಸ್ತ್ರೀ ಇರುವಳು. ಅವಳು ಹೇಳಬಲ್ಲಳು" ಎಂದು ಅರಿಕೆ ಮಾಡಿಕೊಂಡಳು. ಆಗ ತ್ರಿವಿಕ್ರಮನು ವೇಷವನ್ನು ಪಲ್ಲಟ ಮಾಡಿಕೊಂಡು ರಂಗಾವತಿಯ ಮನೆಗೆ ತೆರಳಿದನು ಮತ್ತು ಅಲ್ಲಿಗೆ ತೆರಳಿದ ಮೇಲೆ ತನ್ನ ಗುರುತನ್ನೂ ತಾನು ಬಂದ ಕಾರಣವನ್ನೂ ತಿಳಿಸಿದನು. ಅದನ್ನು ಕೇಳಿ ರಂಗಾವತಿಯು "ಮಹಾರಾಜ, ಸ್ತ್ರೀ ನೀತಿ ಚರಿತ್ರವನ್ನು ತಿಳಿಯುವುದು ಸುಲಭವಲ್ಲ" ಎಂದಳು. ಮಹಾರಾಜನು ತಿಳಿದುಕೊಳ್ಳಬೇಕೆಂದು ಬಯಸಿದುದರಿಂದ ಅವಳು ಅಪ್ಪಾಜಿಯ ಕಥೆಯನ್ನು ಹೇಳಿದರು.

# ೧೯. ಅಪ್ಪಾಜಿಯು ಕಥೆ

ಪೂರ್ವಕಾಲದಲ್ಲಿ ಅನಂತಪುರದಲ್ಲಿ ಅಪ್ಪಾಜಿ ಎಂಬೊಬ್ಬ ಸರದಾರ ನಿದ್ದನು. ಯುದ್ಧದಲ್ಲಿ ಭಾಗವಹಿಸಿದುದರಿಂದ ಅನೇಕ ವರುಷಗಳ ವರೆಗೆ ಅವನು ವಿದೇಶಗಳಲ್ಲೇ ವಾಸಿಸಬೇಕಾಯಿತು. ಆ ಕಾಲಕ್ಕೆ ಅವನ ಹೆಂಡತಿಯು ದುರ್ಮಾರ್ಗಕ್ಕೆ ಇಳಿದಳು. ಕಂಡ ಕಂಡವರನ್ನು ಮೋಹಿಸಿ ತನ್ನ ಕಾಮಾತುರವನ್ನು ಪರಿಹರಿಸಿಕೊಳ್ಳುತ್ತಿದ್ದಳು. ಹೀಗಿರುತ್ತಿರಲು ಆ ಸರದಾರನು ಊರಿಗೆ ಹಿಂತಿರುಗಿದನು. ಅವನ ಹೆಂಡತಿಗೆ ಅದು ಇಷ್ಟವಾಗಲಿಲ್ಲ. ಆದರೆ ಅದನ್ನು ಹೊರಗೆ ತೋರಿಸದೆ ಬಹಳ ಆದರ ಮಾಡತೊಡಗಿದಳು. ಕಪಟವನ್ನರಿಯದ ಅಪ್ಪಾಜಿ ತನ್ನ ಹೆಂಡತಿಯ ಗುಣಶೀಲಗಳಿಗೆ ಮನಸೋತು ಹೋದನು.

ಒಮ್ಮೆ ಅವನ ಹೆಂಡತಿಯು ಅವನ ಕೈಯಲ್ಲಿ ಒಂದು ಹಸಿ ಒಲೆಯನ್ನು ಕೊಟ್ಟು ಇದನ್ನು ಮಾರಿ ಬಾ ಎಂದು ಕಳಿಸಿದಳು. ಅವನು ಅದನ್ನು ಹೊತ್ತುಕೊಂಡು ದೂರದ ಪೇಟೆಗೆ ತೆರಳಿದನು. ಆದರೆ ಯಾರೂ ಅದನ್ನು ತೆಗೆದುಕೊಳ್ಳಲಿಲ್ಲ. ಅಲ್ಲಿಂದ ಮತ್ತೊಂದು ಊರಿಗೆ ತೆರಳಿದನು. ಹೀಗೆ ಏಳೆಂಟು ದಿನಗಳು ಕಳೆದವು. ಒಂದು ಸಲ ಅವನು ಮರದ ಕೆಳಗೆ ಮೂರು ಕಲ್ಲುಗಳನ್ನು ಇಟ್ಟು ಅನ್ನ ಬೇಯಿಸುತ್ತಿದ್ದನು. ಆ ದಾರಿಯಾಗಿ ಮೂರು ಜನ ತರುಣಿಯರು ಅದನ್ನು ಕಂಡು ಗಹಗಹಿಸಿ ನಕ್ಕರು. ತನ್ನಲ್ಲಿ ಉತ್ತಮವಾದ ಒಲೆಯಿದ್ದರೂ ಕೂಡಾ ಅದನ್ನು ಬದಿಗಿಟ್ಟು ಕಲ್ಲುಗಳ ಒಲೆಮಾಡಿ ಅಡಿಗೆ ಮಾಡುವುದನ್ನು ನೋಡಿ ಅವರಿಗೆ ಆಶ್ಚರ್ಯವಾಗುತ್ತಿತ್ತು. ಅಪ್ಪಾಜಿಯು ಅವರಿಗೆ ತನ್ನ ಹೆಂಡತಿಯ ವಿಷಯವನ್ನೆಲ್ಲ ಹೇಳಿದನು. ಆಗ ಅವಳು ಪತಿತೆ ಎಂದು ಆ ಮೂರೂ ಯುವತಿಯರಿಗೆ ಹೊಳೆಯಿತು ಮತ್ತು ಇವನು ಬುದ್ಧಿಗೇಡಿ ಎಂದೂ ತಿಳಿಯಿತು. ಅವನಿಗೆ ಸ್ತ್ರೀ ಚರಿತ್ರವನ್ನು ಕಲಿಸಬೇಕು. ಅಂದರೆ ತನ್ನ ಹೆಂಡತಿ ಮಾಡುವ ದುಷ್ಕೃತ್ಯಗಳೆಲ್ಲ ಗೊತ್ತಾಗುತ್ತದೆ ಎಂದವರು ನಿರ್ಧರಿಸಿ ತಂತಮ್ಮೊಳಗೆ ಮಾತನಾಡಿಕೊಂಡರು. ಆ ಮೇಲೆ ಒಬ್ಬಳು ಅವನ ಸಮೀಪ ಬಂದು "ನಾಳೆ ನಮ್ಮಲ್ಲಿ ಬ್ರಾಹ್ಮಣರಿಗೆ

ಅನ್ನ ಸಂತರ್ಪಣೆಯನ್ನು ಏರ್ಪಡಿಸಿದೆ. ನೀನು ಬ್ರಾಹ್ಮಣ ವೇಷ ಹಾಕಿ ಕೊಂಡು ಊಟಕ್ಕೆ ಬಾ. ನಿನಗೆ ಸ್ತ್ರೀನೀತಿ ಚರಿತ್ರೆಯನ್ನು ಕಲಿಸುತ್ತೇನೆ'' ಎಂದು ಹೊರಟು ಹೋದಳು.

ಅಪ್ಪಾಜಿಯು ಮರುದಿನ ಊಟಕ್ಕೆ ಹೋದನು. ಅವನು ಮನೆಗೆ ಬಂದುದನ್ನು ಕಂಡ ಆ ತರುಣಿಯು ಸನ್ನೆಯಿಂದ ಅಟ್ಟಕ್ಕೆ ಬರಲು ಹೇಳಿ ದಳು. ತನ್ನ ದಾಸಿಯನ್ನು ಅಟ್ಟದ ಬಾಗಿಲಿನಲ್ಲಿ ಕುಳ್ಳಿರಿಸಿದಳು. ಮತ್ತು ಅಪ್ಪಾಜಿಯೊಂದಿಗೆ ಮಂಚದಲ್ಲಿ ಮಲಗಿ ತೃಪ್ತಿಯಾಗುವ ವರೆಗೂ ಕಾಮ ಸುಖವನ್ನು ಅನುಭವಿಸಿ ಕಳಿಸಿದಳು. ಸಂಜೆ ಆ ಎಲ್ಲ ಗೆಳತಿಯರೂ ಕೂಡಿ ದರು ಮತ್ತು ತಾನು ತೋರಿಸಿದ ಸ್ತ್ರೀನೀತಿ ಚರಿತ್ರವನ್ನು ಒಬ್ಬಳು ತಿಳಿಸಿದ ಳು. ಅದರಲ್ಲೇನೂ ಮಹತ್ವವಿಲ್ಲವೆಂದು ಮತ್ತೊಬ್ಬಳು ನುಡಿದಳು. ತಾನು ಇದ ಕ್ಕಿಂತ ಅಗಾಧ ಕಾರ್ಯವನ್ನು ತೋರಿಸುತ್ತೇನೆಂದು ಹೇಳಿ ಅಪ್ಪಾಜಿ ಇದ್ದಲ್ಲಿಗೆ ತೆರಳಿದಳು. "ಬೈರಾಗಿ ವೇಷದಿಂದ ನೀನು ನಾಳೆ ನಮ್ಮ ಮನೆಗೆ ಬಾ'' ಎಂದು ಕರೆದು ಅವಳು ತನ್ನ ಮನೆಗೆ ಹೋದಳು. ಅಪ್ಪಾಜಿಯು ಬೈರಾಗಿ ವೇಷದಿಂದ ಬಂದ ಕೂಡಲೇ ಮನೆಯೊಳಗೆ ಕರೆದುಕೊಂಡು ಹೋಗಿ ಮಂಚದ ಕೆಳಗೆ ಅಡಗಿ ಕುಳಿತುಕೊಳ್ಳಲು ಹೇಳಿದಳು. ರಾತ್ರಿ ಊಟವಾದ ಮೇಲೆ ಅವಳ ಪತಿಯು ಬಂದು ಮಲಗಿಕೊಂಡನು. ಅವನ ಹೆಂಡತಿ ಕಾಲು ಗಳನ್ನು ಒತ್ತತೊಡಗಿದಳು. ಅವನು ಹೊಟ್ಟೆ ಮೇಲೆ ಮಲಗಿಕೊಂಡು ಬೆನ್ನು ತಿಕ್ಕು ಎಂದು ಹೇಳಿದನು. ಆಗ ಅವಳು ಅವನ ಬೆನ್ನ ಮೇಲೆ ತಾನೂ ಬೆನ್ನು ಹಾಕಿ ಮಲಗಿದಳು. ಮಂಚದ ಅಡಿ ಕುಳಿತಿದ್ದ ಅಪ್ಪಾಜಿಯನ್ನು ಕಾಲಿನಿಂದ ತುಳಿದು ಕರೆದಳು. ಅವನು ಬಂದು ಕ್ರೀಡಾಸಕ್ತನಾದನು. ಬೆನ್ನಿನ ಮೇಲೆ ಏಕಿಷ್ಟು ಭಾರ ಹಾಕುತಿದ್ದೀ ಎಂದು ಅವಳ ಪತಿ ಕೇಳಲು "ಬೆನ್ನು ಬಹಳ ತುರಿಸುತ್ತಿದೆ. ಅದಕ್ಕೆ ನಿಮ್ಮ ಬೆನ್ನನ್ನು ತಿಕ್ಕುತಿದ್ದೇನೆ" ಎಂದು ಅವಳು ನುಡಿದಳು. ರತಿಕ್ರೀಡೆ ಮುಗಿದ ಮೇಲೆ ಅಪ್ಪಾಜಿಯನ್ನು ಹೊರಗೆ ಕಳಿಸಿ ತಾನು ತೆಪ್ಪಗೆ ಮಲಗಿಕೊಂಡಳು.

ಮರು ದಿನ ಸಂಜೆ ಆ ಗೆಳತಿಯರು ತೋಟದಲ್ಲಿ ಕೂಡಿದಾಗ ಎರಡನೇ ತರುಣಿಯು ತಾನು ಮಾಡಿದ ಸಾಹಸವನ್ನು ವರ್ಣಿಸಿದಳು. ಅದಕ್ಕಿಂತಲೂ ಅಗಾಧ ಕಾರ್ಯ ಮಾಡುತ್ತೇನೆಂದು ಪಣ ತೊಟ್ಟು ಮೂರನೇಯವಳು

ಅಪ್ಪಾಜಿಯ ಹತ್ತಿರ ಹೋದಳು. ರಾತ್ರಿ ತನ್ನ ಮನೆಯ ತೋಟಕ್ಕೆ ಬಂದು ನಿಶ್ಚಿತವಾದ ಒಂದು ಮರದ ಮೇಲೇರಿ ಕುಳಿತುಕೊಳ್ಳಬೇಕೆಂದು ಹೇಳಿದಳು. ಅದೇ ರಾತ್ರಿ ಆ ತರುಣಿಯು ಸೆಕೆಯ ನೆವದಿಂದ ತೋಟದಲ್ಲಿ ತನ್ನ ಹಾಸಿಗೆಯನ್ನು ಹಾಸಿದಳು. ಪತಿಯನ್ನು ಕರೆದುಕೊಂಡು ಅಲ್ಲೇ ಬಂದಳು. ಸ್ವಲ್ಪ ಹೊತ್ತಾದ ಮೇಲೆ ಪತಿಯನ್ನುದ್ದೇಶಿಸಿ "ಆ ಮಾವಿನ ಮರದ ಮೇಲೊಂದು ಹಣ್ಣಿದೆ. ಅದು ಬಹಳ ಸವಿ. ಅದನ್ನು ಕೊಯ್ದು ಕೊಟ್ಟರೆ ಬಹಳ ಸಂತೋಷವಾಗುತ್ತದೆ'' ಎಂದು ನುಡಿದಳು. ಅವಳ ಪತಿಯು ಆ ಮಾತನ್ನು ನಂಬಿ ಆ ಮಾವಿನ ಮರವನ್ನೇರಿದನು. ಆಗ ಅವಳು ಅಪ್ಪಾಜಿಯನ್ನು ಕರೆದುರತಿಕ್ರೀಡೆಯಾಡ ತೊಡಗಿದಳು. ಮರವನ್ನೇರಿದ ಪತಿಗೆ ಅದು ಕಂಡಿತು. ಆಗ ಅವನು ರೇಗಿ ಕೆಳಗಿಳಿಯ ತೊಡಗಿದನು. ಅವನು ಇಳಿಯುವದರೊಳಗೆ ಅಪ್ಪಾಜಿಯು ಅಲ್ಲಿಂದ ಹೊರಟು ಹೋಗಿದ್ದನು. "ನಾನು ಮರವೇರಿದಾಗ ಪರಪುರುಷನೊಡನೆ ಭೋಗಿಸುತಿದ್ದೀಯಾ ?'' ಎಂದು ಪತಿಯು ಕೇಳಲು "ಸ್ವಾಮಿ, ನಾನು ಪರಪುರುಷನನ್ನು ಕನಸಿನಲ್ಲಿಯೂ ನೆನಸುವವಳಲ್ಲ. ನೀವು ಇಷ್ಟರವರೆಗೆ ಮರವನ್ನೇರಿದವರಲ್ಲ. ಆದುದರಿಂದ ತಲೆ ತಿರುಗಿರಬೇಕು. ನಾನು ಈಗ ಮರಹತ್ತಿ ನೋಡುತ್ತೇನೆ'' ಎಂದು ಹೇಳಿ ತಾನು ಮರವೇರಿದಳು. ಆ ಮೇಲೆ ಅವಳು "ಸ್ವಾಮಿ, ನೀವು ಇಂತಹ ಅನ್ಯಾಯವನ್ನು ಮಾಡಬಹುದೇ ? ನಾನು ಮರವೇರಿದ ಕೂಡಲೇ ಪರಸ್ತ್ರೀಯನ್ನು ಕರೆದುಕೊಂಡು ರತ್ಯಾಸಕ್ತರಾಗಬಹುದೇ ? ಅವಳು ಯಾರು ?'' ಎಂದು ಕೇಳಿದಳು. ಆಗ ಅವಳ ಪತಿಯು ಆಶ್ಚರ್ಯಪಟ್ಟು "ನನಗೆ ತೋರಿದಂತೆಯೇ ನಿನಗೂ ಕಂಡಿತು. ಇದು ದೆವ್ವಗಳ ಕಾಟವಿದ್ದಂತೆ ತೋರುತ್ತದೆ. ಇಲ್ಲಿ ಮಲಗಿಕೊಳ್ಳುವವುದು ಬೇಡ. ಮನೆಗೆ ತೆರಳೋಣ'' ಎಂದನು. ಆ ಮೇಲೆ ಅವರು ಹಾಸಿಗೆಯನ್ನು ಮನೆಯೊಳಗೊಯ್ದರು.

ಆ ಮೇಲೆ ಆ ಮೂವರೂ ಬಂದು ಅಪ್ಪಾಜಿಯನ್ನು ಕಂಡು "ನಾವು ನಿನಗೆ ಸ್ತ್ರೀಚರಿತ್ರೆಯನ್ನು ತೋರಿಸಿದೆವು. ನಿನ್ನ ಹೆಂಡತಿಯೂ ಇದರಂತೆ ಇದ್ದಾಳೆ. ನಿನ್ನನ್ನು ಈ ನೆವದಿಂದ ಇತ್ತ ಕಳಿಸಿ ಸ್ವಅತ್ತ ಸುಖಮತ್ತಳಾಗಿದ್ದಾಳೆ'' ಎಂದಳು. ಅದನ್ನು ಕೇಳಿ ಅಪ್ಪಾಜಿಗೆ ರೋಷ ಬಂದಿತು. ಅದೇ ದಿನ ಊರಿಗೆ ಮರಳಿದನು. ಹೆಂಡತಿಯೊಂದಿಗೆ ಬಹಳ ಪ್ರೇಮವನ್ನು ನಟ

ಸುತ್ತಾ ಇರತೊಡಗಿದನು. ದಿನಂಪ್ರತಿ ಅವಳು ನಡೆಸುತ್ತಿರುವ ದುಷ್ಕರ್ಮ ಗಳೆಲ್ಲ ಅವನಿಗೆ ಗೊತ್ತಾಗತೊಡಗಿತು. ಅವನು ಅವಳನ್ನು ಶಿಕ್ಷಿಸಿ, ತ್ಯಜಿಸಿ ಬೇರೊಬ್ಬಳನ್ನು ಮದುವೆಯಾಗಿ ಸುಖದಿಂದ ಇರತೊಡಗಿದನು.

ಮಹಾರಾಜ, ಹೀಗೆ ಸ್ತ್ರೀನೀತಿಚರಿತ್ರವಿದೆ. ಹೊರಗೆ ಬಹಳ ಸುಭಗೆಯು ರಂತೆ ಅನೇಕರು ತೋರಿಸಿಕೊಳ್ಳುತ್ತಾರೆ. ಆದರೆ ಒಳಗಿಂದೊಳಗೆ ಅವರು ಮಾಡುವ ದುಷ್ಕೃತಿಗಳು ಒಂದೆರಡಲ್ಲ. ಅದನ್ನು ತಿಳಿದುಕೊಳ್ಳಲೆತ್ನಿಸುವದೇ ಬೇಡ'' ಎಂದಳು. ಆದರೆ ರಾಜನಿಗೆ ಅದರಿಂದ ಸಮಾಧಾನವಾಗಲಿಲ್ಲ. ಆದುದರಿಂದ ರಂಗಾವತಿಯು ಇನ್ನೊಂದು ಉದಾಹರಣೆ ಕೊಟ್ಟಳು.

## ೨೦. ರಾಘವನ ಕಥೆ

ಪ್ರಾಚೀನ ಕಾಲದಲ್ಲಿ ಇಂದ್ರಗಡದಲ್ಲಿ ಒಬ್ಬ ಸರದಾರನಿದ್ದನು. ಅವನಿಗೆ ರಾಘವನೆಂಬ ಒಬ್ಬ ಮಗನಿದ್ದನು. ತಂದೆಯು ತೀರಿಕೊಂಡ ಬಳಿಕ ರಾಘವನು ಆ ಸರದಾರನ ಕೆಲಸಕ್ಕೆ ಹೋಗಲಿಲ್ಲ. ಕೆಲಸ ಮಾಡಲೂ ಅವನಿಗೆ ಮನಸ್ಸಿದ್ದಿಲ್ಲ. ತಿಂದುರಡು ತಿರುಗುವುದರಲ್ಲೇ ಅವನ ಆಸಕ್ತಿ. "ಕೂತುಂಬವನಿಗೆ ಕುಡಿಕೆ ಹಣ ಸಾಲದು" ಎಂಬ ಗಾದೆಯಂತೆ ಮೈಗಳ್ಳ ನಾದ ರಾಘವನು ತಂದೆ ಕೂಡಿಸಿಟ್ಟಿದ್ದ ದ್ರವ್ಯಗಳನ್ನೆಲ್ಲ ಮುಗಿಸಿದನು. ಹೇಳಲಾರದ ಬಡತನಕ್ಕೂ ಇಳಿದನು. ಮೈಮೇಲೆ ಬಟ್ಟೆ ಬರೆ ಹಾಕಿಕೊ ಳ್ಳಲೂ ಅವನಿಗೆ ದುಡ್ಡಿರಲಿಲ್ಲ. ಅಗಸರವರಿಂದ ಬಾಡಿಗೆಗೆ ಬಟ್ಟೆ ಬರೆ ತೆಗೆದು ಕೊಂಡು ಅವುಗಳನ್ನೇ ಧರಿಸಿ ಅತ್ತಿತ್ತ ಅಲೆದಾಡುತಿದ್ದನು.

ಒಂದು ದಿನ ಅವನು ರಸ್ತೆಯಲ್ಲಿ ಹೋಗುತಿದ್ದಾಗ ಇದಿರಿನ ಮನೆಯ ಉಪ್ಪರಿಗೆಯಲ್ಲಿ ಲಾವಣ್ಯವತಿಯಾದ ತರುಣಿಯೊಬ್ಬಳನ್ನು ಕಂಡನು. ಅವಳು ಒಬ್ಬ ರತ್ನ ವ್ಯಾಪಾರಿಯ ಎರಡನೇ ಹೆಂಡತಿಯಾಗಿದ್ದಳು. ಅವ ಳನ್ನು ಕಂಡಕೂಡಲೇ ರಾಘವನು ಮೋಹಪಾಶಕ್ಕೆ ಸಿಲುಕಿದನು. ಅವಳನ್ನು ಎಷ್ಟು ಕಂಡರೂ ತೃಪ್ತಿಯಿಲ್ಲ. ಅವಳನ್ನು ಬಿಟ್ಟು ಹೋಗಲು ಇಷ್ಟವಿಲ್ಲ. ರಸ್ತೆಯ ಬದಿಯಲ್ಲಿ ನಿಂತ ಅವಳನ್ನೇ ನೋಡತೊಡಗಿದನು. ಅವಳೊಡನೆ ಸುಖ ಪಡೆಯದ ಬಾಳು ವ್ಯರ್ಥ ಎಂದಂದುಕೊಂಡು ತನ್ನ ಬಡತನವನ್ನೇ

ಹಳಿದುಕೊಂಡನು. ಅಷ್ಟರಲ್ಲಿ ಆ ರಮಣಿಯ ದೃಷ್ಟಿಯೂ ಅವನ ಮೇಲೆ ಬಿದ್ದಿತು. ಅವನ ರೂಪ ಮತ್ತು ಯೌವನಗಳನ್ನು ಕಂಡು ಅವನ ಮನಸ್ಸೂ ವಿಹ್ವಲವಾಯಿತು. ತನ್ನನ್ನೇ ಅವನು ದಿಟ್ಟಿಸುತ್ತಿರುವನೆಂದೂ ಅವಳಿಗೆ ಖಚಿತವಾಯಿತು. ಆದುದರಿಂದ ಅವಳು ತನ್ನ ದಾಸಿಯನ್ನು ಕಳಿಸಿ ಅವನನ್ನು ಕರೆಸಿದಳು.

ರಾಘವನು ಬಂದ ಕೂಡಲೇ ಅವಳು ಅವನನ್ನು ಕೈಹಿಡಿದು ಕುಳ್ಳಿರಿಸಿದಳು. ಅವನನ್ನು ನಾನಾ ರೀತಿಯ ಉಪಚಾರಗಳಿಂದ ಒಲಿಸಿ, ಕದವಿಕ್ಕಿಕೊಂಡು ಆಗಲೇ ರತಿಸುಖವನ್ನು ಪಡೆದಳು. ಅವನು ಹೊರಡುವಾಗ ಆ ನಾರೀಮಣಿಯು ಐದು ನಾಣ್ಯಗಳನ್ನು ಅವನ ಕೈಯಲ್ಲಿತ್ತು ಪ್ರತಿದಿನವೂ ಅದೇ ಸಮಯಕ್ಕೆ ಬಂದು ತನ್ನ ಮನೋಭಿಲಾಷೆಯನ್ನು ಪೂರ್ತಿಗೊಳಿಸಬೇಕೆಂದು ತಿಳಿಸಿದಳು ರಾಘವನು ಸಂತೋಷದಿಂದ ಒಪ್ಪಿಕೊಂಡು ಹೊರಬಿದ್ದನು. ಆ ಮೇಲೆ ಆ ನಾಣ್ಯಗಳನ್ನು ಚಿಲ್ಲರೆ ಮಾಡಿಸಬೇಕೆಂದು ಒಬ್ಬ ವ್ಯಾಪಾರಿಯ ಅಂಗಡಿಗೆ ಹೋದನು. ಕರ್ಮಧರ್ಮ ಸಂಯೋಗದಿಂದ ಅದು ಅವಳ ಪತಿಯ ಅಂಗಡಿಯೇ ಆಗಿತ್ತು. ರಾಘವನು ನಾಣ್ಯದ ಮೋಹರುಗಳನ್ನು ಕೊಟ್ಟ ಕೂಡಲೇ ಅದು ತಾನು ತನ್ನ ಹೆಂಡತಿಗೆ ಕೊಟ್ಟಿದ್ದ ಮೊಹರುಗಳೆಂದು ಆ ವ್ಯಾಪಾರಿಗೆ ತಿಳಿದು ಬಂದಿತು. ಆಗ ಆ ವ್ಯಾಪಾರಿಯು ರಾಘವನನ್ನು ಏಕಾಂತ ಸ್ಥಳಕ್ಕೆ ಕರೆದು ಆ ನಾಣ್ಯಗಳು ಹೇಗೆ ದೊರೆತುವು ಎಂದು ಪ್ರಶ್ನಿಸಿದನು. ರಾಘವನು ತನ್ನ ಪ್ರೇಮರಹಸ್ಯವನ್ನೆಲ್ಲ ಆ ವ್ಯಾಪಾರಿಯ ಮುಂದೆ ಹೇಳಿದನು. ತನ್ನ ಹೆಂಡತಿಯು ಈ ರೀತಿ ನೀತಿಗಳಿದ್ದುದು ಅವನಿಗೆ ತಿಳಿದರೂ ಅವನು ತನ್ನ ಕೋಪವನ್ನು ಹೊರಗೆ ಪ್ರದರ್ಶಿಸಲಿಲ್ಲ. ಅವನ ಪ್ರೇಯಸಿಯನ್ನು ತನಗೊಮ್ಮೆ ತೋರಿಸಬೇಕೆಂದು ಮಾತ್ರ ಅರಿಕೆ ಮಾಡಿಕೊಂಡನು. ಆಗ ರಾಘವನು "ನಾಳೆ ನಾನು ಇದೇ ಸಮಯಕ್ಕೆ ಅವಳ ಮನೆಗೆ ತೆರಳುತ್ತೇನೆ. ನೀನು ಬಾ. ಅವಳ ದರ್ಶನ ಮಾಡಿಸುತ್ತೇನೆ" ಎಂದನು.

ಅದರಂತೆ ಮೂರನೇ ದಿನ ರಾಘವನು ದಿವ್ಯವಸ್ತ್ರಗಳನ್ನು ಧರಿಸಿ ಆ ವ್ಯಾಪಾರಿಯ ಬಳಿಗೆ ಬಂದು ಅವನನ್ನು ಕರೆದುಕೊಂಡು ತನ್ನ ಸಖಿಯ ಮನೆಗೆ ಹೊರಟನು. ಅವರು ಸ್ವಲ್ಪ ದೂರ ಹೋಗುವಷ್ಟರಲ್ಲೇ ಒಬ್ಬ ಸಿಪಾ

ಯಿಯು ಬಂದು ರಾಜರು ಬರಹೇಳುತ್ತಾರೆಂದು ನುಡಿದನು. ವ್ಯಾಪಾರಿಯು ರಾಘವನನ್ನು ತನ್ನ ಅಂಗಡಿಯಲ್ಲಿ ಕುಳ್ಳಿರಿಸಿ ತಾನು ಅರಮನೆಗೆ ಹೋದನು. ರಾಘವನು ಸ್ವಲ್ಪ ಹೊತ್ತಿನ ವರೆಗೆ ಕುಳಿತು ಕೊನೆಗೆ ಬೇಸರದಿಂದ ಅಲ್ಲಿಂದೆದ್ದು ತನ್ನ ಪ್ರೀತಿ ಪಾತ್ರಳಾದವಳ ಮನೆಗೆ ಹೋದನು. ಅವಳು ಅವನನ್ನು ಆದರದಿಂದ ಸ್ವಾಗತಿಸಿದಳು. ಇಬ್ಬರೂ ಪ್ರೇಮಚೇಷ್ಟೆಗಳನು ಮಾಡುತ್ತ ರತ್ಯಾಸಕ್ತರಾದರು. ಅಷ್ಟರಲ್ಲಿ ಆ ವ್ಯಾಪಾರಿಯು ಬಂದು ಬಾಗಿಲು ಬಡಿದನು. ಅವನ ಹೆಂಡತಿಯೂ ರಾಘವನೂ ಗಾಬರಿಯಾದರು. ಪಾರಾಗಿ ಹೋಗುವ ಮಾರ್ಗವೇ ಇರಲಿಲ್ಲ. ಆಗ ಅವಳು ಹಾಸಿಗೆಯೊಂದಿಗೆ ಅವನನ್ನು ಸುತ್ತಿ ಕೋಣೆಯ ಮೂಲೆಯೊಳಗಿಟ್ಟಳು. ಮತ್ತು ಬಾಗಿಲನ್ನು ತೆರೆದಳು. ವ್ಯಾಪಾರಿಯು ಮನೆಯಲ್ಲಿ ಹುಡುಕಿ ರಾಘವನನ್ನು ಕಾಣದೆ ತನ್ನ ಅಂಗಡಿಗೆ ಮರಳಿದನು. ಅವನು ತೆರಳಿದ ಮೇಲೆ ಅವಳು ಹಾಸಿಗೆಯನ್ನು ಬಿಡಿಸಿ ರಾಘವನೊಂದಿಗೆ ಮತ್ತೆ ಕ್ರೀಡಾಸಕ್ತಳಾದಳು. ಅವನಿಗೆ ಆ ದಿನ ಹತ್ತು ಮೊಹರು ನಾಣ್ಯಗಳನ್ನು ಕೊಟ್ಟು ಕಳಿಸಿದಳು. ರಾಘವನು ಮತ್ತೆ ಆ ವ್ಯಾಪಾರಿಯ ಅಂಗಡಿಗೆ ಬಂದು "ಸ್ನೇಹಿತನೇ, ನೀನು ಈ ದಿವಸ ಬಾರದೇ ಇದ್ದುದು ಒಳ್ಳೇದಾಯಿತು" ಎಂದು ಹೇಳಿ ನಡೆದ ಸಂಗತಿಯನ್ನೆಲ್ಲ ಹೇಳಿದನು. ವ್ಯಾಪಾರಿಗೆ ದುಃಖವಾಯಿತು. ಆದರೆ ಅವನು ಅದನ್ನು ಹೊರಗೆ ತೋರ್ಪಡಿಸದೆ ಆ ಹತ್ತು ಮೊಹರುಗಳ ಚಿಲ್ಲರೆ ಕೊಟ್ಟು ಮರುದಿನ ತನ್ನನ್ನು ಕರೆದುಕೊಂಡು ಹೋಗಬೇಕೆಂದು ನುಡಿದನು.

ಎರಡನೇ ದಿನವೂ ಆ ರತ್ನ ವ್ಯಾಪಾರಿಯು ರಾಘವನೊಂದಿಗೆ ಹೊರಟಾಗ ಮತ್ತೊಬ್ಬರು ಶ್ರೀಮಂತರು ಕರೆಕಳಿಸಿದರು. ರಾಘವನೊಬ್ಬನೇ ಆ ಇಂದು ವದನೆಯ ಮನೆಗೆ ಬಂದು ಸರಸಲ್ಲಾಪದಲ್ಲಿ ಉದ್ಯುಕ್ತನಾದನು. ಅಷ್ಟರಲ್ಲಿ ಅವಳ ಪತಿಯು ಬಂದು ಬಾಗಿಲು ಬಡೆದನು. ಅವನ ಹೆಂಡತಿಯು ರಾಘವನನ್ನು ಧಾನ್ಯದ ಕಣಜದಲ್ಲಿ ಬಚ್ಚಿಟ್ಟಳು. ವ್ಯಾಪಾರಿಯು ಬಂದವನೇ ಕಠಾರಿಯಿಂದ ಹಾಸಿಗೆಯನ್ನು ಚುಚ್ಚಿದನು. ಅತ್ತಿತ್ತ ತಿವಿದನು. ಎಲ್ಲಿಯೂ ಅವನು ಕಾಣಸಿಗಲಿಲ್ಲ. ಆಗ ಕೋಪೋದ್ರೇಕದಿಂದ ಸಿಕ್ಕ ಸಿಕ್ಕ ಸಾಮಾನು ಗಳನ್ನೆಲ್ಲ ನೆಲಕ್ಕೆ ಒಗೆಯ ತೊಡಗಿದನು. ಇದನ್ನು ಕಂಡ ಅವಳು ಅವನನ್ನು ನಾನಾ ರೀತಿಯಾಗಿ ಸಮಧಾಯಿಸಿದಳು. ಯಾರೋ ನೀಚರು ತನ್ನ ಬಗ್ಗೆ

ಇಲ್ಲದ ದೂರುಗಳನ್ನು ಹೇಳಿರಬೇಕೆಂದು ನುಡಿದಳು. ಪರರ ಮಾತನ್ನು ನಂಬಿ ಆ ರೀತಿ ವರ್ತಿಸಬಾರದೆಂದೂ ಹೇಳಿದಳು. ವ್ಯಾಪಾರಿಯ ಸಿಟ್ಟು ಇಳಿಯಿತು. ಇಬ್ಬರೂ ಹರಟೆ ಹೊಡೆಯುತ್ತ ಕುಳಿತರು. ಅವನು ಹೊರಟು ಹೋದ ಮೇಲೆ ಇಂದು ವದನೆಯು ರಾಘವನನ್ನು ಕಣಜದಿಂದ ಮೇಲಕ್ಕೆತ್ತಿದಳು. ಆ ಮೇಲೆ ಇಬ್ಬರೂ ತಮಗೆ ತೃಪ್ತಿಯಾಗುವ ವರೆಗೂ ರತಿ ಸುಖವನ್ನು ಅನುಭವಿಸಿದರು. ಅವನು ಹೊರಟಾಗ ಇಂದು ವದನೆಯು ಇಪ್ಪತ್ತು ಮೊಹರುಗಳನ್ನು ಕೊಟ್ಟು ಕಳಿಸಿದಳು. ರಾಘವನು ವ್ಯಾಪಾರಿ ಯಿದ್ದಲ್ಲಿಗೆ ಬಂದು ನಡೆದ ಸಂಗತಿಯನ್ನು ತಿಳಿಸಿದನು. "ನಿನ್ನೊಂದಿಗೆ ಬರಬೇಕೆಂದರೆ ಏನಾದರೊಂದು ವಿಘ್ನವು ಬಂದೇ ಬರುತ್ತದೆ. ಆದರೆ ನಾಳೆ ಎಲ್ಲ ಕೆಲಸವನ್ನು ಬದಿಗಿಟ್ಟು ಬರುತ್ತೇನೆ" ಎಂದನು.

ಮೂರನೇ ದಿನ ರಾಘವನು ಬಂದು ವ್ಯಾಪಾರಿಯನ್ನು ಕರೆದನು. "ಕೆಲಸವಿರುವುದರಿಂದ ಬರಲಾರೆ. ನೀನೇ ಹೋಗುವಾಗು" ಎಂದು ಅವನನ್ನು ಕಳಿಸಿದನು. ಅವನು ಹೋದ ಮೇಲೆ ತಾನು ಮನೆಗೆ ತೆರಳಿ ಕದ ತಟ್ಟಿದನು. ಅವನ ಹೆಂಡತಿಯು ರಾಘವನನ್ನು ಒಂದು ಪೆಟ್ಟಿಗೆಯಲ್ಲಿ ಕುಳ್ಳಿರಿಸಿ ಕೀಲಿ ಹಾಕಿದಳು. ವ್ಯಾಪಾರಿಯು ಬಂದವನು ಹಾಸಿಗೆ, ಕಣಜ ಹಾಗೊ ಎಲ್ಲ ಕಡೆಗಳಲ್ಲೂ ಹುಡುಕಿದನು. ಆದರೆ ಅವನು ಎಲ್ಲೂ ಕಾಣಸಿಗಲಿಲ್ಲ. ಎಲ್ಲೋ ಅಡಗಿರಬೇಕೆಂದು ಅವನಿಗನ್ನಿಸಿತು. ಮನೆಗೆ ಬೆಂಕಿ ಹಚ್ಚಿದರೆ ಒಳಗಿಂದೊಳಗೇ ಸುಟ್ಟು ಹೋಗುತ್ತಾನೆಂದೂ ಕಲ್ಪಿಸಿದನು. ಅಮೂಲ್ಯ ವಸ್ತು ವಸ್ತ್ರ ಒಡವೆಗಳುಳ್ಳ ಪೆಟ್ಟಿಗೆಗಳನ್ನೆಲ್ಲ ಹೊರಗೆ ಇರಿಸಿದನು. ಆ ಮೇಲೆ ಬೆಂಕಿಕೊಟ್ಟನು. ಅವನ ಹೆಂಡತಿಯು ಸೇವಕರ ಕೂಡ ರಾಘವನು ಕುಳಿತಿದ್ದ ಪೆಟ್ಟಿಗೆಯನ್ನು ಹೊರಗೆ ಕಳಿಸಿದ್ದಳು. ಕತ್ತಲೆಯಲ್ಲಿ ಅದರ ಕೀಲಿ ತೆಗೆದು ಅವನನ್ನು ದೂರ ಕರೆದುಕೊಂಡೊಯ್ದು ಅವನೊಂದಿಗೆ ಕಾಮಸುಖ ಪಟ್ಟು ಅವನಿಗೆ ನಲ್ವತ್ತು ನಾಣ್ಯಗಳನ್ನು ಕೊಟ್ಟು ಕಳಿಸಿದಳು. ರಾಘವನು ಮರುದಿನ ವ್ಯಾಪಾರಿಯ ಅಂಗಡಿಗೆ ಬಂದು ನಡೆದುದೆಲ್ಲವನ್ನು ತಿಳಿಸಿ ಅವನಿಂದ ಚಿಲ್ಲರೆ ನಾಣ್ಯ ಪಡೆದು ಹೋದನು.

ಆಗ ಆ ವ್ಯಾಪಾರಿಯು ಚಿಂತಾಮಗ್ನನಾದನು. ಸ್ತ್ರೀಯರು ದುಷ್ಕರ್ಮಕ್ಕಿಳಿದುದನ್ನು ಕಂಡುಹಿಡಿಯುವುದೂ ಕಷ್ಟ. ಕಂಡುಹಿಡಿಯದೆ ಶಿಕ್ಷಿಸಿದರೆ

ಜನರು ಬಿಡಲಿಕ್ಕಿಲ್ಲ. ಮನಸ್ಸು ಶಾಂತಿಯಿಂದಿಲ್ಲ ಎಂದವನು ಯೋಚಿಸಿ ಅವಳನ್ನು ತವರುಮನೆಗೆ ಕಳಿಸಿಕೊಟ್ಟನು. ಅವಳು ತೆರಳಿದ ಕೆಲವು ವಾರ ಗಳಾದ ಮೇಲೆ ಮಾವನಿಗೊಂದು ಪತ್ರ ಬರೆದು ಅವಳ ದುರ್ನಡತೆಯನ್ನೆಲ್ಲ ವಿವರಿಸಿದನು. ಆ ಪತ್ರವನ್ನು ಓದಿದ ತಾಯಿತಂದೆ ರೇಗದರು. ಆದರೆ ತಾನು ಅಂತಹ ಯಾವ ಕೆಟ್ಟಕೆಲಸವನ್ನೂ ಮಾಡಿಲ್ಲ ಎಂದವಳು ಹೇಳಿದಳು. ಯಾರೋ ದುರಾತ್ಮರ ಚಾಡಿ ಮಾತುಗಳಿಗೊಳಗಾಗಿ ಗಂಡನು ಈ ರೀತಿಯ ಅಭಿಪ್ರಾಯಕ್ಕೆ ಬಂದಿರುವನೆಂದೂ ನುಡಿದಳು. ಅವರು ಅದ ರಂತೆಯೇ ಅವನಿಗೆ ಪತ್ರ ಬರೆದರು. ವ್ಯಾಪಾರಿಯು ಉಪಾಯವಿಲ್ಲದೆ ರಾಘವನನ್ನು ಸಂಗಡ ಕರೆದುಕೊಂಡು ಅವಳ ತವರುಮನೆಗೆ ತೆರಳಿದನು. ತನ್ನ ಹೆಂಡತಿ ಮಾಡಿದ ದುರಾಚಾರವೆಲ್ಲ ಇವನಿಗೆ ಗೊತ್ತಿದೆಯೆಂದೂ ಇವ ನನ್ನು ಕೇಳಿದರೆ ಎಲ್ಲ ಬಹಿರಂಗವಾಗುವುದೆಂದೂ ನುಡಿದನು. ಆಗ ರಾಘ ವನು ತನ್ನ ಅನುಭವವೆಲ್ಲವನ್ನೂ ವಿವರಿಸತೊಡಗಿದನು. ಅಷ್ಟರಲ್ಲಿ ವ್ಯಾಪಾ ರಿಯ ಹೆಂಡತಿಯು ಕಿಡಕಿಯ ಒಳಗಿನಿಂದ ನಿಂತು ಕಣ್ಸನ್ನೆ ಮಾಡಿದಳು. ತನ್ನ ಪ್ರೀತಿಗೆ ಪಾತ್ರಳಾದ ಸ್ತ್ರೀ ಆ ವ್ಯಾಪಾರಿಯ ಹೆಂಡತಿಯೆಂದು ಆಗ ಆ ರಾಘವನಿಗೆ ಹೊಳೆಯಿತು. ಆದುದರಿಂದ ಅವನು ಕಥೆ ಹೇಳುತ್ತ "ಇದೆಲ್ಲ ನನ್ನ ಕನಸುಗಳು. ನಿಜಸಂಗತಿಗಳಲ್ಲ'' ಎಂದು ಹೇಳಿದನು. ವ್ಯಾಪಾರಿಯ ಹೆಂಡತಿಯು ಮಾಡಿದ ದುರಾಚಾರಕ್ಕೆ ಆಧಾರ ದೊರೆಯಲಿಲ್ಲ. ವ್ಯಾಪಾ ರಿಯು ಹೆಂಡತಿಯನ್ನು ಊರಿಗೆ ಕರೆದುಕೊಂಡು ಬಂದನು. ಆದರೆ ಅವನಿಗೆ ಜೀವನ ಸಹಿಸದಾಯಿತು. ತನ್ನ ಹೆಂಡತಿಗೆ ವಿಷ ಕೊಟ್ಟು ತಾನೂ ವಿಷ ತಿಂದು ಪ್ರಾಣ ನೀಗಿದನು.

ಮಹಾರಾಜ, ವ್ಯಾಪಾರಿಯು ಎಷ್ಟು ಪ್ರಯತ್ನಿಸಿದರೂ ತನ್ನ ಹೆಂಡ ತಿಯು ಮಾಡಿದ ಅನೀತಿಯನ್ನು ಕಂಡುಹಿಡಿಯಲಾಗಲಿಲ್ಲ. ಸ್ತ್ರೀ ನೀತಿ ಚರಿತ್ರೆ ಹೀಗೆ ಅಗಾಧವಾಗಿದೆ. ಅದನ್ನು ತಿಳಿಯಲೆತ್ನಿಸಲೇ ಬಾರದು'' ಎಂದಳು. ಆಗ ತ್ರಿವಿಕ್ರಮನು ಬಂದುದು ಬರಲಿ. ಇನ್ನೂ ತಿಳಿದುಕೊಳ್ಳ ಬೇಕೆಂಬ ಆಶೆಯು ಬಲವಾಗಿದೆ ಎಂದು ನುಡಿದುದರಿಂದ ಮರುದಿನ ರಾತ್ರಿ ತನ್ನ ಮನೆಗೆ ಬರಬೇಕೆಂದು ಹೇಳಿ ಕಳಿಸಿದಳು.

## ೨೧. ಗ್ರಾಮಾಧಿಕಾರಿಯ ಕಥೆ

ಪೂರ್ವಕಾಲದಲ್ಲಿ ಕಾಶ್ಮೀರ್ ನಗರದಲ್ಲಿ ನಾರಾಯಣನೆಂಬ ಗ್ರಾಮಾಧಿಕಾರಿ ಇದ್ದನು. ಅವನಿಗೆ ತನ್ನ ಗ್ರಾಮದಲ್ಲಿ ವಾಸಿಸಲು ಬೇಸರ ಬಂತು. ಆದುದರಿಂದ ಒಂದು ದಿನ ಅವನು ತನ್ನ ಗ್ರಾಮವನ್ನು ತ್ಯಜಿಸಿ, ಅಶ್ವಪುರದ ಅರಸನಲ್ಲಿ ತೆರಳಿದನು. ಆ ಅರಸನು ನಾರಾಯಣನನ್ನು ತನ್ನ ಸೈನ್ಯದಲ್ಲಿ ಸಿಪಾಯಿಯಾಗಿ ನೇಮಕ ಮಾಡಿಕೊಂಡನು. ಅವಕಾಶ ದೊರೆತಾಗಲೆಲ್ಲ ನಾರಾಯಣನು ಅಲ್ಪಸ್ವಲ್ಪ ವಿದ್ಯಾಭ್ಯಾಸ ಮಾಡಿದನು. ಆ ಮೇಲೆ ಸ್ವಲ್ಪ ಕಾಲ ಕಳೆದ ಬಳಿಕ ಆ ರಾಜನ ಅನುಮತಿ ಪಡೆದು ಪುನಃ ತನ್ನ ಗ್ರಾಮಕ್ಕೆ ಬಂದು ವಾಸಿಸತೊಡಗಿದನು.

ಅವನ ಹೆಂಡತಿಯು ಚಪಲ ಸ್ವಭಾವದವಳು. ಪರದೇಶಕ್ಕೆ ತೆರಳಿ ಯಾವ ಯಾವ ವಿದ್ಯೆಯನ್ನು ಕಲಿತುಕೊಂಡು ಬಂದಿರುವೆ ಎಂದು ಪದೇ ಪದೇ ಕೇಳತೊಡಗಿದಳು. ಆಗ ಅವನು ನಿರ್ಮಲ ಮನಸ್ಸಿನಿಂದ ತಾನು ಅರಿತ ವಿದ್ಯೆಗಳನ್ನೆಲ್ಲ ತಿಳಿಸಿದನು. ಆದರೆ ಆದರಿಂದ ತೃಪ್ತಿಯಾಗಲಿಲ್ಲ. “ನೀನು ಸ್ತ್ರೀ ನೀತಿ ಚರಿತ್ರೆಯನ್ನು ಕಲಿಯಲಿಲ್ಲ!” ಎಂದು ಹಂಗಿಸಿದಳು. ಆಗ ಅವನಿಗೆ ವ್ಯಸನವಾಯಿತು. ಕೈಯಲ್ಲಿ ಸ್ವಲ್ಪ ಹಣವನ್ನು ಹಿಡಿದುಕೊಂಡು ಅವನು ಮತ್ತೆ ವಿದೇಶಕ್ಕೆ ಹೊರಟನು.

ದಾರಿಯಲ್ಲಿ ನಾರಾಯಣನು ಒಂದು ಮನೆಯಲ್ಲಿ ಇಳಿದನು. ಆ ಮನೆಯ ಒಕ್ಕಲಗಿತ್ತಿ ಅವನಿಗೆ ಊಟ ಉಪಚಾರ ಮಾಡಿಸಿದಳು. ಅವನು ಎಲ್ಲಿ ಹೋಗುವವನು, ಏನು ಕೆಲಸ ಎಂದೆಲ್ಲ ಪ್ರಶ್ನಿಸಿದಳು. ಸ್ತ್ರೀ ನೀತಿ ಚರಿತ್ರೆಯನ್ನು ತಿಳಿದುಕೊಳ್ಳಲು ಹೊರಟಿರುವೆನೆಂದು ಅವನು ಉತ್ತರ ಕೊಟ್ಟನು. ತಾನೇ ಕಲಿಸುವೆನೆಂದು ಆ ತರುಣಿಯು ಹೇಳಿದುದರಿಂದ ನಾರಾಯಣನು ತಾನು ತಂದಿದ್ದ ದ್ರವ್ಯದಲ್ಲಿ ಅರ್ಧವನ್ನು ಅವಳಿಗೆ ಕೊಟ್ಟು ಬಿಟ್ಟನು. ಆ ಮೇಲೆ ನಾಲ್ಕಾರು ದಿನಗಳಾದರೂ ಅವಳು ಅವನಿಗೆ ಏನನ್ನೂ ಕಲಿಸಲಿಲ್ಲ. ಅವನು ಕೇಳಲು ತನಗೆ ಗೊತ್ತಿಲ್ಲ ಎಂದಳು. ಅವನು ರೇಗಿ ಊರಿನ ಕೊತವಾಲನಲ್ಲಿ ತೆರಳಿ ದೂರು ಕೊಟ್ಟನು. ಕೊತವಾಲನು ಒಬ್ಬ

ಆಳನ್ನು ಕಳಿಸಿ ಅವಳನ್ನು ಕರಿಸಿದನು. ಅವಳು ಬಹಳ ಸುಂದರಿಯಾಗಿ ದ್ದಳು. ಮುಗುಳು ನಗುತ್ತಲೇ ಬಂದಳು. ಕೊತವಾಲನನ್ನು ಕಂಡ ಕೂಡಲೇ ಒಂದು ಕೈಬೆರಳನ್ನು ತೋರಿಸಿ ಕಣ್ಣುಸನ್ನೆ ಮಾಡಿದಳು. ಕೊತ ವಾಲನು ಸ್ತ್ರೀಮೋಹಿತನಾದನು ಮತ್ತು ಅವಳು ದ್ರವ್ಯ ತೆಗೆದುಕೊಂಡುದು ದಕ್ಕೆ ಪುರಾವೆಗಳಿಲ್ಲವೆಂದು ಬಿಟ್ಟುಬಿಟ್ಟನು. ಆ ಮೇಲೆ ನಾರಾಯಣನು ಮಂತ್ರಿ ಇದ್ದಲ್ಲಿಗೆ ತೆರಳಿದನು. ಅವನೂ ಆ ಹುಡಿಗೆಯನ್ನು ಕರೆಸಿದನು. ಅವಳು ಮಂತ್ರಿಗೆ ಎರಡು ಬೆರಳು ತೋರಿಸಿ ನೇತ್ರಸಂಕೇತ ಮಾಡಿದಳು. ಅವನೂ ಬಿಟ್ಟುಬಿಟ್ಟನು. ರಾಜನಲ್ಲಿಗೆ ದೂರು ಹೋಯ್ತು. ರಾಜನಿಗೆ ಅವಳು ಮೂರು ಬೆರಳು ತೋರಿಸಿ ಕಣ್ಸನ್ನೆ ಮಾಡಿದಳು. ನಾರಾಯಣನು ನಿರಾಶೆಯಿಂದ ಹಿಂತಿರುಗಿದನು. ತನ್ನ ಸಾಮಾನುಗಳನ್ನೆಲ್ಲ ಕಟ್ಟಿ ಹೊರ ಡಲು ಸಿದ್ಧತೆ ನಡೆಸಿದನು.

ಆಗ ಆ ಒಕ್ಕಲಗಿತ್ತಿಯು "ಈ ದಿನ ರಾತ್ರಿ ಇದ್ದು ಹೋಗಿರಿ'' ಎಂದು ಒತ್ತಾಯ ಮಾಡಿದಳು. ರಾತ್ರಿ ಅವನಿಗೆ ಸ್ತ್ರೀ ನೀತಿ ಚರಿತ್ರೆಯನ್ನು ತೋರಿ ಸುವುದಾಗಿಯೂ ನುಡಿದಳು. ನಾರಾಯಣನು ಅವಳ ಹೇಳಿಕೆಯಂತೆ ಯಾರಿಗೂ ಕಾಣಿಸದಂತೆ ಒಂದು ಮೂಲೆಯಲ್ಲಿ ಅಡಗಿ ಕುಳಿತನು. ಅಷ್ಟ ರಲ್ಲಿ ರಾತ್ರಿ ಒಂದು ಪ್ರಹರವಾದುದರಿಂದ ಕೊತವಾಲನು ಬಂದು ಬಾಗಿಲು ಬಡಿದನು. ಒಕ್ಕಲಗಿತ್ತಿಯು ಬಾಗಿಲು ತೆರೆದು ಅವನನ್ನು ಸ್ವಾಗತಿಸಿ ಮಾನ ಮರ್ಯಾದೆ ಮಾಡಿದಳು. ಇಬ್ಬರೂ ಮಂಚದಲ್ಲಿ ಕುಳಿತು ಶೃಂಗಾರ ಚೇಷ್ಟೆ ಗಳನ್ನು ಮಾಡುತ್ತ ತಾಂಬೂಲ ಸವಿಯತೊಡಗಿದರು. ಅಷ್ಟರಲ್ಲಿ ಎರಡನೇ ಪ್ರಹರವಾದುರಿಂದ ಮಂತ್ರಿಯು ಬಂದು ಬಾಗಿಲು ಬಡಿದನು. ಆಗ ಕೊತ ವಾಲನು ಭಯದಿಂಡ ನಡುಗಲು ಒಕ್ಕಲಗಿತ್ತಿಯು ಅವನಿಗೆ ಧೈರ್ಯ ಹೇಳಿ ದಳು. ಅವನ ಜರಿ ರುಮಾಲು, ಅಂಗಿ, ಧೋತರಗಳೆಲ್ಲವನ್ನೂ ಕಳೆದು ಕತ್ತಲೆಯಲ್ಲಿ ಅವನನ್ನು ನಿಲ್ಲಿಸಿ ಅವನ ತಲೆಯ ಮೇಲೆ ಒಂದು ದೀಪವನ್ನಿ ಟ್ಟಳು.

ಮಂತ್ರಿಯು ಬಂದು ಅವಳೊಡನೆ ಪ್ರೇಮಚೇಷ್ಟೆ ಮಾಡುತ್ತಿದ್ದಾಗ ರಾಜನು ಬಂದು ಬಾಗಿಲು ಬಡಿದನು. ಒಕ್ಕಲಗಿತ್ತಿಯು ಮಂತ್ರಿಯ ಮುತ್ತಿನ ಸರ, ಹಾರ, ಬಟ್ಟೆಬರೆಗಳನ್ನು ತೆಗೆದು ಅವನಿಗೆ ಸೀರೆ ಉಡಿಸಿ

ಒಂದೆಡೆ ಜೋಳ ಬೀಸಲು ಹಚ್ಚಿದಳು. ರಾಜನೊಂದಿಗೆ ಅವಳು ಸರಸ ಸಲ್ಲಾಪ ಮಾಡುತ್ತಿದ್ದಾಗ ಅವಳ ಗಂಡನೇ ಬಂದನು. ಆಗ ಅವಳು ರಾಜನ ಬಟ್ಟೆ ಬರೆಗಳನ್ನೆಲ್ಲ ತೆಗೆದುಕೊಂಡು ಅವನಿಗೂ ಒಂದು ಸೀರೆ ಉಡಿಸಿ ಜೋಳ ಬೀಸಲು ಕಳಿಸಿದಳು. ರಾಜನು ಬೀಸಲಿಕ್ಕೆ ಬಂದಾಗ ಅಲ್ಲಿದ್ದ ಮಂತ್ರಿಯನ್ನು ಕಂಡು ಸ್ತ್ರೀ ಎಂದೇ ಭಾವಿಸಿ ಪ್ರೇಮ ಮಾಡತೊಡಗಿದನು. ಇಬ್ಬರೂ ಜಗಳಕ್ಕೇ ನಿಂತರು. ಬಡಿದಾಟದಲ್ಲಿ ದೀಪ ತಲೆಯ ಮೇಲೆ ಹೊತ್ತು ನಿಂತಿದ್ದವನ ಮೇಲೆ ಬಿದ್ದರು. ಅವನ ತಲೆಯ ಮೇಲಿನ ದೀಪ ಉರುಳಿ ರಾಜನ ಕೈ ಮೈ ಸುಟ್ಟಿತು. ಅವನು ಪ್ರಾಣವನ್ನು ತೊರೆದನು. ಉಳಿದವರು ಓಡಿಹೋದರು. ಒಕ್ಕಲಗಿತ್ತಿಯು ರಾಜನ ಶವವನ್ನು ಎಳೆದು ಹೊರಗೆಸೆದಳು ಮತ್ತು ನಾರಾಯಣನನ್ನು ಕರೆದು "ಸ್ತ್ರೀ ನೀತಿ ಚರಿತ್ರೆಯನ್ನು ಚೆನ್ನಾಗಿ ನೋಡಿದೆಯಾ? ಇದನ್ನು ನಿನ್ನ ಹೆಂಡತಿಯೂ ಬಲ್ಲಳು. ನೀನಿಲ್ಲದೇ ಇದ್ದಾಗ ಅವಳು ಪರಪುರುಷರೊಡನೆ ವಿಹರಿಸುವಂತೆ ತೋರುತ್ತದೆ" ಎಂದಳು. ನಾರಾಯಣನು ಆ ಕೂಡಲೇ ಅಲ್ಲಿಂದ ತನ್ನ ಮನೆಗೆ ಬಂದನು. ತನ್ನ ಹೆಂಡತಿಯ ದುರಾಚಾರಗಳನ್ನೆಲ್ಲ ಸೂಕ್ಷ್ಮವಾಗಿ ನಿರೀಕ್ಷಿಸತೊಡಗಿದನು. ಅದು ಅವಳಿಗೂ ಗೊತ್ತಾಯಿತು. ಆದುದರಿಂದ ಅವಳೇ ಅವನನ್ನು ವಿಷವಿಕ್ಕಿ ಕೊಂದಳು.

ಮಹಾರಾಜ, ಸ್ತ್ರೀ ನೀತಿ ಚರಿತ್ರದ ವಿಷಯದಲ್ಲಿ ಎಲ್ಲರೂ ಜಾಗರೂಕರಾಗಿರಬೇಕು" ಎಂದಳು. ರಾಜನಿಗೆ ಇನ್ನೂ ಕೇಳಬೇಕೆಂಬ ಆಸೆ. ಆದುದರಿಂದ ಮರುದಿನ ರಾತ್ರಿ ಬರಬೇಕೆಂದು ರಂಗಾವತಿಯು ಹೇಳಿ ಅವನನ್ನು ಕಳಿಸಿಕೊಟ್ಟಳು.

## ೨೨. ದೇವಾಂಗನೆಯರ ಕಥೆ

ತ್ರಿವಿಕ್ರಮನು ಮರುದಿನ ರಾತ್ರಿ ಕೂಡಾ ರಂಗಾವತಿಯ ಮನೆಗೆ ವೇಶಪಲ್ಲಟ ಮಾಡಿಕೊಂಡು ಬಂದನು. ರಂಗಾವತಿಯು ಅವನನ್ನು ಒಂದು ಕಾಳೀ ದೇವಾಲಯಕ್ಕೆ ಕರೆದುಕೊಂಡು ಹೋದಳು. ಅಲ್ಲಿ ಅವಳು ದೇವಿಯನ್ನು ನಾನಾ ರೀತಿಯಾಗಿ ಅರ್ಚಿಸಿ, ಪೂಜಿಸಿ ಆ ಮೇಲೆ ಒಂದು ಆಡಿನ

ತಲೆ ಕಡಿದು ಬಲಿಕೊಟ್ಟಳು. ಆದರ ತಲೆಯನ್ನು ರಾಜನ ಕೈಯಲ್ಲಿ ಕೊಟ್ಟು ದೇವಾಲಯದ ಕೆರೆಗೆ ಅವನನ್ನು ಕರೆದುಕೊಂಡು ಬಂದಳು. ಆಡಿನ ರುಂಡವನ್ನು ಆ ಕೆರೆಗೆ ಚಲ್ಲಬೇಕೆಂದು ರಂಗಾವತಿಯು ಹೇಳಿದುದರಿಂದ ಅವನು ಕೆರೆಯೊಳಗೆ ಬಗ್ಗಿದನು. ಅಷ್ಟರಲ್ಲಿ ರಂಗಾವತಿಯು ತ್ರಿವಿಕ್ರಮ ವನ್ನು ಕೆರೆಗೆ ದೂಡಿ ತಾನು ಹೊರಟು ಹೋದಳು.

ಕೆರೆಯೊಳಗೆ ಬಿದ್ದ ತ್ರಿವಿಕ್ರಮನು ಮುಳುಗಿದನು. ಆದರ ತಳ ಸೇರಿದ ಮೇಲೆ ಅಲ್ಲಿ ಒಂದು ಬಾಗಿಲು ಇದ್ದಂತೆ ಅವನಿಗೆ ತೋರಿತು. ತ್ರಿವಿಕ್ರಮನು ಅದನ್ನು ತೆರೆದನು. ಒಳಗೆ ಇಳಿದುಹೋಗುವ ಒಂದು ದಾರಿ ಕಂಡಿತು. ಅವನು ಬಾಗಿಲು ತೆರೆದು ಒಳಗೆ ಬಂದಕೂಡಲೇ ಅದು ತನ್ನಿಂದ ತಾನೇ ಮುಚ್ಚಿಕೊಂಡಿತು. ಒಳಗೆ ಸೇರಿದ ನೀರೂ ಎಲ್ಲೋ ಹರಿದುಹೋಯ್ತು. ದಾರಿ ಕಾಣಿಸಿತು. ತ್ರಿವಿಕ್ರಮನು ಮುಂದೆ ನಡೆದು ಬಂದನು. ಒಳಗೆ ಒಂದು ದೊಡ್ಡ ಅರಮನೆಯು ಕಾಣಿಸಿತು. ಆದರೆ ಯಾರೂ ಜನರಿರಲಿಲ್ಲ. ತ್ರಿವಿಕ್ರಮನಿಗೆ ದೇಹಾಯಾಸವಾಗಿದ್ದುದರಿಂದ ಅವನು ಒಂದು ಮಂಚದ ಮೇಲೆ ಮಲಗಿ ನಿದ್ದೆಹೋದನು.

ಮುಂಜಾನೆ ದೇವಾಂಗನೆಯರು ತಮ್ಮ ಅರಮನೆಗೆ ಬಂದರು. ಮಂಚದ ಮೇಲೆ ಮಲಗಿರುವ ಸರ್ವಾಂಗ ಸುಂದರನಾದ ತರುಣನನ್ನು ನೋಡಿ ಆಶ್ಚರ್ಯಚಕಿತರಾದರು ಮತ್ತು ಎಲ್ಲರೂ ಮೋಹಿತರಾದರು. ಅವ ನನ್ನೇ ನೋಡುತ್ತ ಬಹಳ ಹೊತ್ತಿನವರೆಗೆ ನಿಂತರು. ಅವನಿಗೆ ಎಚ್ಚರವಾದ ಮೇಲೆ ಮೃದುಮಧುರವಾಗಿ ಅವನೊಡನೆ ಮಾತನಾಡಿದರು. ಅವನ ಹೆಸರು, ಸ್ಥಳ, ಕೆಲಸವೆಲ್ಲವನ್ನು ತಿಳಿದುಕೊಂಡರು. ಅವನು ತ್ರಿವಿಕ್ರಮ ರಾಜನೆಂದು ತಿಳಿದ ಮೇಲೆ ಅವರೆಲ್ಲರೂ ಅವನ ಮೇಲೆ ಪ್ರಸನ್ನರಾದರು. ಅವನನ್ನು ಎಲ್ಲರೂ ಪ್ರೇಮ ಮಾಡತೊಡಗಿದರು. ತ್ರಿವಿಕ್ರಮನು ಪ್ರತಿದಿನವೂ ಒಬ್ಬೊ ಬ್ಬಳೊಡನೆ ಇರಲೊಪ್ಪಿ ಸುಖಸಮಾಗಮವನ್ನು ಹೊಂದಿದನು.

ಆ ಅರಮನೆಯಲ್ಲಿ ಕೆಲವು ಕೀಲಿ ಹಾಕಿದ ಕೋಣೆಗಳಿದ್ದವು. ದೇವಾಂ ಗನೆಯರು ಅವುಗಳ ಬಾಗಿಲುಗಳನ್ನು ತೆರೆಯುತ್ತಿರಲಿಲ್ಲ. ಅವುಗಳೊಳಗೆ ಏನಿದೆಯೆಂದು ನೋಡಲು ತ್ರಿವಿಕ್ರಮನ ಆತುರ. ಆದರೆ ಆ ಕೋಣೆ ಕೀಲಿ ತೆಗೆದು ನೋಡಬಾರದೆಂದು ಅವರು ಎಚ್ಚರಿಸಿದರು. ಆಗ ಅವನ ಕುತೂಹಲ

ಮತ್ತಷ್ಟು ಹೆಚ್ಚಾಯಿತು. ಒಂದು ದಿನ ಅವರಿಲ್ಲದ ಸಂದರ್ಭ ನೋಡಿ ಅವನು ಒಂದು ಕೋಣೆಯ ಕೀಲಿಯನ್ನು ತೆಗೆದನು. ಕೋಣೆಯ ಮಧ್ಯೆ ಒಂದು ಐರಾವತವಿತ್ತು. ಅದು ತ್ರಿವಿಕ್ರಮನನ್ನು ಕಂಡಕೂಡಲೇ ಮಾತ ನಾಡಿತು. "ಅಂಬಾರಿ ಹಾಕಿ ನನ್ನನ್ನು ಏರು. ತ್ರಿಲೋಕವೆಲ್ಲಿಲ್ಲ ಸಂಚ ರಿಸಿ ಸಂಜೆಯ ಹೊತ್ತಿಗೆ ಮತ್ತೆ ಇಲ್ಲೇ ತಂದುಬಿಡುತ್ತೇನೆ" ಎಂದು ಹೇಳಿತು. ಆಗ ತ್ರಿವಿಕ್ರಮನು ಅಂಬಾರಿ ಹಾಕಿ ಕುಳಿತನು. ಮರುಕ್ಷಣದಲ್ಲೇ ಅದು ವಾಯುವೇಗದಿಂದ ಹಾರಿತು. ತ್ರಿಲೋಕವನ್ನು ಸಂಚರಿಸಿ ಸಂಜೆ ಹಿಂತಿ ರುಗಿದನು. ಮತ್ತೆ ಆ ಗಜವನ್ನು ಕೋಣೆಗೆ ಎಳೆದೊಯ್ದು ಕೀಲಿ ಹಾಕಿ ಏನೂ ಗೊತ್ತಿಲ್ಲದವರಂತೆ ಮಲಗಿಕೊಂಡನು.

ಅವರೆ ಅರಮನೆಗೆ ಮರಳಿದ ದೇವಾಂಗನೆಯರು ಆನೆಯ ಹೆಜ್ಜೆಗಳನ್ನು ಕಂಡು ವಿಸ್ಮಲರಾದರು. ತ್ರಿವಿಕ್ರಮನನ್ನು ಕೇಳಲು ಅವನು ನಡೆದ ಸಂಗ ತಿಗಳನ್ನೆಲ್ಲ ತಿಳಿಸಿದನು. ಆಗ ಅವರು ಬುದ್ಧಿ ಹೇಳಿ ಎರಡನೇ ಕೋಣೆಯ ಬಾಗಿಲು ತೆರೆಯಬಾರದೆಂದರು. ಅವರೆ ಅವರು ಹೊರಟು ಹೋದ ಮೇಲೆ ಅದರೊಳಗೆ ಏನಿದೆಯೆಂದು ನೋಡಲು ಅವನು ಆತುರಪಟ್ಟನು. ಅದರೊ ಳಗೆ ಒಂದು ಶ್ವೇತಾಶ್ವವಿದ್ದಿತು. ತ್ರಿವಿಕ್ರಮನನ್ನು ಕಂಡಕೂಡಲೇ ಅದು "ಮಹಾರಾಜ, ನನ್ನ ಬೆನ್ನ ಮೇಲೆ ಹತ್ತು. ಲಗಾಮು ಹಿಡಿ. ಮೂರು ಲೋಕಗಳನ್ನೆಲ್ಲ ಸುತ್ತಿ ಸಂಜೆಯ ಹೊತ್ತಿಗೆ ಹಿಂತಿರುಗೋಣ'' ಎಂದಿತು. ಅದರಂತೆ ತ್ರಿವಿಕ್ರಮನು ಮಾಡಿದನು. ಮೂರು ಲೋಕಗಳ ಅದ್ಭುತ ಚಮ ತ್ಕಾರಗಳನ್ನೆಲ್ಲ ನೋಡಿ ಬಂದನು. ದೇವಾಂಗನೆಯರು ಮತ್ತೆ ಬಂದು ಮೂರನೇ ಕೋಣೆಯ ಬಾಗಿಲು ತೆರೆಯಬಾರದೆಂದು ಎಚ್ಚರಿಸಿದರು. ತ್ರಿವಿಕ್ರ ಮನು ಅದನ್ನು ಕಿವಿಯಲ್ಲಿ ಹಾಕಿಕೊಳ್ಳದೆ ಅವರು ಹೋದ ಮೇಲೆ ಆ ಕೋಣೆಯ ಬಾಗಿಲು ತೆರೆದನು. ಅಲ್ಲೊಂದು ಕತ್ತೆ ಇತ್ತು. ಅದೂ ನರ ವಾಣಿಯಿಂದ ಮಾತನಾಡಿತು. ತ್ರಿವಿಕ್ರಮನು ಅದನ್ನೇರಿದನು. ಅದು ಅವನನ್ನು ಉಜ್ಜಯನೀ ನಗರದಲ್ಲಿ ಇಳಿಸಿ ಮಾಯವಾಯಿತು.

ಆಗ ತ್ರಿವಿಕ್ರಮನು ತನ್ನ ಅಚಾತುರ್ಯಕ್ಕಾಗಿ ವಿಷಾದಪಟ್ಟನು. ರಂಗಾ ವತಿಯ ಮನೆಗೆ ಬಂದು ನಡೆದ ಸಂಗತಿಯನ್ನೆಲ್ಲ ಅರುಹಿದನು. ಪುನಃ ತನ್ನನ್ನು ಆ ಕಾಳಿಕಾ ದೇವಾಲಯಕ್ಕೆ ಕರೆದುಕೊಂಡು ಹೋಗಬೇಕೆಂದು

ಒತ್ತಾಯ ಪಡಿಸಿದನು. ಆ ದೇವಾಂಗನೆಯರೊಡನೆ ಇನ್ನೂ ರತಿಸುಖ ವನ್ನು ಅನುಭವಿಸಬೇಕೆಂದು ಆಶೆಪಟ್ಟನು. ಆದರೆ ಎರಡನೇ ಸಲ ಹಾಗೆ ಮಾಡುವಂತಿರಲಿಲ್ಲ. ಕಾಳಿಗೆ ತ್ರಿವಿಕ್ರಮನು ತನ್ನ ಹಿರಿಮಗನ ಬಲಿಕೊಟ್ಟರೆ ಮಾತ್ರ ಸಾಧ್ಯ ಎಂದಳು. ತ್ರಿವಿಕ್ರಮನು ಅದಕ್ಕೂ ಸಿದ್ಧನಾದನು ಮತ್ತು ತನ್ನ ಜ್ಯೇಷ್ಠಪುತ್ರನನ್ನು ಕರೆದುಕೊಂಡು ರಂಗಾವತಿಯೊಂದಿಗೆ ಆ ಕಾಳಿಕಾ ದೇವಾಲಯಕ್ಕೆ ಬಂದನು. ದೇವಿಗೆ ಮಗನನ್ನು ಬಲಿಕೊಡಲು ಅವನು ಖಡ್ಗವನ್ನು ಎತ್ತಿದಾಗ ರಂಗಾವತಿಯು ಅವನ ಕೈಯನ್ನು ಹಿಡಿದುಕೊಂಡಳು. "ಮಹಾರಾಜ, ಪಟ್ಟಕ್ಕೆ ಬರುವ ಹಿರಿಪುತ್ರನನ್ನು ಕೂಡಾ ಬಲಿ ಕೊಡಲು ಸಿದ್ಧನಾದೆಯಲ್ಲ! ದೇವಾಂಗನೆಯರ ಮೇಲಿನ ಮೋಹವೇ ಇದಕ್ಕೆ ಕಾರಣವಲ್ಲವೇ? ಇದೇ ಸ್ತ್ರೀ ನೀತಿ ಚರಿತ್ರೆಯಾಗಿದೆ. ಸ್ತ್ರೀಗಾಗಿ ಮಗನನ್ನು ಕೊಲ್ಲಲೂ ನೀನು ಸಿದ್ಧನಾದೆಯಲ್ಲ!'' ಎಂದು ರಂಗಾವತಿಯು ಹೇಳಿದಳು. ತ್ರಿವಿಕ್ರಮನಿಗೆ ಪಶ್ಚಾತ್ತಾಪವಾಯಿತು.

ಮೋಹಿನೀ, ತ್ರಿವಿಕ್ರಮನು ಕೂಡಾ ಆ ರೀತಿ ಮಾಡಿದ. ಕೊನೆಗೆ ಪಶ್ಚಾತ್ತಾಪ ಪಟ್ಟ. ಆದುದರಿಂದ ನೀನೂ ಸನ್ಮಾರ್ಗ ಪ್ರವೃತ್ತಳಾಗು. ದುರಾಚಾರಕ್ಕಿಳಿಯಬೇಡ'' ಎಂದನು. ಮೋಹನದಾಸನು ಇಷ್ಟು ಕಥೆಗಳನ್ನು ಹೇಳಿದರೂ ಅವಳಿಗೆ ಜ್ಞಾನೋದಯವಾಗಲಿಲ್ಲ. ಇನ್ನೂ ಹೇಳಬೇಕೆಂದು ಒತ್ತಾಯ ಪಡಿಸಿದುದರಿಂದ ಮೋಹನದಾಸನು ಮುಂದುವರಿಸಿದನು.

## ೨೨. ತ್ರಿವಿಕ್ರಮನ ಸೊಸೆಯ ಕಥೆ

ತ್ರಿವಿಕ್ರಮ ರಾಜನ ಮನಸ್ಸಿನಲ್ಲಿ ಸ್ತ್ರೀ ಚರಿತ್ರೆಗಿಂತಲೂ ತನ್ನ ಚರಿತ್ರೆಯೇ ದೊಡ್ಡದು ಎಂಬ ಭಾವನೆಯಿತ್ತು. ಆ ರೀತಿ ಅವನು ಡಂಗುರವನ್ನು ಹೊಡೆಸಿದನು. ತ್ರಿವಿಕ್ರಮ ಚರಿತ್ರೆಗಿಂತ ಸ್ತ್ರೀ ನೀತಿ ಚರಿತ್ರೆ ದೊಡ್ಡದೆಂದು ವಿಶದಪಡಿಸುವವರಿಗೆ ಅಮಿತ ಉಡುಗೊರೆಗಳನ್ನು ಕೊಡುವುದಾಗಿಯು ಸಾರಿದನು. ಆಗ ಆ ರಾಜಧಾನಿಯಲ್ಲಿದ್ದ ಪಟ್ಟಣಸೆಟ್ಟಿಯ ಮಗಳು ಅದಕ್ಕೊಪ್ಪಲಿಲ್ಲ. ಸ್ತ್ರೀನೀತಿ ಚರಿತ್ರೆಯೇ ಮೇಲು ಎಂದು ಅರಸನಿಗೆ ತಿಳಿಸಬೇಕೆಂದಳು.

ತ್ರಿವಿಕ್ರಮ ರಾಜನು ಅದನ್ನು ಕೇಳಿ ಸುಮ್ಮನಾದನು. ಕೆಲವು ದಿವಸಗಳು ಕಳೆದ ಮೇಲೆ, ತನ್ನ ದ್ವಿತೀಯ ಪುತ್ರನಿಗೆ ಅವಳನ್ನು ಮದುವೆ ಮಾಡಿಸಬೇಕೆಂದು ಪಟ್ಟಣ ಸೆಟ್ಟಿಗೆ ತಿಳಿಸಿದನು. ರಾಜಾಜ್ಞೆಯನ್ನು ಮೀರುವಂತಿಲ್ಲ. ಮೀರಿದರೆ ಅವನು ಬಲಾತ್ಕಾರದಿಂದ ಅವಳನ್ನು ಒಯ್ದು ಮದುವೆ ಮಾಡಿಸದೇ ಬಿಡಲಾರನು. ಆದುದರಿಂದ ಪಟ್ಟಣಸೆಟ್ಟಿಯು ನಿರುಪಾಯನಾಗಿ ತನ್ನ ಮಗಳನ್ನು ರಾಜನ ಎರಡನೇ ಮಗನಿಗೆ ಮದುವೆಮಾಡಿ ಕೊಟ್ಟನು.

ಮದುವೆಯಾದ ಮೇಲೆ ರಾಜನು ತನ್ನ ಮಗನನ್ನು ಕರೆದು "ನೀನು ಸ್ವಲ್ಪ ಕಾಲದ ವರೆಗೆ ಹೆಂಡತಿಯೊಡನೆ ಯಾವ ಸಂಬಂಧವನ್ನು ಇಟ್ಟುಕೊಳ್ಳಬೇಡ. ಅವಳೊಡನೆ ಮಾತನಾಡಲೂ ಬಾರದು" ಎಂದನು. ಮಗನು ಅದಕ್ಕೊಪ್ಪಿ "ತಂದೆಯೇ, ನಾನು ಇಲ್ಲೇ ಇದ್ದರೆ ಹಾಗೆ ನಡೆದುಕೊಳ್ಳಲು ಕಷ್ಟವಾಗಬಹುದು. ಆದುದರಿಂದ ಅಷ್ಟು ಕಾಲದ ವರೆಗೆ ಮತ್ತೊಂದು ನಗರದಲ್ಲಿ ವಾಸಿಸುತ್ತೇನೆ''ಎಂದನು. ರಾಜನು ಅದಕ್ಕೆ ಸಮ್ಮತಿಸಿದುದರಿಂದ ಅವನು ಅಂಗರಕ್ಷಕರೊಡನೆ ಹಾಗೂ ಕೆಲವು ದಾಸೀ ಜನರೊಡನೆ ಹೊರಟು ಹೋದನು. ಅವನು ಹೊರಟು ಹೋದ ಮೇಲೆ ರಾಜನು ತನ್ನ ಸೊಸೆಯನ್ನು ಕರೆಸಿ ಅವಳನ್ನು ಒಂದು ಮನೆಯಲ್ಲಿ ಇರಿಸಿದನು. ಆ ಮನೆಯ ಕಿಟಕಿ ಬಾಗಿಲುಗಳೆಲ್ಲವನ್ನು ಮುಚ್ಚಿಸಿದನು. ಒಂದು ಕಿಟಕಿಯನ್ನು ಮಾತ್ರ ತೆರೆದಿದ್ದರು. ಅದರ ಮೂಲಕ ಅವಳಿಗೆ ಅನ್ನ ನೀರು ಕೊಡತೊಡಗಿದರು. ಯಾರೂ ಅವಳೊಡನೆ ಮಾತನಾಡಲೂ ಇಲ್ಲ. ತ್ರಿವಿಕ್ರಮ ಚರಿತ್ರೆಗಿಂತ ಸ್ತ್ರೀ ನೀತಿ ಚರಿತ್ರೆಯೇ ಮೇಲೆಂದು ತಾನು ರಾಜನಿಗೆ ತಿಳಿಸಿದುದರ ಪರಿಣಾಮ ಇದೆಂದು ಅವಳು ಅರಿತಳು. ತನ್ನ ಅಭಿಪ್ರಾಯವೇ ಸರಿಯಾದುದೆಂದು ತಿಳಿಸುವ ಬಗೆ ಹೇಗೆಂದು ಅವಳು ಹಗಲಿರುಳು ಚಿಂತಿಸಿದಳು. ಆ ಮೇಲೆ ಅವಳಿಗೊಂದು ಯೋಗ್ಯಯೋಚನೆ ಹೊಳೆಯಿತು.

ಅನ್ನ ನೀರು ಕೊಡಲು ಬರುತಿದ್ದ ಒಬ್ಬ ದಾಸಿಯೊಡನೆ ಅವಳು ಸ್ನೇಹ ಬೆಳೆಸಿದಳು. ದ್ರವ್ಯದಾಶೆ ತೋರಿಸಿ ಅವಳನ್ನು ತನ್ನ ವಶಪಡಿಸಿಕೊಂಡಳು. ಆ ಮೇಲೆ ಒಂದು ಪತ್ರವನ್ನು ಬರೆದು ಅವಳ ಕೈಯಲ್ಲಿ ಕೊಟ್ಟು ಅದನ್ನು ತನ್ನ ತಂದೆಗೆ ಮುಟ್ಟಿಸಬೇಕೆಂದು ತಿಳಿಸಿದಳು. ಆ ಪತ್ರದಲ್ಲಿ ಅವಳು "ತಂದೆಯೇ, ಮದುವೆಯಾದ ಮೇಲೆ ನಾನು ನನ್ನ ಪತಿಯನ್ನು

ಕಂಡಿಲ್ಲ. ನನ್ನನ್ನು ಒಂದು ಸಣ್ಣ ಮನೆಯಲ್ಲಿಟ್ಟು ಕಿಟಕಿ ಬಾಗಿಲುಗಳನ್ನು ಭದ್ರಗೊಳಿಸಿರುವರು. ನೀವು ರಾಜನ ಆಜ್ಞೆ ಮೀರಲಾರದೆ ಮದುವೆ ಮಾಡಿ ಕೊಟ್ಟಿರಿ. ಆದರೆ ನನ್ನ ಹಣೆಯಲ್ಲಿ ಸುಖಸಂತೋಷಪಡುವ ಭಾಗ್ಯ ಬರೆದಿಲ್ಲ. ಇದಕ್ಕಾಗಿ ನಾನು ನಿಮ್ಮನ್ನು ದೂರುವುದಿಲ್ಲ. ಆದರೆ ನಾನು ಇನ್ನು ಬದುಕಿ ಉಳಿಯಲಾರೆ. ಬದುಕಬೇಕೆಂದು ನೀವು ಬಯಸುವುದಾದರೆ ನಿಮ್ಮ ಮನೆ ಯಿಂದ ಈ ಮನೆಗೆ ಒಂದು ನೆಲಮಾಳಿಗೆಯನ್ನು ತೋಡಿಸಿರಿ'' ಎಂದು ಬರೆದಿದ್ದಳು. ಅವಳ ತಂದೆಯು ಅದನ್ನು ಓದಿ, ವ್ಯಸನಪಟ್ಟು ಗುಪ್ತ ಮಾರ್ಗ ವನ್ನು ತೋಡಿಸುವುದಾಗಿ ಅವಳಿಗೆ ಹೇಳಿ ಕಳಿಸಿದನು. ಆ ಮೇಲೆ ಬೇರೆ ಊರಿನಿಂದ ಒಬ್ಬ ವ್ಯಾಪಾರನನ್ನು ಕರೆಸಿ ನೆಲಮಾಳಿಗೆ ತೋಡಿಸಿದನು. ರಾಜನ ಸೊಸೆ ಆ ಮನೆಯಲ್ಲಿ ತನ್ನ ದಾಸಿಯನ್ನು ಇರಿಸಿದಳು. ತಾನು ಸ್ವಲ್ಪ ಸಮಯದ ವರೆಗೆ ತಂದೆಯ ಮನೆಯಲ್ಲಿ ಉಳಿದಳು.

ಕೆಲವು ದಿವಸಗಳಾದ ಮೇಲೆ ರಾಜನ ಸೊಸೆಯು ಕೆಲವು ದಾಸಿಯ ರನ್ನೂ ಅಪಾರ ದ್ರವ್ಯವನ್ನು ಹಿಡಿದುಕೊಂಡು ತನ್ನ ಪತಿಯು ವಾಸಿಸುತ್ತಿದ್ದ ನಗರಕ್ಕೆ ತೆರಳಿದಳು. ಅಲ್ಲಿ ಅವನು ವಾಸಿಸುತಿದ್ದ ಮನೆಯ ಇದಿರಿಗೇ ಇದ್ದ ದೊಡ್ಡ ಮನೆಯನ್ನು ಕ್ರಯಕ್ಕೆ ತೆಗೆದುಕೊಂಡಳು. ಗೊಲ್ಲರವಳಂತೆ ವೇಷ ಭೂಷಣ ತೊಟ್ಟು ಇರುತಿದ್ದಳು. ರಾಜಪುತ್ರನು ಹೊರಗೆ ಬಂದಾಗಲೆಲ್ಲ ಅಂದವಾದ ವಸ್ತ್ರ ಧರಿಸಿ ಅವನ ಕಣ್ಣಿಗೆ ಬೀಳುವಂತೆ ನಿಲ್ಲುತಿದ್ದಳು. ಒಂದು ದಿನ ಅವನು ಅವಳನ್ನು ನೋಡಿ ಮೋಹಪರವಶನಾದನು. ತನ್ನ ದಾಸಿ ಯನ್ನು ಕರೆದು ಆ ಗೊಲ್ಲರ ಮನೆಗೆ ಕಳಿಸಿ ಮಾತನಾಡಿಸಿದನು. ಆಗ ಆ ಗೊಲ್ಲರವಳು "ಛೀ, ಛೀ, ಎಂತಹ ಮಾತು. ನಾನು ಹಾಗೆಲ್ಲ ದೊರಕುವವ ಳಲ್ಲ. ರಾಜಪುತ್ರನು ನನ್ನನ್ನು ಯಾವಾಗಲೂ ಪ್ರೇಮ ಮಾಡುವನೆಂಬ ನಿಯಮವಲ್ಲ. ಅವನು ಬರೆದ ಪತ್ರ ಹಾಗೂ ಅವನ ಹೆಸರು ಕೆತ್ತಿದ ಖಡ್ಗ ವನ್ನೂ ತಂದು ಕೊಟ್ಟರೆ ಮಾತ್ರ ಒಪ್ಪುತ್ತೇನೆ'' ಎಂದಳು. ರಾಜಪುತ್ರನು ಅದಕ್ಕೊಪ್ಪಿ ಹಾಗೇ ಮಾಡಿದನು. ಮತ್ತು ಆ ಗೊಲ್ಲರವಳೊಡನೆ ರತಿ ಸುಖ ಪಡೆಯತೊಡಗಿದನು. ಕೆಲವು ತಿಂಗಳುಗಳ ಮೇಲೆ ಅವಳು ಗರ್ಭವತಿಯಾ ದಳು. ನಾಲ್ಕೈದು ತಿಂಗಳುಗಳ ಮೇಲೆ ಅವಳು ರಾಜಪುತ್ರನಿಗೆ ತಿಳಿಸದೆ ತನ್ನ ತಂದೆಯ ಮನೆಗೆ ಬಂದಳು. ಒಂಬತ್ತು ತಿಂಗಳುಗಳು ಉರುಳಿದ

ಮೇಲೆ ಅವಳು ಗಂಡು ಮಗುವನ್ನು ಪ್ರಸವಿಸಿದಳು.

ಇತ್ತ ರಾಜಪುತ್ರನು ಗೊಲ್ಲರವಳನ್ನು ಕಾಣದೆ ಕಂಗೆಟ್ಟನು. ಅವಳ ರೂಪಲಾವಣ್ಯಗಳಿಗೆ ಮನಸೋತಿದ್ದ ಅವನಿಗೆ ಈಗ ಅನ್ನ ನೀರಡಿಕೆಗಳ ಮೇಲೂ ಆಸಕ್ತಿಉಳಿಯಲಿಲ್ಲ. ಚಿಂತೆಯಿಂದ ಕೊರಗಲಾರಂಭಿಸಿದನು. ಇದು ರಾಜನ ಕಿವಿಗೂ ಮುಟ್ಟಿತು. ಗೊಲ್ಲರವಳನ್ನು ಹುಡುಕಿಸಲು ಅವನು ಚಾರರನ್ನು ಅಟ್ಟಿವರೂ ಫಲಪ್ರದವಾಗಲಿಲ್ಲ. ರಾಜನಸೊಸೆಗೆ ಇದು ತಿಳಿದ ಮೇಲೆ ಅವಳು ಒಂದು ಸನ್ಯಾಸಿಯ ವೇಷಧರಿಸಿ ಅರಮನೆಗೆ ಬಂದಳು. ರಾಜಪುತ್ರನನ್ನು ಕಂಡ ಕೂಡಲೇ "ರಾಜಪುತ್ರ, ಆ ಗೊಲ್ಲರವಳ ಮೇಲಿನ ಪ್ರೀತಿ ಇನ್ನೂ ಕಡಿಮೆಯಾಗಲಿಲ್ಲವೇ ? ಅವಳಿಗಿಂತ ಸುಂದರಿಯರಾದ ನಾರಿಯರು ಈ ರಾಜ್ಯದಲ್ಲಿಲ್ಲವೇ ? ಅವಳನ್ನೇ ನೆನಸಿ ನೆನಸಿ ಏಕೆ ಚಿಂತಾ ಮಗ್ನನಾಗಿದ್ದೀಯೋ ?'' ಎಂದು ಮಾತನಾಡಿಸಿದಳು. ಸನ್ಯಾಸಿಯ ಧ್ವನಿಯು ಆ ಗೊಲ್ಲರವಳಂತೆ ಮೃದು ಮಧುರವಾಗಿದ್ದುದರಿಂದ ರಾಜಪುತ್ರನಿಗೆ ಸಂತೋಷವಾಯಿತು. ಅವನು ಆ ಸನ್ಯಾಸಿಯೊಡನೆ ಸ್ವಲ್ಪ ಹೊತ್ತಿನ ವರೆಗೆ ವಿವೇಕದಿಂದಲೇ ಮಾತನಾಡಿದನು. ಇದನ್ನು ಕೇಳಿದ ರಾಜನು ಆ ಸನ್ಯಾಸಿಯನ್ನು ಕರೆಸಿ "ಈಗ ಆರೇಳು ತಿಂಗಳುಗಳಿಂದ ನನ್ನ ಪುತ್ರನ ಬುದ್ಧಿಯೇ ನೆಟ್ಟಗಿಲ್ಲ. ಯಾರೊಡನೆಯೂ ಚೆನ್ನಾಗಿ ಮಾತನಾಡಿಲ್ಲ. ಇವನ ರೋಗವನ್ನು ಪರಿಹರಿಸಲು ನೀನೇ ಸಮರ್ಥನು" ಎಂದನು. ಆಗ ಆ ಸನ್ಯಾಸಿಯು "ಮಹಾರಾಜ, ನನ್ನೊಂದಿಗೆ ಅವನನ್ನು ಕಳಿಸಿದರೆ ಗುಣಪಡಿಸಬಲ್ಲೆ. ಆದರೆ ನನಗೆ ಇರಲು ಒಂದು ಸಣ್ಣ ಮಠವಾದರೂ ಬೇಕಲ್ಲ !" ಎಂದನು. ರಾಜನು ಅವನಿಗೆ ಒಂದು ಮನೆಯನ್ನು ಕೊಡಿಸಿದನು. ಅದನ್ನೇ ಮಠ ಎಂದು ಕರೆಯುತಿದ್ದರು. ಸನ್ಯಾಸಿಯು ಅಲ್ಲೇ ಇದ್ದು ಊಟ ಉಪಚಾರವನ್ನು ನಡೆಸುತಿದ್ದನು. ಆ ಮೇಲೊಂದು ದಿನ ಆ ಸನ್ಯಾಸಿ ವೇಶವನ್ನು ತೆಗೆದಿಟ್ಟು ಗೊಲ್ಲರವಳಂತೆ ವೇಷಭೂಷಣ ಧರಿಸಿ ಆ ರಾಜಪುತ್ರನನ್ನು ಕಂಡಳು. ಅವಳನ್ನು ಕಂಡಕೂಡಲೇ ರಾಜಪುತ್ರನು ಭರದಿಂದ ಆಲಿಂಗಿಸಿ ಚುಂಬಿಸಿದನು. ಅವಳೊಡನೆ ಅದೇ ಮಠದಲ್ಲಿ ಸುಖದಿಂದ ಇರತೊಡಗಿದನು. ಕೆಲವು ವಾರಗಳು ಉರುಳಿದ ಮೇಲೆ ಗೊಲ್ಲರವಳು ಮತ್ತೆ ಗರ್ಭವತಿಯಾದಳು. ನಾಲ್ಕೈದು ತಿಂಗಳುಗಳ ವರೆಗೆ ಅಲ್ಲಿದ್ದು ಮತ್ತೆ ಅವನಿಗೆ ತಿಳಿಯದಂತೆ ತನ್ನ ತಂದೆಯ

ಮನೆಗೆ ಹೋದಳು. ನವಮಾಸ ತುಂಬಿದ ಮೇಲೆ ಅವಳು ಮತ್ತೊಬ್ಬ ಪುತ್ರನನ್ನು ಹಡೆದಳು. ರಾಜಪುತ್ರನು ವಿರಹಸಂತಾಪದಿಂದ ಅರೆ ಮರುಳನಾಗಿ ಊರೂರು ಅಲೆಯತೊಡಗಿದನು. ಗೊಲ್ಲರವಳನ್ನು ಶೋಧಿಸಲು ಎಷ್ಟು ಯುಕ್ತಿ ಸಿದರೂ ಸಫಲವಾಗಲಿಲ್ಲ.

ಆ ಮೇಲೊಂದು ದಿನ ರಾಜನ ಸೊಸೆಯು ತನ್ನ ಎರಡು ಮಕ್ಕಳನ್ನು ಕರೆದುಕೊಂಡು ನೆಲಮಾಳಿಗೆಯ ಮೂಲಕ ತನ್ನನ್ನು ಬಂಧಿಸಿಟ್ಟದ್ದ ಮನೆಗೆ ಬಂದಳು. ಅನ್ನ ಆಹಾರ ತೆಗೆದುಕೊಳ್ಳಲು ಅವಳು ಬಂದಾಗ ಹುಡುಗರೂ ಅತ್ತು ಕರೆದುವು. ದಾಸಿಯರು ಇದನ್ನು ರಾಜನಿಗೆ ತಿಳಿಸಿದರು. ಬಂಧಿಸಿಟ್ಟದ್ದ ಸೊಸೆಗೆ ಮಕ್ಕಳಾದುದಾದರೂ ಹೇಗೆ ಎಂದು ರಾಜನು ಆಶ್ಚರ್ಯಚಕಿತನಾದನು. ಸೊಸೆಯ ಮೇಲೆ ಅಷ್ಟು ಕೋಪವೂ ಉಕ್ಕೇರಿತು. ಅವನು ಮಂತ್ರಿ ಸಹಿತ ಆ ಮನೆಗೆ ಬಂದು ಮಾತನಾಡಿಸಿದನು. "ರಾಜಪುತ್ರಿಯೇ, ನಿನಗೆ ಮಕ್ಕಳಾಗಿವೆಯೆಂದು ಕೇಳಿದೆ? ಹೇಗೆ? ಇದಕ್ಕೆ ಯಾರು ಕಾರಣರು?'' ಎಂದು ಪ್ರಶ್ನಿಸಿದನು. ಆಗ ಅವಳು ರಾಜಪುತ್ರನೇ ಕಾರಣವೆಂದು ಹೇಳಿದಳು. ತ್ರಿವಿಕ್ರಮನು ನಂಬಲಿಲ್ಲ. "ಲಗ್ನವಾದಂದಿನಿಂದ ಅವನು ಮುಖವನ್ನು ಕಂಡಿಲ್ಲ. ಒಮ್ಮೆ ಗೊಲ್ಲರವಳೊಡನೆ ಇದರಂತೆ. ಮತ್ತೊಮ್ಮೆ ಸನ್ಯಾಸಿಯೊಡನೆ ಇದ್ದ'' ಎಂದನು. ಅವನನ್ನು ಕರೆದು ತಂದರೆ ಎಲ್ಲವೂ ವೇದ್ಯವಾಗುವುದೆಂದು ಅವಳು ಉತ್ತರ ಕೊಟ್ಟಳು.

ಆಗ ರಾಜನು ತನ್ನ ಮಗನನ್ನು ತರಿಸಿ ಆ ಕಿಟಕಿಯ ಬಳಿ ನಿಲ್ಲಿಸಿದನು. ಪತಿಯ ದುಸ್ಥಿತಿಯನ್ನು ನೋಡಿದ ಕೂಡಲೇ ರಾಜಪುತ್ರಿ ಅವನನ್ನು ಅತಿಶಯ ಪ್ರೇಮ ವಾತ್ಸಲ್ಯದಿಂದ ಮಾತನಾಡಿಸಿದಳು. ಆಗ ಅವನಿಗೆ ಅವಳ ಗುರುತು ಹತ್ತಿತು. ಅವನು ಕೂಡಾ ಹುಚ್ಚು ಮಾತಾಡುವುದನ್ನು ಬಿಟ್ಟು ಸಮಂಜಸ ಉತ್ತರ ಕೊಟ್ಟನು. ರಾಜನು ಮನೆಯ ಬಾಗಿಲು ತೆಗೆಸಲು ಅವನು ಒಳಗೆ ನುಗ್ಗಿ ಅವಳನ್ನು ಆಲಿಂಗಿಸಿದನು. ಗೊಲ್ಲರ ಹಾಗೂ ಸನ್ಯಾಸಿಯ ವೇಷದಲ್ಲಿದ್ದವಳು ಇವಳೇ. ಎರಡೂ ಸಲವೂ ಗರ್ಭಿಣಿಯಾದ ಮೇಲೆ ತನ್ನನ್ನು ತೊರೆದು ಹೋದಳು. ಇವು ನನ್ನ ಮಕ್ಕಳೇ ಆಗಿವೆ" ಎಂದು ರಾಜಪುತ್ರನು ತಿಳಿಸಿದನು. ಅದನ್ನು ಕೇಳಿ ರಾಜನಿಗೆ ಹರ್ಷವಾಯಿತು. ಸೊಸೆಯು ಇದನ್ನು ಹೇಗೆ ಮಾಡಿದಳೆಂದು ಅವಳಿಂದಲೇ ತಿಳಿದು ತ್ರಿವಿಕ್ರಮ

ಚರಿತ್ರೆಗಿಂತಲೂ ಸ್ತ್ರೀ ನೀತಿ ಚರಿತ್ರೆಯೇ ಮೇಲೆಂದು ಖಚಿತ ಮಾಡಿ ಕೊಂಡನು.

ಮೋಹಿನಿಯು ಈ ಕಥೆಯನ್ನು ಕೇಳಿದ ಮೇಲೆ "ಸ್ವಾಮಿ, ವೈದ್ಯ ವರನೇ ಇನ್ನೊಂದು ಕಥೆಯನ್ನು ಹೇಳಿ ನನಗೆ ವಿವೇಕವನ್ನು ಬೋಧಿಸಿರಿ" ಎಂದು ಕೇಳಿದಳು. ಆಗ ಮೋಹನದಾಸನು ಇನ್ನೊಂದು ಕಥೆಯನ್ನು ಹೇಳತೊಡಗಿದನು.

## ೨೩. ಇಬ್ಬರು ಮಿತ್ರರ ಕಥೆ

ಪೂರ್ವಕಾಲದಲ್ಲಿ ಪಾಟಲೀಪುರ ಎಂಬ ನಗರದಲ್ಲಿ ಒಬ್ಬ ರಾಜನಿದ್ದನು. ಅವನಿಗೆ ಸುಮತಿ ಎಂಬ ಒಬ್ಬನೇ ಮಗನು. ಆ ರಾಜನ ಮುಖ್ಯ ಮಂತ್ರಿಗೂ ಒಬ್ಬನೇ ಮಗನು. ಅವನ ಹೆಸರು ಸೂರ್ಯಕಾಂತನೆಂದು. ರಾಜಪುತ್ರ ಹಾಗೂ ಮಂತ್ರಿಪುತ್ರರಿಬ್ಬರೂ ಬಾಲ್ಯ ಸ್ನೇಹಿತರು. ಆದುದ ರಿಂದ ಅವರು ದೊಡ್ಡವರಾದ ಮೇಲೂ ಆ ಸ್ನೇಹವು ಗಾಢವಾಗಿ ಬೆಳೆಯಿತು. ಆಟ-ಪಾಟ-ಊಟ ಎಲ್ಲವನ್ನೂ ಒಬ್ಬರನ್ನು ಒಬ್ಬರು ಬಿಟ್ಟು ಮಾಡುತ್ತಿದ್ದಿಲ್ಲ. ಅವರ ಈ ಅನ್ಯೋನ್ಯ ಗೆಳೆತನದಿಂದ ರಾಜನಿಗೂ ಸ್ವಲ್ಪ ಅಸೂಯೆ ಯಾಯಿತು. ಹೇಗಾದರೂ ಮಾಡಿ ಅವರೀರ್ವರಲ್ಲಿ ಒಡಕು ಹುಟ್ಟಿಸಬೇಕೆಂದು ಅವನು ಬಗೆದನು ಮತ್ತು ಒಡಕು ಹುಟ್ಟಿಸಿದವರಿಗೆ ಅಪಾರವಾದ ದ್ರವ್ಯ ಕೊಡುತ್ತೇನೆಂದು ಏಕಾಂತದಲ್ಲಿ ತಿಳಿಸಿದನು.

ವ್ಯಾಪಾರಿಗಳಿಗೆ ಹಣದ ಮೇಲೆ ಆಶೆ ಬಹಳ. ಆದುದರಿಂದ ಮಾಣಿಕ ಚಂದನೆಂಬ ಒಬ್ಬ ವ್ಯಾಪಾರಿಯು ಧನದ ಮೇಲಿನ ಮೋಹದಿಂದ ಒಡಕು ಹುಟ್ಟಿಸುವದಾಗಿ ನುಡಿದನು. ಆದರೆ ಮನೆಗೆ ಬಂದ ಮೇಲೆ ಅದು ಹೇಗೆಂದು ಚಿಂತಿಸತೊಡಗಿದನು. ಆಗ ಅವನ ಮಗಳು ರೂಪವತಿಯು ಬಂದು ತಂದೆಯ ಚಿಂತೆಗೆ ಕಾರಣವೇನೆಂದು ಕೇಳಿದಳು. ಮಾಣಿಕಚಂದನು ತಿಳಿಸಲು ಅವಳು ಇದನ್ನು ತಾನು ಸುಲಭವಾಗಿ ಸಾಧಿಸುವುದಾಗಿ ನುಡಿದಳು. ಆ ಮೇಲೆ ಅವಳು ದಿವ್ಯ ವಸ್ತ್ರಾಭರಣಗಳನ್ನು ಧರಿಸಿ ಶೃಂಗರಿಸಿಕೊಂಡು ತನ್ನ ಮನೆಯ ಮಹಡಿಯ ಮೇಲೆ ಕುಳಿತು ರಾಜರಸ್ತೆಯನ್ನೇ ನೋಡುತ್ತಾ ಕುಳಿತಳು.

ಒಂದು ದಿನ ಸುಮತಿ ಮತ್ತು ಸೂರ್ಯಕಾಂತರಿಬ್ಬರೂ ಕುದುರೆಗಳಲ್ಲಿ ಕುಳಿತು ಆ ದಾರಿಯಾಗಿ ಬರುತ್ತಿದ್ದರು. ವರ್ತಕನ ಮನೆಯು ಸಮೀಪಿಸಿದಾಗ ರಾಜಪುತ್ರನ ದೃಷ್ಟಿ ಮಹಡಿಯ ಮೇಲೆ ಕುಳಿತಿದ್ದ ವರ್ತಕನ ಮಗಳ ಮೇಲೆ ಬಿತ್ತು. ಅವಳೂ ಅವನನ್ನು ಕಂಡು ಮುಗುಳು ನಗುತ್ತ ಕಣ್ಸನ್ನೆ ಮಾಡಿದಳು. ಆಗ ರಾಜಪುತ್ರನು ಮಂತ್ರಿಸುತನನ್ನು ಉದ್ದೇಶಿಸಿ "ಮಿತ್ರಾ, ಮೇಲೆ ಕುಳಿತ ಆ ಶೃಂಗಾರವತಿಯು ನನಗೆ ನೇತ್ರಸಂಕೇತ ಮಾಡಿ ಕರೆದಳು. ಏನೆಂದು ಕೇಳಿ ಬಾ'' ಎಂದು ಕಳಿಸಿದನು.

ಮಂತ್ರಿಸುತನು ಆ ಶೋಭನಾಂಗಿಯು ಕುಳಿತಿದ್ದ ಕಡೆ ತೆರಳಿದನು. ಅವನನ್ನು ಕಂಡಕೂಡಲೇ ರೂಪವತಿಯು "ತಾವು ಯಾರು? ತಮ್ಮ ಹೆಸರೇನು? ಬಂದುದರಿಂದ ನನಗೆ ಪರಮ ಸಂತೋಷವಾಯಿತು. ನಿಮ್ಮಂತಹ ಸುಂದರ ಯುವಕರನ್ನೇ ನಾನು ಇಷ್ಟರವರೆಗೆ ಕಂಡಿಲ್ಲ" ಎಂದು ವರ್ಣಿಸತೊಡಗಿದಳು. ಅವನು ಅಲ್ಲಿಂದ ಹೊರಟಾಗ ಎರಡು ವೀಳ್ಯಗಳನ್ನು ಕೊಟ್ಟಳು ಮತ್ತು ತಲೆಯನ್ನು ಬಗ್ಗಿಸಿ ಅವನ ಕಿವಿಗೆ ತಾಗುವವರೆಗೆ ಬಾಯಿ ತಂದು ಏನೋ ರಹಸ್ಯವನ್ನು ಹೇಳುವವಳಂತೆ ತುಟಿಯನ್ನು ಮಾತ್ರ ಅಲುಗಿಸಿದಳು. ಮಂತ್ರಿಸುತನು ಆ ಮೇಲೆ ಕೆಳಗೆ ಬಂದು "ಮಿತ್ರಾ, ಅವಳು ಸುಶೀಲೆಯಲ್ಲ'' ಎಂದನು. ಆ ರಾಜಪುತ್ರನು ಆ ರಸ್ತೆಯಲ್ಲಿ ಹೋಗುತ್ತಿದ್ದ ಕೆಲವು ಜನರನ್ನು ನಿಲ್ಲಿಸಿ ಪ್ರಶ್ನಿಸಲು ಅವಳು ವರ್ತಕನ ಮಗಳೆಂದು ತಿಳಿಯಿತು. ಅದನ್ನು ತಿಳಿದ ಮೇಲೆ ರಾಜಪುತ್ರನಿಗೆ ತನ್ನ ಮಿತ್ರನ ಮಾತಿನಲ್ಲಿ ಅಪನಂಬಿಕೆಯುಂಟಾಯಿತು. "ಅವಳು ನಿನ್ನ ಕಿವಿಯಲ್ಲಿ ಏನೋ ಹೇಳಿದಳಲ್ಲಾ! ಅದೇನು?'' ಎಂದು ಪ್ರಶ್ನಿಸಿದನು. "ಏನೂ ಇಲ್ಲ" ಎಂದು ಮಂತ್ರಿಸುತನು ಉತ್ತರವಿತ್ತನು. ಅದರಿಂದ ರಾಜಪುತ್ರನಿಗೆ ಸಿಟ್ಟುಬಂದಿತು. "ಮಿತ್ರಾ, ಇಷ್ಟರವರೆಗೆ ನಿನ್ನ ಮಾತಿನಲ್ಲಿ ವಿಶ್ವಾಸವಿಟ್ಟಿದ್ದೆ. ಇನ್ನು ನಂಬಲಾರೆ. ನೀನು ಮೋಸಗಾರನು" ಎಂದನು. ಇದರಿಂದ ಮಂತ್ರಿಸುತನಿಗೂ ಸಿಟ್ಟುಬಂದಿತು. ಇಬ್ಬರೂ ಜಗಳಾಡತೊಡಗಿದರು. ಆಗ ಅಲ್ಲಿ ಕೂಡಿದ ಜನರು ಬಂದು ಅವರನ್ನು ಬಿಡಿಸಿದರು. ಇಬ್ಬರೂ ಸಿಟ್ಟಿನ ಮುಖಮುದ್ರೆಗಳಿಂದಲೇ ತಂತಮ್ಮ ಭವನಗಳಿಗೆ ಹೊರಟು ಹೋದರು. ವರ್ತಕನ ಮಾತು ಸಫಲವಾಯಿತು. ರಾಜನಿಂದ ಅವನು ಉಡುಗೊರೆಯನ್ನೂ ಪಡೆ

ದುಕೊಂಡನು.

ಕೆಲವು ದಿನಗಳಾದ ಮೇಲೆ ರಾಜಪುತ್ರನು ತನ್ನ ಪತ್ನಿಯಿದ್ದ ಬೇರೆ ನಗರಕ್ಕೆ ಹೊರಟು ಹೋದನು. ಮಂತ್ರಿಸುತನಿಗೆ ಇದು ತಿಳಿದ ಮೇಲೆ ಅವನಿಗೆ ಬಹಳ ದುಃಖವಾಯಿತು. ಸುಮ್ಮಸುಮ್ಮನೇ ಅವನು ತನ್ನ ಮೇಲೆ ಕೋಪಿಸಿಕೊಂಡನಲ್ಲಾ ಎಂದು ವ್ಯಥೆಪಟ್ಟನು. ಆ ಮೇಲೆ ತಾನೂ ವೇಷ ಪಲ್ಲಟ ಮಾಡಿಕೊಂಡು ರಾಜಪುತ್ರನು ವಾಸಿಸುತ್ತಿದ್ದ ನಗರಕ್ಕೇ ಹೊರಟು ಹೋದನು. ರಾಜಪುತ್ರನು ವಾಸಿಸುತ್ತಿದ್ದ ಅರಮನೆಯ ಇದಿರಿಗೇ ತಾನೊಂದು ಮನೆಯನ್ನು ಹಿಡಿದು ಅಲ್ಲಿ ವಾಸಿಸತೊಡಗಿದನು. ರಾಜಪುತ್ರ ನನ್ನು ದಿನಂಪ್ರತಿ ನೋಡುವುದರಿಂದಲೇ ಅವನ ಮನಸ್ಸಿಗೆ ಎಷ್ಟೋ ಸಂತೋಷವಾಗುತ್ತಿತ್ತು. ಆದರೆ ಅವನ ಕಣ್ಣಿಗೆ ಮಾತ್ರ ಅವನು ಕಾಣ ಸಿಗುತ್ತಿದ್ದಿಲ್ಲ. ಅವನಲ್ಲಿ ಬಂದು ವಾಸಿಸುತ್ತಿರುವುದೂ ರಾಜಪುತ್ರನಿಗೆ ಗೊತ್ತಾಗಲಿಲ್ಲ.

ಹೀಗಿರುತ್ತಿರಲು ಒಂದು ದಿನ ಮಧ್ಯರಾತ್ರಿ ರಾಜಪುತ್ರನಿದ್ದ ಅರಮನೆ ಯಿಂದ ಯಾರೋ ಸದ್ದಿಲ್ಲದೆ ಹೊರಗೆ ಹೋಗುತ್ತಿದ್ದುದು ಮಂತ್ರಿಸುತನ ಕಣ್ಣಿಗೆ ಬಿತ್ತು. ಅವನೂ ಹಿಂಬಾಲಿಸಿದನು. ಸ್ವಲ್ಪ ದೂರ ಹೋದ ಮೇಲೆ "ಯಾರವರು?" ಎಂದು ಪ್ರಶ್ನಿಸಿದನು. ಆಗ ಆ ವ್ಯಕ್ತಿಯು "ನಾನು ಈ ಮನೆಯ ಮಾಲಕ" ಎಂದು ಹೇಳಿತು. ಆದರೆ ಅದು ಹೆಂಗಸಿನ ಧ್ವನಿಯಂ ತಿತ್ತು. ಆದುದರಿಂದ ಮಂತ್ರಿಸುತನ ಸಂಶಯ ಇನ್ನಷ್ಟು ಹೆಚ್ಚಾಯಿತು. ಆ ವ್ಯಕ್ತಿಗೆ ತಿಳಿಯದಂತೆ ಅವನನ್ನೇ ಅನುಸರಿಸಿದನು. ಆ ಗೂಢ ಪುರುಷನು ಅಶ್ವಪಾಲಕನ ಮನೆಗೆ ತೆರಳಿದನು. ಮಂತ್ರಿಸುತನೂ ಗೋಡೆಹತ್ತಿ ಕಿಟಕಿಯ ಬದಿ ಅಡಗಿ ಕುಳಿತು ಅಲ್ಲಿ ನಡೆದ ಸಂಭಾಷಣೆಯನ್ನು ಕೇಳಿದನು. ಆ ಗೂಢ ವ್ಯಕ್ತಿ ರಾಜಪುತ್ರನ ಹೆಂಡತಿಯಾಗಿದ್ದ ವಿಮಲಾವತಿಯೇ ಆಗಿದ್ದಳು. ಅಶ್ವ ಪಾಲಕನೊಡನೆ ಅವಳು ಅಕ್ರಮ ಸಂಬಂಧವನ್ನಿಟ್ಟುಕೊಂಡಿದ್ದಳು. ವಿಮ ಲಾವತಿಯು, "ಸ್ವಾಮಿ, ನಾಳೆ ನನ್ನನ್ನು ಪತಿಯು ಕರೆದುಕೊಂಡು ಹೋಗುತ್ತಾನಂತೆ. ನಾನಲ್ಲಿಗೆ ತೆರಳಿದ ಮೇಲೆ ನೀನು ಬಾರದೇ ಇರಬೇಡ. ನಾನು ನಿನಗೆ ಗುಪ್ತವಾಗಿ ಬರಲು ದಾಸಿಯೊಡನೆ ಹೇಳಿಕಳಿಸುತ್ತೇನೆ" ಎಂದಳು. ಆಗ ಆ ಅಶ್ವಪಾಲಕನು "ಪ್ರಿಯೇ, ನಿನ್ನ ಮೇಲೆ ನನ್ನ ಪ್ರೇಮವು

ಅಗಾಧವಾಗಿದೆ. ನಿನ್ನನ್ನು ಬಿಟ್ಟಿರಲಾರೆ. ನೀನು ಹೋದ ಮೇಲೆ ನನ್ನ ಪ್ರಾಣ ಉಳಿಯಲಾರದು" ಎಂದನು. ಆಗ ವಿಮಲಾವತಿಯು "ಹಾಗಾದರೆ ನಾನು ಹೋಗುವುದೇ ಇಲ್ಲ. ರಾಜಪುತ್ರನನ್ನು ಕೊಂದೇ ಬಿಡುತ್ತೇನೆ'' ಎಂದು ಹೇಳಿ ಅವನನ್ನು ಆಲಿಂಗಿಸಿದಳು ಮತ್ತು ಅವರೀರ್ವರೂ ಮಂಚದಲ್ಲಿ ಮಲಗಿಕೊಂಡು ಸರಸ ಸಂಭಾಷಣೆ ಹಾಗೂ ರತಿವಿಲಾಸ ಪ್ರವೃತ್ತರಾದರು. ಆ ಮೇಲೆ ಮತ್ತೆ ಅವಳು ಅಲ್ಲಿಂದ ಹೊರಟು ಬಂದಳು. ಅವಳ ಹಿಂದೆಯೇ ಮಂತ್ರಿಸುತನೂ ಬಂದನು. ಆದರೆ ಅವಳು ರಾಜಪುತ್ರನ ಕೋಣೆಗೆ ಪ್ರವೇಶಿಸಿದ ಕೂಡಲೇ ಖಡ್ಗದಿಂದ ಅವನ ಶಿರಕಡಿದು ಬೇರೆ ಕೋಣೆಗೆ ಹೋಗಿ ಬಿಟ್ಟಳು. ಮಂತ್ರಿಸುತನು ಆ ಕೋಣೆಗೆ ಹೊಕ್ಕಿದಾಗ ರಾಜಪುತ್ರನ ಅವಸ್ಥೆ ಮುಗಿದಿತ್ತು. ಆಗ ಅವನು ಮಿತ್ರನ ರುಂಡವನ್ನು ತನ್ನ ತೊಡೆಯ ಮೇಲಿಟ್ಟುಕೊಂಡು ದುಃಖಿಸತೊಡಗಿದನು.

ಇತ್ತ ಆ ವಿಮಲಾವತಿಯು ಅವನನ್ನು ನೋಡಿದಳು. ಮುಂದೇನು ಮಾಡಬೇಕೆಂದು ಯೋಚಿಸಿ "ಕಳ್ಳರು ಕಳ್ಳರು ! ಓಡಿ ಬನ್ನಿ. ನನ್ನ ಪತಿಯನ್ನು ಕೊಂದರು ! ಅಯ್ಯೋ ! ಅಯ್ಯೋ !!'' ಎಂದು ಕೂಗತೊಡಗಿದಳು. ಆಗ ನೆರೆಮನೆಯವರು ಓಡಿಬಂದರು. ಬೇರೊಂದು ಅರಮನೆಯಲ್ಲಿದ್ದ ಅವಳ ಅಣ್ಣ ತಮ್ಮಂದಿರೂ ಬಂದರು. "ರಕ್ತಮಯವಾಗಿದ್ದ ಆ ಕಳ್ಳನೇ ತನ್ನ ಪತಿಯನ್ನು ಕೊಂದವನು. ಓಡಿಹೋಗಲು ಸಾಧ್ಯವಾಗದೇ ಹೋದುದರಿಂದ ಈ ರೀತಿ ಕಪಟ ಪ್ರೀತಿಯಿಂದ ಅಳುತಿದ್ದಾನೆ" ಎಂದು ಅವಳು ಹೇಳಿದಳು. ಆಗ ಅವರು ಅದನ್ನೇ ನಂಬಿ ಅವನ ಕೈಕಾಲು ಕಟ್ಟಿ ಹೊಡೆದರು. ಮುಂಜಾನೆ ಅವನನ್ನು ಅರಸನಿದ್ದಲ್ಲಿಗೂ ಕರೆದೊಯ್ದರು. ಆಗ ಅವನು ಮಂತ್ರಿಸುತನೆಂದು ಅರಸನಿಗೆ ಗುರುತು ಹತ್ತಿತು. ಮಂತ್ರಿಸುತನನ್ನು ರಾಜನು ಏಕಾಂತ ಸ್ಥಳಕ್ಕೆ ಕರೆದೊಯ್ದು "ನಿನ್ನ ಮಿತ್ರನನ್ನು ಏಕೆ ಕೊಂದೆ ?" ಎಂದು ಪ್ರಶ್ನಿಸಿದನು. ಆಗ ಮಂತ್ರಿಸುತನು ತಾನು ನಿರಪರಾಧಿಯೆಂದು ಹೇಳಿ, ರಾತ್ರಿ ನಡೆದ ಸಂಗತಿಗಳನ್ನೆಲ್ಲ ತಿಳಿಸಿದನು. ಮತ್ತು ವಿಮಲಾವತಿಯ ಅಣ್ಣತಮ್ಮಂದಿರನ್ನು ತನ್ನೊಂದಿಗೆ ಕಳಿಸಿದರೆ ಕೆಲವು ದಿವಸಗಳೊಳಗೇ ಅವಳ ದುರಾಚಾರ ವೃತ್ತಿಯನ್ನು ತೋರಿಸಿ ಕೊಡುವುದಾಗಿ ವಚನ ಕೊಟ್ಟನು.

ರಾಜನು ಅದಕ್ಕೊಪ್ಪಿ ಮಂತ್ರಿಪುತ್ರನನ್ನು ಬಿಟ್ಟನು. ಮಂತ್ರಿಸುತನು ವಿಮಲಾವತಿಯ ಸಹೋದರರನ್ನು ಕರೆದುಕೊಂಡು ಹೊರಟುಹೋದನು. ರಾತ್ರಿ ಅವರೆಲ್ಲರೂ ವೇಷಪಲ್ಲಟ ಮಾಡಿಕೊಂಡು ಅಡಗಿ ಕುಳಿತರು. ವಿಮ ಲಾವತಿಯು ಮಧ್ಯರಾತ್ರಿ ಪುರುಷ ವೇಷಧರಿಸಿ ಅಶ್ವಪಾಲಕನ ಮನೆಗೆ ಹೋದಳು. ತಾನು ತನ್ನ ಪತಿಯನ್ನು ಕೊಂದುದು, ಮಂತ್ರಿಸುತನ ಮೇಲೆ ಆರೋಪ ಹೊರಿಸಿದುದು ಮೊದಲಾದ ವೃತ್ತಾಂತವನ್ನು ಅವಳು ತಿಳಿಸಿ ತನ್ನ ಉಪಪತಿಯೊಡನೆ ಪ್ರೇಮಾಲಾಪ ಮಾಡತೊಡಗಿದಳು. ಅವಳು ತನ್ನ ಕಾಮೋನ್ಮಾದವನ್ನು ತೀರಿಸಿಕೊಂಡು ಹಿಂತಿರುಗುವಾಗ ಮಂತ್ರಿ ಸುತನು ಉಳಿದವರೊಂದಿಗೆ ಅವಳನ್ನು ತಡೆದನು. ಅವಳನ್ನು ಕೈ ಕಾಲುಕಟ್ಟಿ ತಂದರು. ಬೆಳಗಾದ ಮೇಲೆ ರಾಜನಾದ ಅವಳ ತಂದೆಗೆ ನಡೆದ ಸಂಗತಿ ಯನ್ನು ತಿಳಿಸಿದರು. ರಾಜನು ರೇಗಿ ಅವಳನ್ನೂ ಅಶ್ವಪಾಲಕನನ್ನೂ ಕೊಲ್ಲಲು ಆಜ್ಞಾಪಿಸಿದನು. ಆ ಮೇಲೆ ಅಶ್ವಪಾಲಕನನ್ನೂ ಕೊಲ್ಲಲು ಆಜ್ಞಾಪಿಸಿದನು. ಆ ಮೇಲೆ ಮಂತ್ರಿ ಸುತನು ತನ್ನ ಮಿತ್ರನ ಚಿತಾಭಸ್ಮ ವನ್ನು ತೆಗೆದುಕೊಂಡು ತೀರ್ಥಯಾತ್ರೆಗೆ ಹೊರಟು ಹೋದನು.

ಆ ಮೇಲೆ ಒಂದು ದಿನ ಅವನು ತನ್ನ ಪತ್ನಿಯ ಮನೆಗೆ ಬಂದನು. ಅವಳು ಬಹಳ ಭಯಭಕ್ತಿಗಳಿಂದ ಪತಿಯನ್ನು ಆದರಿಸಿದಳು. ತಾನು ಊರ ಲ್ಲಿಲ್ಲದಾಗ ತನ್ನ ಹೆಂಡತಿಯು ಹೇಗಿದ್ದಳೋ ಏನೋ ಎಂಬ ಸಂದೇಹವು ಅವನನ್ನು ಪೀಡಿಸುತ್ತಿತ್ತು. ಆದುದರಿಂದ ಅವನು ಅವಳಿಗೆ ತಿಳಿಯದಂತೆ ಅವಳನ್ನು ಪರೀಕ್ಷಿಸಹತ್ತಿದನು. ಒಂದು ದಿನ ರಾತ್ರಿ ಅವನು ಗಾಢ ನಿದ್ರೆ ಹೋದವರಂತೆ ನಟಿಸಿದನು. ಅವನ ಹೆಂಡತಿಯು ಏನೋ ಒಂದು ವ್ರತ ಹಿಡಿದಿದ್ದಳು. ಆದುದರಿಂದ ಒಬ್ಬಳೇ ರಾತ್ರಿ ದೀಪವನ್ನು ಹಿಡಿದುಕೊಂಡು ಕಾಳಿಕಾ ದೇವಾಲಯಕ್ಕೆ ಹೋದಳು. ಮಂತ್ರಿಸುತನೂ ಅವಳನ್ನು ಅನು ಸರಿಸಿದ್ದನು. ದೇವಾಲಯಕ್ಕೆ ತೆರಳಿದ ಆ ರಮಣಿಯು ದೇವತಾರ್ಚನೆ ಮಾಡುತ್ತ "ತಾಯೇ, ನನ್ನ ಪತಿಯು ಮತ್ತೆ ಮನೆಗೆ ಬರುವಂತೆ ನೀನು ಅನುಗ್ರಹಿಸಿದೆ. ನಿನ್ನ ದಯೆಯಿಂದಲೇ ನನಗೆ ಅವನ ದರ್ಶನ ಭಾಗ್ಯವು ಲಭಿಸಿತು. ಆದರೆ ಅವನು ತುಂಬ ಸೋತಿರುವನು. ಮೊದಲಿನಂತೆ ಯೌವನ, ಧೈರ್ಯ, ಉತ್ಸಾಹವುಳ್ಳವನಾಗುವಂತೆ ಮಾಡು" ಎಂದು ಪ್ರಾರ್ಥಿಸಿದಳು.

ಆಗ ದೇವಿಯು ಅವಳ ಭಕ್ತಿಗೆ ಮೆಚ್ಚಿ ಅಮೃತವನ್ನು ಕೊಟ್ಟಳು. ಮಂತ್ರಿಸುತನು ಆಶ್ಚರ್ಯದಿಂದ ಬೇಗನೇ ಹಿಂತಿರುಗಿ ಮೊದಲಿದ್ದ ಸ್ಥಳದಲ್ಲೇ ಮಲಗಿ ನಿದ್ದೆಹೋದನು. ಆ ಪತಿಭಕ್ತಿ ಪರಾಯಣೆಯು ಬಂದು ಪತಿಯು ಇನ್ನೂ ನಿದ್ರಾಸಕ್ತನಾಗಿರುವುದನ್ನು ಕಂಡು ಆ ಅಮೃತವನ್ನು ಕಟಿಕಿಯ ಬಳಿ ಇಟ್ಟಳು.

ರಾತ್ರಿ ಒಂದು ಬೆಕ್ಕು ಹಾರಿಬಂತು. ಆಗ ಆ ಅಮೃತದ ಪಾತ್ರೆಯು ಕೆಳಕ್ಕುರುಳಿತು. ಅಮೃತವು ಹರಿದು ಮಂತ್ರಿಪುತ್ರನು ಇಟ್ಟಿದ್ದ ರಾಜಪುತ್ರನ ಚಿತಾಭಸ್ಮದ ಮೇಲೆ ಬಿದ್ದಿತು. ಆ ಕೂಡಲೇ ರಾಜಪುತ್ರನು ಜೀವಂತನಾದನು. ಆ ಕೋಣೆಯಲ್ಲಿ ಮಂಚದ ಮೇಲೆ ಮಲಗಿಕೊಂಡಿರುವವಳು ತನ್ನ ಹೆಂಡತಿಯೆಂದೇ ಅವನ ಭ್ರಮೆ. ಮೋಸಗಾರನಾದ ಮಂತ್ರಿಸುತನು ತನ್ನ ಹೆಂಡತಿಯನ್ನೂ ಕಾಮಿಸಿ ತನಗೆ ನಿದ್ದೆ ಬಂದಾಗ ಅಲ್ಲಿ ಬಂದು ಅವಳನ್ನು ಕೂಡಿರಬೇಕೆಂದು ಅನನು ಗ್ರಹಿಸಿ ಅಲ್ಲಿದ್ದ ಕತ್ತಿಯಿಂದ ಅವನ ರುಂಡವನ್ನು ಹಾರಿಸಿದನು. ಆಗ ಮಂತ್ರಿಸುತನ ಪತ್ನಿಯು ಆ ಕೋಣೆಯಿಂದ ಅಳುತ್ತ ಹೊರಗೆ ಓಡಿದಳು. ಆಗ ಗದ್ದಲ ಕೇಳಿ ನೆರೆಹೊರೆಯ ಜನರು ಓಡಿಬಂದರು. ರಾಜಪುತ್ರನು ತನ್ನ ಮಿತ್ರನನ್ನು ಕೊಲೆ ಮಾಡಿದ ಘೋರ ಕೃತ್ಯವನ್ನು ಅವರು ಕಂಡು ತಬ್ಬಿಬ್ಬಾದರು. "ರಾಜಪುತ್ರ, ನಿನ್ನ ಪತ್ನಿಯು ದುರಾಚಾರ ಪ್ರವೃತ್ತಳಾಗಿ ನಿನ್ನನ್ನು ಕೊಂದಳು ಆಗ ನಿನ್ನ ಮಿತ್ರನು ನಿನ್ನ ಚಿತಾಭಸ್ಮವನ್ನು ಹಿಡಿದುಕೊಂಡು ತೀರ್ಥಕ್ಷೇತ್ರಗಳನ್ನೆಲ್ಲ ಸಂಚರಿಸಿದನು. ದೇವಿಯ ಕೃಪೆಯಿಂದ ನೀನು ಬದುಕಿದೆ. ಆದರೆ ಹಿಂದುಮುಂದು ನೋಡದೆ ನಿನ್ನ ಮಿತ್ರನನ್ನು ಕೊಂದೆಯಲ್ಲಾ!" ಎಂದರು. ಆಗ ರಾಜಪುತ್ರನು ಕೂಡಾ ತನ್ನ ಅವಿವೇಕತನಕ್ಕಾಗಿ ದುಃಖಿತನಾದನು ಮತ್ತು ಅಲ್ಲೇ ಆತ್ಮಹತ್ಯೆ ಮಾಡಿಕೊಳ್ಳಲು ಯತ್ನಿಸಿದನು. ಮಂತ್ರಿಸುತನ ಹೆಂಡತಿಯೇ ಅವನ ಕೈಯಿಂದ ಕಠಾರಿಯನ್ನು ಕಸಿದುಕೊಂಡಳು. ಅಮೃತದ ಪಾತ್ರೆಯಲ್ಲಿ ಇನ್ನೂ ಸ್ವಲ್ಪ ಅಮೃತವಿದ್ದುದರಿಂದ ಅದನ್ನು ತನ್ನ ಪತಿಯ ಮೇಲೆ ಪ್ರೋಕ್ಷಿಸಿದಳು. ಆ ಕೂಡಲೇ ಅವನು ಎದ್ದು ಕುಳಿತನು. ರಾಜಪುತ್ರ ಮತ್ತು ಮಂತ್ರಿಪುತ್ರರಿಬ್ಬರೂ ಒಬ್ಬರನ್ನೊಬ್ಬರು ಆಲಿಂಗಿಸಿಕೊಂಡರು ಮತ್ತು ಮೊದಲಿನಂತೆ ಅನ್ಯೋನ್ಯ ಮಿತ್ರತ್ವದಿಂದಿದ್ದರು.

ಮೋಹಿನೀ, ವಿಮಲಾಪತಿಯು ದುರಾಚಾರ ಪ್ರವೃತ್ತಳಾದುದರಿಂದ ಎಂತಹ ದುಃಖವೊದಗಿತು ನೋಡು. ಕೊನೆಗೆ ಅವಳೇ ತನ್ನ ಪ್ರಾಣವನ್ನು ಕಳೆದುಕೊಂಡಳು. ಆದುದರಿಂದ ಸ್ತ್ರೀಯರು ದುಷ್ಕರ್ಮ ಮಾಡಬಾರದು ಎಂದು ಹೇಳಿದನು. ಮೋಹಿನಿಗೆ ಅದರಿಂದಲೂ ತೃಪ್ತಿಯಾಗದೇ ಇದ್ದುದರಿಂದ ಅವನು ಇನ್ನೊಂದು ಕಥೆ ಹೇಳತೊಡಗಿದನು.

## ೨೪. ಬಡಿಗರವನ ಕಥೆ

ಪೂರ್ವಕಾಲದಲ್ಲಿ ಕಾಶ್ಮೀರ್ ದೇಶದಲ್ಲಿ ವಿಜಯಪಾಲನೆಂಬ ಅರಸನಿದ್ದನು. ಅವನಿಗೊಬ್ಬ ಮಗನಿದ್ದನು. ವಿಜಯಪಾಲನು ಮುದುಕನಾದುದರಿಂದ ತನ್ನ ಮಗನಿಗೆ ಪಟ್ಟಕಟ್ಟಲು ನಿರ್ಧರಿಸಿದನು. ಅದರಂತೆ ವಿಜಯವರ್ಮ ರಾಜಕುಮಾರನ ಪಟ್ಟಾಭಿಷೇಕ ಮಹೋತ್ಸವದ ದಿನವೂ ಬಂದಿತು. ಆದಿನ ಅನೇಕ ಮಾಂಡಲಿಕರೂ ನೆರೆಹೊರೆಯ ರಾಜರೂ ಅಮಿತ ಉಡುಗೊರೆಗಳನ್ನು ತೆಗೆದುಕೊಂಡು ಬಂದರು. ಒಬ್ಬ ಬಡಿಗರವನು ಒಂದು ಮರದ ಕುದುರೆಯನ್ನು ತಂದು ರಾಜನಿಗರ್ಪಿಸಿ "ಮಹಾರಾಜ, ಇದನ್ನು ಹತ್ತಿದರೆ ಇದು ಆಕಾಶಕ್ಕೆ ಜಿಗಿಯುವದು ಮತ್ತು ಆಕಾಶದಲ್ಲಿ ಸಂಚರಿಸುವದು" ಎಂದು ನುಡಿದನು. ಆ ಆಶ್ಚರ್ಯವನ್ನು ಎಲ್ಲರೂ ನೋಡಬಯಸಿದರು. ಆಗ ಆ ಬಡಿಗರವನು ಎಲ್ಲರ ಸಮಕ್ಷಮ ಆ ಕುದುರೆಯನ್ನೇರಿದನು. ಅದು ಆಕಾಶಕ್ಕೆ ನೆಗೆದು ಹಾರತೊಡಗಿತು. ಸ್ವಲ್ಪ ಹೊತ್ತಿನ ಮೇಲೆ ಅವನು ಅದನ್ನು ಇಳಿಸಿ ರಾಜನ ಮುಂದೆ ನಿಂತನು. ಬಡಿಗರವನ ಕಾರ್ಯಕೌಶಲ್ಯವನ್ನು ಕಂಡು ರಾಜನು ಮೆಚ್ಚಿ "ನಿನ್ನ ಅಭಿಲಾಷೆಯೇನು? ಹೇಳು, ಅದನ್ನು ಈಡೇರಿಸುತ್ತೇನೆ" ಎಂದು ನುಡಿದನು. ಆಗ ಬಡಿಗರವನು "ಮಹಾರಾಜ, ನಾನು ಬಹಳ ಕಷ್ಟಪಟ್ಟು ನನ್ನ ಗುರುಗಳಿಂದ ಇದನ್ನು ಕಲಿತೆ. ಇದಕ್ಕಾಗಿ ಅಪಾರ ಹಣ ವೆಚ್ಚಮಾಡಿದೆ. ನನ್ನ ತಂಗಿಯನ್ನು ಆ ಗುರುವಿಗೆ ಮದುವೆ ಮಾಡಿಕೊಡಬೇಕಾಯಿತು. ನನಗೆ ಹಣದ ಮೇಲೆ ಆಶೆಯಿಲ್ಲ. ಆದರೆ ತಮ್ಮ ಮಗಳನ್ನು ನನಗೆ ಕೊಟ್ಟು ಮದುವೆ ಮಾಡಬೇಕು" ಎಂದು ನುಡಿದನು. ಅದನ್ನು ಕೇಳಿ ರಾಜನಿಗೆ ಕೋಪಬಂದಿತು. ಅವನನ್ನು ಬಂಧಿಸಿ

ಸೆರೆಮನೆಯಲ್ಲಿ ಇರಿಸಿದನು.

ಇತ್ತ ಅವನು ತಂದಿದ್ದ ಕುದುರೆಯು ಕುತೂಹಲವನ್ನು ಕೆರಳಿಸು ವಂತಿತ್ತು. ಒಂದು ದಿನ ರಾಜಪುತ್ರನಾದ ಜಯುವರ್ಮನು ಅದನ್ನು ಏರಿ ಸಂಚರಿಸಿದನು. ಆದರೆ ಬಹಳ ಹೊತ್ತಾದರೂ ಅವನು ಹಿಂತಿರುಗಲಿಲ್ಲ. ಅದನ್ನು ಕಂಡು ರಾಜನು ಗಾಬರಿಯಾದನು. ಜೇಲಿನಲ್ಲಿದ್ದ ಬಡಿಗರವನನ್ನು ಕರೆಸಿ ಕೇಳಿದನು. ಆಗ ಆ ಬಡಿಗರವನು "ಮಹಾರಾಜ ಆ ಕುದುರೆಯ ವೇಗವನ್ನು ಕಡಿಮೆ ಮಾಡುವ ಮತ್ತು ಹಿಂದೆ ತಿರುಗಿಸುವ ವಿದ್ಯೆ ರಾಜಪುತ್ರ ನಿಗೆ ಗೊತ್ತಿಲ್ಲ. ಆದುದರಿಂದ ಅವನು ಹಿಂತಿರುಗುವದು ಹೇಗೆ?'' ಎಂದು ಕೇಳಿದನು. ಆಗ ರಾಜನು ಮೂರ್ಛೆಹೋದನು. ಅಂತಃಪುರದ ಸ್ತ್ರೀಯರೂ ದುಃಖಿಸತೊಡಗಿದರು.

ಅತ್ತ ಜಯುವರ್ಮನು ಐದು ದಿನಗಳ ವರೆಗೂ ಪ್ರಯಾಣ ಮಾಡಿದನು. ಅಶ್ವದ ಗತಿಯನ್ನು ಕಡಿಮೆ ಮಾಡುವ ಉಪಾಯವೇ ಅವನಿಗೆ ತಿಳಿದಿರಲಿಲ್ಲ. ಹಸಿವು ನೀರಡಿಕೆಗಳನ್ನು ತಾಳಲಾರದೆ ಅವನು ಕಂಗೆಟ್ಟನು. ದೇಹಾಯಾಸ ವನ್ನು ತಡೆಯಲಾರದೆ ಆ ಅಶ್ವದ ಕುತ್ತಿಗೆಗೆ ಎರಡೂ ಕೈಗಳನ್ನು ಸುತ್ತಿ ಕೊಂಡು ನಿದ್ದೆ ಮಾಡಿದನು. ನಿದ್ದೆಯಲ್ಲೇ ಅವನು ಉರುಳಿಬೀಳುತ್ತಿದ್ದ. ಆದರೆ ಕಾಲುಗಳೆರಡನ್ನೂ ಅದರ ಹೊಟ್ಟೆಗೆ ಕತ್ತರಿಯಂತೆ ಸಿಕ್ಕಿಸಿಕೊಂ ಡಿದ್ದ. ಹೀಗಾಗಿ ಬೀಳಲಿಲ್ಲ. ಹಾಗೆ ಹೋಗುತ್ತಿದ್ದಾಗ ಅವನ ಕಾಲು ಕುದುರೆಯ ಹೊಟ್ಟೆಯಲ್ಲಿದ್ದ ಒಂದು ಗುಂಡಿಗೆ ತಗುಲಿತು. ಕೂಡಲೇ ಕುದುರೆಯು ಭೂಮಿಗೆ ಇಳಿಯಿತು. ಜಯುವರ್ಮನು ಸ್ವಲ್ಪ ಹೊತ್ತಿನವರೆಗೆ ವಿಶ್ರಾಂತಿ ತೆಗೆದುಕೊಂಡು ಆಮೇಲೆ ಮತ್ತೆ ಕುದುರೆಯನ್ನೇರಿ ಕಾಶೀ ಪಟ್ಟ ಣಕ್ಕೆ ಹೋದನು. ಆದರೆ ಕತ್ತಲಾಗಿದ್ದುದರಿಂದ ಕೋಟೆಯ ಬಾಗಿಲನ್ನು ಮುಚ್ಚಿದ್ದರು. ಆದುದರಿಂದ ಜಯುವರ್ಮನು ಊರಿನ ಸಮೀಪವಿರುವ ನದಿಯ ದಂಡೆಯಲ್ಲಿದ್ದ ಒಬ್ಬ ಕುಂಬಾರನ ಮನೆಯಲ್ಲಿ ಆಶ್ರಯ ಪಡೆದನು.

ಜಯುವರ್ಮನು ಅಲ್ಲೇ ಕೆಲವು ದಿವಸಗಳ ವರೆಗೆ ಉಳಿದನು. ಒಂದು ದಿನ ಅವನು ನಗರ ನೋಡಲು ಬಂದನು. ನಗರದಲ್ಲಿ ಎಲ್ಲಕ್ಕಿಂತಲೂ ಉನ್ನ ತವಾದ ಒಂದು ಕಟ್ಟಡವಿದ್ದಿತು. ಅದು ಯಾರ ಮನೆ ಎಂದು ರಾಜಪುತ್ರನು ಕೇಳಿದನು. ಅದು ಈ ಊರಿನ ರಾಜಪುತ್ರಿ ಇರುವ ಸ್ಥಳ. ಅದರ ಸಮೀಪ

ಹೋಗಬೇಡ. ಆ ಮನೆಯನ್ನು ನೋಡಬೇಡ. ಅವಳನ್ನು ನೋಡಲೂ ಯತ್ನಿಸಬೇಡ. ಸಿಪಾಯಿಗಳು ನೋಡಿದರೆ ನಿನ್ನನ್ನು ಜೀವಂತ ಬಿಡಲಾರರು" ಎಂದು ಊರವರು ಎಚ್ಚರಿಸಿದರು. ಜಯವರ್ಮನು "ಸರಿ" ಎಂದು ತಲೆ ಅಲ್ಲಾಡಿಸಿ ಮುಂದೆ ಹೋದನು. ಮಧ್ಯರಾತ್ರಿ ಎಲ್ಲರೂ ನಿದ್ರಾವಶರಾದಾಗ ಅವನು ತನ್ನ ಕೀಲುಕುದುರೆಯನ್ನು ಏರಿ ಆ ಉನ್ನತ ಅರಮನೆಯ ಕಡೆ ತೆರಳಿದನು. ಕಿಟಕಿಯ ಮೂಲಕ ಒಳಗೆ ಹೋಗಿ ಕುದುರೆಯನ್ನು ಒಂದುಕಡೆ ನಿಲ್ಲಿಸಿದನು. ಆಮೇಲೆ ರಾಜಪುತ್ರಿಯು ಮಲಗಿದ್ದ ಕೋಣೆಯನ್ನು ಪ್ರವೇಶಿಸಿದನು. ಅವಳು ಬಹಳ ರೂಪವಂತೆ. ಆದುದರಿಂದ ಅವಳನ್ನು ಕಂಡಕೂಡಲೇ ಜಯವರ್ಮನು ಪ್ರೇಮಾಸಕ್ತನಾದನು. ಅವಳ ಮೈಮೇಲಿನ ಚಿನ್ನಾಭರಣಗಳನ್ನೆಲ್ಲ ತೆಗೆದು ಹಿಡಿದುಕೊಂಡನು. ತನ್ನ ಮೈಮೇಲಿನ ಉತ್ತರೀಯವನ್ನು ಅವಳ ಮೈಮೇಲೆ ಹೊದಿಸಿ ಹಿಂತಿರುಗಿದನು.

ಮರುದಿನ ಮುಂಜಾನೆ ರಾಜಪುತ್ರಿಯು ಎದ್ದು ನೋಡಿದಾಗ ತನ್ನ ಮೇಲೆ ಆಭರಣಗಳಿಲ್ಲದಿದ್ದುದನ್ನು ಕಂಡು ಆಶ್ಚರ್ಯಚಕಿತಳಾದಳು. ಕೋಣೆಯ ಬಾಗಿಲುಗಳು ಮುಚ್ಚಿದುದರಿಂದ ಕಳ್ಳನು ಬರಲು ದಾರಿಯೇ ಇರಲಿಲ್ಲ. ಹೀಗಾಗಿ ಎಲ್ಲರೂ ನಿರುಪಾಯರಾಗಿ ಕುಳಿತರು. ಆ ದಿನ ರಾತ್ರಿ ಕೂಡಾ ರಾಜಪುತ್ರನು ಮತ್ತೆ ಮಧ್ಯರಾತ್ರಿಯ ಹೊತ್ತಿಗೆ ಬಂದು ಹಿಂದಿನ ದಿನ ತಾನು ತೆಗೆದುಕೊಂಡು ಹೋಗಿದ್ದ ಆಭರಣಗಳನ್ನೆಲ್ಲ ಮತ್ತೆ ರಾಜಪುತ್ರಿಯ ಹಾಸಿಗೆಯ ಮೇಲಿಟ್ಟು ತನ್ನ ಉತ್ತರೀಯವನ್ನು ಹಿಡಿದುಕೊಂಡು ಮರಳಿದನು. ಮುಂಜಾನೆ ತನ್ನ ಆಭರಣಗಳೆಲ್ಲವೂ ಇದ್ದುದನ್ನು ಕಂಡು ರಾಜಪುತ್ರಿಯು ಮತ್ತಷ್ಟು ಚಕಿತಳಾದಳು. ಯಾವನೋ ತನ್ನ ನಿದ್ರಾಸಮಯದಲ್ಲಿ ತನ್ನ ಕೋಣೆಗೆ ಪ್ರವೇಶಿಸುತ್ತಿದ್ದಾನೆಂದು ಅವಳು ಗ್ರಹಿಸಿ ಮೂರನೇ ದಿನ ನಿದ್ದೆ ಬಂದವಳಂತೆ ನಟಿಸಿ ಮಲಗಿಕೊಂಡಳು.

ಅದೇ ದಿನ ರಾತ್ರಿ ರಾಜಪುತ್ರನು ಬಂದು ಆ ಮಂಚದ ಮೇಲೆ ಕುಳಿತು ರಾಜಪುತ್ರಿಯ ಅಂಗಾಂಗ ಸೌಂದರ್ಯವನ್ನು ಕಾಣುತ್ತಿರುವಾಗಲೇ ಅವಳು ಎದ್ದು ಕುಳಿತಳು. ಅವನು ಎದ್ದು ಹೋಗಲು ಯತ್ನಿಸಿದಾಗ ಅವನ ಕೈ ಹಿಡಿದು ಮಂಚದಲ್ಲಿ ಕುಳ್ಳಿರಿಸಿ "ಸ್ವಾಮಿ, ನೀನು ಯಾರು? ಇಲ್ಲಿಗೆ ಬಂದುದಾದರೂ ಹೇಗೆ?" ಎಂದು ಕೇಳಿದಳು. ಆಗ ರಾಜಪುತ್ರನು "ರಾಜ

ಪುತ್ರಿ, ನಾನು ದೇವದೂತನು. ವಿಮಾನದಲ್ಲಿ ಬಂದೆ'' ಎಂದು ಹೇಳಿದನು. ಅವನ ರೂಪ ಯೌವನಗಳಿಂದ ಮೋಹಿತಳಾದ ರಾಜಪುತ್ರಿಯು ಹೋಗ ಗೊಡಲಿಲ್ಲ. "ನೀವು ನನ್ನ ದೇಹ ಸ್ಪರ್ಶಿಸಿರುವುದರಿಂದ ನೀವೇ ನನ್ನ ಪತಿ." ಎಂದಳು. ಇಬ್ಬರೂ ಗಾಂಧರ್ವ ಪದ್ಧತಿಯಂತೆ ಮದುವೆಯಾಗಿ ಮಂಚದ ಮೇಲೆ ಮಲಗಿಕೊಂಡರು. ರತ್ನಾವತಿಯು ತುಂಬುಜವ್ವನೆಯಾಗಿದ್ದುದರಿಂದ ಅವಳಿಗೆ ಅಂದೇ ಗರ್ಭೋತ್ಪತ್ತಿಯಾಯಿತು. ಅಂದಿನಿಂದ ದಿನಂಪ್ರತಿ ಜಯ ವರ್ಮನು ರಾತ್ರಿ ಅವಳಿದ್ದಲ್ಲಿಗೆ ಬಂದು ಅವಳೊಡನೆ ನಿದ್ದೆ ಮಾಡಿ ಬೆಳಗಾಗುವ ಮುನ್ನ ಕುದುರೆಯೇರಿ ಹೊರಟು ಹೋಗುತ್ತಿದ್ದನು.

ಹೀಗಿರುತ್ತಿರಲು ರತ್ನಾವತಿಯು ಗರ್ಭಿಣಿಯಿರುವ ಚಿಹ್ನೆಗಳು ದಾಸಿ ಯರಿಗೆ ತಿಳಿದುವು. ಅವರು ಮಹಾರಾಣಿಗೆ ತಿಳಿಸಿದರು. ಮಹಾರಾಣಿಯು ಬಂದು ಮಗಳನ್ನು ಕೇಳಲು ಅವಳು ಇಲ್ಲವೆಂದೇ ಹಠ ಹಿಡಿದಳು. ಮಹಾ ರಾಣಿ ರೇಗಿ ರಾಜನಿಗೂ ಇದನ್ನು ತಿಳಿಸಿದಳು. ರಾಜನು ಕುಲಮಾನ ಮರ್ಯಾ ದೆಗೆ ಭಂಗ ಬಂದಿತೆಂದು ಹೆದರಿ ಮಗಳನ್ನು ಗುಟ್ಟಾಗಿ ಕೊಲ್ಲುವುದೇ ಉಪಾ ಯವೆಂದು ಬಗೆದನು. ಆದರೆ ಮಹಾರಾಣಿಗೆ ಅದು ಉಚಿತವೆಂದೆನಿಸಲಿಲ್ಲ. ಗುಟ್ಟಾಗಿ ಅವಳ ಕೋಣೆಗೆ ಬರುತ್ತಿದ್ದವನನ್ನು ಹೇಗಾದರೂ ಮಾಡಿ ಅವನು ಯೋಗ್ಯ ಸತ್ಪುರುಷನಿದ್ದರೆ ಅವನಿಗೇ ಅವಳನ್ನು ಮದುವೆ ಮಾಡಿಕೊಡು ವುದು ಉಚಿತವೆಂದು ನುಡಿದಳು. ರಾಜನು ಅದಕ್ಕೊಪ್ಪಿ ಆ ದಿನ ಆ ಮಗಳ ಕೋಣೆಯ ಬಾಗಿಲು ಕಿಟಕಿ ನೆಲಗಳ ಮೇಲೆ ಗಂಧದೆಣ್ಣೆಯನ್ನು ಹಚ್ಚಿಸಿ ಅದರ ಮೇಲೆ ಗುಲಾಲನ್ನು ಚೆಲ್ಲಿಸಿದನು. ಆ ಕೋಣೆಯ ಸಮೀಪ ಯಾರೂ ಹೋಗಬಾರದೆಂದು ಕಟ್ಟಾಜ್ಞೆಯನ್ನಿತ್ತನು. ಗುಲಾಲ್ ಬಣ್ಣದ ಬಟ್ಟೆ ಬರೆ ತೊಟ್ಟವನನ್ನು ರಾಜಸಭೆಗೆ ತಂದು ಒಪ್ಪಿಸಬೇಕೆಂದು ಸಾರಿದನು.

ಅದೇ ದಿನ ರಾತ್ರಿ ಜಯವರ್ಮನು ಕಿಟಕಿ ದಾಟಿ ಬಂದಾಗ ಕಾಲು ಜಾರಿ ಬಿದ್ದನು. ಆಗ ಅವನ ಬಟ್ಟೆಬರೆಗಳಿಗೆಲ್ಲ ಗುಲಾಲ್ ಬಣ್ಣ ತಾಗಿತು. ರತ್ನಾವತಿಯು ಅವನಿಗೆ ಬೇರೆ ಬಟ್ಟೆಗಳನ್ನು ತೊಟ್ಟುಕೊಳ್ಳಲು ಕೊಟ್ಟಳು. ರಾಜಾಜ್ಞೆಯನ್ನು ರಹಸ್ಯವನ್ನು ತಿಳಿಸಿದಳು. ಆಗ ರಾಜಪುತ್ರನು ಬೇಗನೇ ತನ್ನ ಮನೆಗೆ ಬಂದು, ಸಮೀಪವಿದ್ದ ರಜಕನಿದ್ದಲ್ಲಿಗೆ ಹೋಗಿ ಆ ಗುಲಾಲ್ ಬಣ್ಣ ತಾಗಿದ ಬಟ್ಟೆಗಳನ್ನು ಬೆಳಗಾಗುವುದರೊಳಗೆ ಒಗೆದು ಕೊಡಬೇಕೆಂದು

ತಿಳಿಸಿದನು. ಆ ರಜಕನು ತನ್ನ ಹೆಂಡತಿಗೆ ಹೇಳಿದನು. ಅವಳು ನೆರೆಮನೆ
ಯವಳಿಗೆ ಹೇಳಿದಳು. ಹೀಗಾಗಿ ಅದು ಸಿಪಾಯಿಗಳ ಕಿವಿಗೂ ಮುಟ್ಟಿತು.
ಜಯವರ್ಮನನ್ನು ಹಿಡಿದು ತರಲು ಸಿಪಾಯಿಗಳು ಕುಂಬಾರನ ಮನೆಗೂ
ಧಾವಿಸಿದರು. ರಾಜಪುತ್ರನು ಕೂಡಲೇ ತನ್ನ ಕುದುರೆಯನ್ನೇರಿ ಆಕಾಶಕ್ಕೆ
ಜಿಗಿದನು. ಆ ಮೇಲೆ ರತ್ನಾವತಿಯು ಕೊಠಡಿಗೆ ಬಂದು ತನ್ನೊಡನೆ ಬರಲು
ಕೇಳಿಕೊಂಡನು. ಅವನು ರಾಜಪುತ್ರನೆಂದು ತಿಳಿದಕೂಡಲೇ ರತ್ನಾವತಿಯು
ಸಂತೋಷಭರಿತಳಾಗಿ ಆ ಮೇಲೆ ಕುದುರೆಯನ್ನೇರಿದಳು. ಆಕಾಶಮಾರ್ಗವಾಗಿ
ಆ ಕುದುರೆ ಸಂಚರಿಸಿ ಜಯವರ್ಮನ ರಾಜ್ಯಕ್ಕೇ ಬಂದಿತು.

ಆಗ ರಾಜಪುತ್ರನು ತನ್ನ ಕೀಲುಗುದುರೆಯನ್ನೂ ರಾಣಿಯನ್ನೂ
ಅರಮನೆಯ ಉದ್ಯಾನದಲ್ಲಿ ನಿಲ್ಲಿಸಿ ತಾನೊಬ್ಬನೇ ಅರಮನೆಗೆ ಬಂದು ತಂದೆ
ಯಾದ ವಿಜಯಪಾಲ ಅರಸನಿಗೆ ನಮಸ್ಕರಿಸಿದನು. ಮಗನು ಜೀವಂತ
ಹಿಂತಿರುಗಿದುದರಿಂದ ಮುದುಕನಾದ ವಿಜಯಪಾಲನಿಗೆ ಹೋದ ಜೀವ
ಮರಳಿ ಬಂದಂತಾಯಿತು. ಅವನ ಗೌರವಾರ್ಥವಾಗಿ ಸರಕಾರೀ ಕಛೇರಿ
ಗಳನ್ನು ಮುಚ್ಚಿದರು. ಜನರಿಗೆ ಮಿಠಾಯಿ ಹಂಚಿದರು. ಸೆರೆಮನೆಯಲ್ಲಿದ್ದ
ಕೈದಿಗಳನ್ನು ಬಿಡುಗಡೆ ಮಾಡಿದರು. ಆಗ ಬಡಿಗರವನನ್ನು ಬಿಟ್ಟರು.
ಕಾರಣವೇನೆಂದು ಅವನಿಗೆ ತಿಳಿದಿರಲಿಲ್ಲ. ಆದುದರಿಂದ ನಗರಕ್ಕೆ ಬಂದು ಜನ
ರೊಡನೆ ಕೇಳಿದನು ಆಗ ಅವರು, "ರಾಜಪುತ್ರನು ಕೀಲು ಕುದುರೆ ಏರಿ
ತನ್ನ ರಾಣಿಯೊಂದಿಗೆ ಬಂದಿದ್ದಾನೆ. ಅವಳು ಉದ್ಯಾನ ವನದಲ್ಲಿರುವಳು"
ಎಂದು ಹೇಳಿದರು. ಆಗ ಆ ಬಡಿಗರವನೂ ತೋಟಕ್ಕೆ ಹೋದನು. ಅಲ್ಲಿಗೆ
ಹೋದಮೇಲೆ "ರಾಣಿಯವರನ್ನು ಕುದುರೆಯ ಮೇಲೆ ಕರೆದುಕೊಂಡು ಬಾ
ಎಂದು ರಾಜರು ಅಪ್ಪಣೆ ಮಾಡಿರುವರು'' ಎಂದು ಪಹರೆಯವರಿಗೆ ಹೇಳಿ
ದನು. ಅವರು ಅವನನ್ನು ಒಳಗೆ ಬಿಟ್ಟರು. ಅದೇ ಸಮಾಚಾರವನ್ನು
ರಾಜಪುತ್ರಿಗೂ ತಿಳಿಸಿದನು. ಅವಳು ಒಪ್ಪಿದುದರಿಂದ ಬಡಿಗರವನು ಆ
ರಾಜಪುತ್ರಿಯನ್ನು ಕೀಲುಗುದುರೆಯ ಮೇಲೆ ಕುಳ್ಳಿರಿಸಿ ತಾನೂ ಹತ್ತಿದನು.
ಅದು ತಕ್ಷಣ ಅಂತರಿಕ್ಷಕ್ಕೆ ಹಾರಿತು. ಅವಳನ್ನು ಕರೆದೊಯ್ಯಲು ಬರುತ್ತಿದ್ದ
ರಾಜಪುತ್ರನನ್ನು ಕಂಡು "ರಾಜಪುತ್ರಾ, ನೀವು ನನ್ನನ್ನು ವಂಚಿಸಿದಿರಿ.
ಆದರೆ ದೇವರು ದಯತೋರಿದ. ಈ ರಾಜಪುತ್ರಿಯು ದೊರಕಿದಳಲ್ಲಾ"

ಎಂದು ಹಂಗಿಸಿ ವೇಗವಾಗಿ ಹಾರಿಹೋದನು. ಆ ಕುದುರೆಯನ್ನು ಒಂದು ಕಾಡಿನ ಮಧ್ಯೆ ಇಳಿಸಿದನು ಮತ್ತು ರತ್ನಾವತಿಯನ್ನು ಬಲಾತ್ಕರಿಸತೊಡಗಿದನು. ಆಗ ರತ್ನಾವತಿಯು ಗಟ್ಟಿಯಾಗಿ ಅಳತೊಡಗಿದಳು. ಕಾಡಿಗೆ ಬೇಟೆಗೆ ಬಂದಿದ್ದ ರಾಜನ ಪರಿವಾರದವರು ಅವಳು ಅಳುವ ಸ್ವರ ಕೇಳಿ ಓಡಿ ಬಂದರು. ಅವರಿಬ್ಬರನ್ನೂ ಅವರು ಬಂಧಿಸಿ ಒಯ್ದರು. ರತ್ನಾವತಿಯು ತನ್ನ ಕಥೆಯನ್ನೆಲ್ಲ ಆ ರಾಜನಿಗೆ ತಿಳಿಸಿದಳು. ಆಗ ಅವನು ಆ ಬಡಿಗರವನ ತಲೆ ಹಾರಿಸಲು ಆಜ್ಞಾಪಿಸಿದನು. ರತ್ನಾವತಿಯು ವಿರಹತಾಪದಿಂದಲೂ ಬಸುರಿನ ಬಯಕೆಗಳಿಂದಲೂ ದಿನೇ ದಿನೇ ಕೊರಗಹತ್ತಿದಳು. ರಾಜನು ಅನೇಕ ವೈದ್ಯರನ್ನು ಕರೆಸಿ ಔಷಧೋಪಚಾರ ಮಾಡಿದರೂ ಅದರಿಂದ ಅವಳ ರೋಗವು ಗುಣವಾಗಲಿಲ್ಲ.

ಜಯವರ್ಮನು ರತ್ನಾವತಿಯ ವಿರಹದಿಂದ ಬೇಸತ್ತು ಸನ್ಯಾಸಿಯ ವೇಷ ಹಾಕಿಕೊಂಡು ಅವಳನ್ನು ಹುಡುಕಹತ್ತಿದನು. ರತ್ನಾತಿಯು ಇದ್ದ ನಗರಕ್ಕೂ ಅವನು ಬಂದನು. ಮಂತ್ರ, ತಂತ್ರ, ಔಷಧೋಪಚಾರ ವೊದಲಾದವುಗಳೆಲ್ಲ ಬಲ್ಲ ರಾಜಸನ್ಯಾಸಿಯೆಂದು ಅರಮನೆಗೆ ಸುದ್ದಿ ಮುಟ್ಟಿಸಿದನು. ಆಗ ರಾಜನೂ ಅವನನ್ನು ಕರೆಸಿಕೊಂಡು ರತ್ನಾವತಿಯ ಮನೆಗೆ ಕಳಿಸಿದನು. ಸನ್ಯಾಸಿಯನ್ನು ಕಂಡಕೂಡಲೇ ಅವನು ತನ್ನ ಪತಿಯೆಂದು ರತ್ನಾವತಿಗೆ ಗೊತ್ತಾಯಿತು. ಅವನೂ ಗುರುತು ಹಿಡಿದನು. ಆದರೆ ಇಬ್ಬರೂ ಬಹಿರಂಗವಾಗಿ ಅದನ್ನು ತೋರಿಸಿಕೊಳ್ಳಲಿಲ್ಲ. ಅವನ ಮಂತ್ರ ತಂತ್ರ ಔಷಧಿಗಳಿಂದ ತನಗೆ ಸ್ವಲ್ಪ ಗುಣವಾಗಿದೆಯೆಂದೂ ರತ್ನಾವತಿಯು ನಟಿಸಿದಳು. ಅವಳಿಗೊಂದು ಭೂತಬಾಧೆಯಿದೆಯೆಂದೂ ಅದನ್ನು ಬಿಡಿಸದೆ ಅವಳ ರೋಗ ಪರಿಹಾರವಾಗುವದಿಲ್ಲವೆಂದೂ ಸನ್ಯಾಸಿಯು ನುಡಿದನು. ಅವಳು ಬಂದಿದ್ದ ಕೀಲುಕುದುರೆಯನ್ನು ಆಹುತಿ ಕೊಡಬೇಕು. ಅದಕ್ಕಾಗಿ ಧನ-ಧಾನ್ಯ, ಹಾಲು-ಸಕ್ಕರೆ, ಲಿಂಬೆಹಣ್ಣು ಮೊದಲಾದವುಗಳನ್ನು ತರಿಸಿದನು. ರಾಜನು ನಂಬಿ ಅವೆಲ್ಲವುಗಳನ್ನು ಒದಗಿಸಿದನು. ಆಮೇಲೆ ಆ ಸನ್ಯಾಸಿಯು ಭೂತ ಬಿಡಿಸುವ ನೆವದಿಂದ ರತ್ನಾವತಿಯನ್ನು ಆ ಕೀಲುಕುದುರೆಯ ಮೇಲೆ ಕುಳ್ಳಿರಿಸಿದನು. ತಾನೂ ಕುಳಿತು ಅದರ ಕೀಲು ತಿರುಗಿಸಿದನು. ಕೂಡಲೇ ಅದು ಆಕಾಶಕ್ಕೆ ನೆಗೆಯಿತು.

ಆದರೆ ಆಕಾಶದಲ್ಲಿ ಹಾರುತ್ತಿದ್ದಾಗಲೇ ರತ್ನಾವತಿಗೆ ಪ್ರಸೂತವೇದನೆ ಉಂಟಾಯಿತು. ಕೀಲುಕುದುರೆಯನ್ನು ಇಳಿಸಬೇಕೆಂದು ಅವಳು ಪತಿಗೆ ತಿಳಿಸಿದಳು. ಆದರೆ ಕೆಳಗೆ ಸಮುದ್ರವೇ ಇದ್ದಿತು. ಕೊನೆಗೆ ಒಂದು ಸಣ್ಣ ದ್ವೀಪವು ಕಾಣಿಸಿದುದರಿಂದ ಜಯವರ್ಮನು ಅಲ್ಲಿಳಿಸಿದನು. ಇಳಿದ ಕೂಡಲೇ ರತ್ನಾವತಿಯು ಪುತ್ರನನ್ನು ಹಡೆದಳು ಅಲ್ಲೇ ಇದ್ದ ಕೆಲವು ಮರದ ತುಂಡು ಗಳನ್ನು ಮಂಚದಂತೆ ಜೋಡಿಸಿ ಅದರಲ್ಲಿ ಮಗುವನ್ನು ಮಲಗಿಸಿದರು. ಹಸಿವೆಯನ್ನು ಬಗೆಹರಿಸಿಕೊಳ್ಳಲು ಅಲ್ಲಿ ಏನೂ ಇರಲಿಲ್ಲ. ಆದುದರಿಂದ ಆಹಾರ ವಸ್ತುಗಳನ್ನು ತರುವದಕ್ಕಾಗಿ ಜಯವರ್ಮನು ಮತ್ತೆ ಕೀಲುಕುದುರೆ ಯನ್ನೇರಿ ಹೋದನು. ಅವನು ಹೊರಟು ಹೋದ ಕೂಡಲೇ ಸಮುದ್ರದ ನೀರು ಉಕ್ಕಿತು. ಆ ದ್ವೀಪದ ಮೇಲೆ ತೆರೆಗಳು ಬಡಿಯತೊಡಗಿದವು. ಅದು ಕೂಡಾ ಮುಳುಗಿತು. ರತ್ನಾವತಿಯು ಒಂದು ಮರದ ತುಂಡನ್ನು ಗಟ್ಟಿಯಾಗಿ ಹಿಡಿದುಕೊಂಡಳು. ತೆರೆಗಳು ಅದನ್ನು ಒಂದೆಡೆ ಹೊಡೆದು ಕೊಂಡು ಹೋದವು. ಮಗುವನ್ನು ಮಲಗಿಸಿದ್ದ ಮರದ ಮಂಚವೂ ಮತ್ತೊಂದೆಡೆ ತೇಲಿಹೋಯಿತು. ಅತ್ತ ಕೀಲುಕುದುರೆಯನ್ನೇರಿ ಜಯ ವರ್ಮನು ಹಾರುತ್ತಿದ್ದಾಗ ಅದಕ್ಕೂ ಬೆಂಕಿ ತಾಕಿತು. ಅದೂ ಮುರಿದುದ ರಿಂದ ಅವನೂ ಸಮುದ್ರದಲ್ಲಿ ಇನ್ನೊಂದೆಡೆ ಬಿದ್ದುಬಿಟ್ಟನು. ಹೀಗೆ ಮೂವರೂ ಸಮುದ್ರದಲ್ಲಿ ಮೂರು ಕಡೆ ತೇಲಿಹೋದರು.

ಮರುದಿನ ಮುಂಜಾನೆ ಒಬ್ಬ ಬೆಸ್ತನು ಬಲೆ ಬೀಸಲು ಸಮುದ್ರದ ಕಡೆಗೆ ಬಂದಾಗ ತೇಲುತಿದ್ದ ಮರದ ಮಂಚವನ್ನು ಕಂಡು ದೋಣಿಯನ್ನು ನಡೆಸುತ್ತ ಅದೇನೆಂದು ನೋಡಿದನು. ಅದರ ಮೇಲೆ ಮಲಗಿದ್ದ ಶಿಶುವನ್ನು ಕಂಡು ಆಶ್ಚರ್ಯದಿಂದ ಅದನ್ನು ಎತ್ತಿಕೊಂಡು ಬಂದನು. ಅವನ ಹೆಂಡತಿಗೂ ಆ ಮಗುವನ್ನು ಕಂಡು ಬಹಳ ಮಮತೆಯಾಯಿತು. ಅವರು ಅತಿ ಬಡವರು ಮಗುವನ್ನು ಸಾಕಿ ಸಲುಹುವ ಯೋಗ್ಯತೆ ಇರಲಿಲ್ಲ. ಆದುದರಿಂದ ಆ ಮಗು ವನ್ನು ರಾಜನಿಗೊಪ್ಪಿಸಿದರೆ ಅದರ ಪಾಲನೆ ಪೋಷಣೆ ಮಾಡುವನು, ತಮಗೂ ಅವನು ದ್ರವ್ಯ ಕೊಡುವನೆಂದು ನಂಬಿದರು. ಅವರ ಊಹೆಯಂತೆ ರಾಜನು ಮಗುವನ್ನು ಅಂಗೀಕರಿಸಿ ಆ ಬೆಸ್ತರವನಿಗೆ ಸ್ವಲ್ಪ ಹೊನ್ನನ್ನು ಕೊಟ್ಟು ಕಳಿಸಿದನು. ಅದೇ ದಿನ ಆ ನಗರದ ವೇಶ್ಯೆಯೊಬ್ಬಳು ನದಿಯಲ್ಲಿ

ದೋಣೀ ವಿಹಾರಕ್ಕೆ ಹೋಗಿದ್ದಳು. ಆಗ ಮರವನ್ನು ಹಿಡಿದುಕೊಂಡು ತೇಲಿ ಬರುತ್ತಿದ್ದ ರತ್ನಾವತಿಯನ್ನು ಕಂಡು ಕರುಣೆಯಿಂದ ಅವಳನ್ನು ರಕ್ಷಿಸಿ ತನ್ನ ಮನೆಗೆ ಕರೆದುಕೊಂಡು ಹೋದಳು. ಅದೇ ದಿನ ಜಯವರ್ಮನು ಮತ್ತೊಂದು ಕಡೆ ಸಮುದ್ರದ ದಂಡೆಹತ್ತಿದನು. ದೂರದಲ್ಲೊಂದು ತೋಟ ಕಾಣಿಸಿದುದರಿಂದ ಜಯವರ್ಮನು ಅಲ್ಲಿ ತೆರಳಿದನು. ಆ ತೋಟಗಾರನು ದಯೆಯಿಂದ ಅವನನ್ನು ತನ್ನ ಮನೆಗೆ ಕರೆದೊಯ್ದು ಊಟ ಉಪಚಾರ ಗಳನ್ನು ಮಾಡಿಸಿದನು. ತನ್ನ ತೋಟದಲ್ಲಿ ಬೆಳೆಯುತ್ತಿದ್ದ ಹೂಗಳನ್ನೂ ಹಣ್ಣು ಹಂಪಲಗಳನ್ನೂ ಮಾರಲು ಅವನು ಒಂದು ಅಂಗಡಿಯನ್ನಿಟ್ಟಿದ್ದನು. ಜಯವರ್ಮನನ್ನು ಆ ಹೂ ಮಾರುವ ಅಂಗಡಿಯಲ್ಲಿ ಕುಳ್ಳಿರಿಸಿದನು.

ಇತ್ತ ರಾಜನು ಮಗುವಿಗೆ ವಿದ್ಯಾಬುದ್ಧಿಗಳನ್ನು ಕಲಿಸಿದನು. ವೇಶ್ಯೆಯ.ು ರತ್ನಾವತಿಗೆ ನೃತ್ಯ ಮತ್ತು ಸಂಗೀತಗಳನ್ನು ಕಲಿಸಿದಳು. ಹೀಗೆ ಅನೇಕ ವರುಷಗಳು ಕಳೆದವು. ಮಗುವು ದೊಡ್ಡವನಾದ. ಯೌವನಕ್ಕೆ ಬಂದನು. ಆ ಮೇಲೊಂದು ದಿನ ಅವನು ಸಂಗೀತ ಕೇಳಬೇಕೆಂಬ ಅಭಿ ಲಾಷೆಯಿಂದ ಆ ವೇಶ್ಯೆಯ ಮನೆಗೆ ಬಂದನು. ಅಲ್ಲಿ ರತ್ನಾವತಿಯೊಬ್ಬಳೇ ಕುಳಿತಿದ್ದಳು. ರಾಜಪುತ್ರನನ್ನು ಕಂಡಕೂಡಲೇ ಅವಳು ತನ್ನ ಮಗುವನ್ನು ನೆನಸಿಕೊಂಡು ರೋದಿಸತೊಡಗಿದಳು. ಅದರಿಂದ ಅವನಿಗೂ ಬಹಳ ದುಃಖ ವಾಯಿತು. ಕಾರಣವೇನೆಂದು ಕೇಳಲು ಅವಳು ತನ್ನ ಕಥೆಯನ್ನೆಲ್ಲ ಹೇಳಿ ದಳು. ಕೂಡಲೇ ರಾಜಪುತ್ರನು ಅವಳನ್ನು ಪಲ್ಲಕ್ಕಿಯಲ್ಲಿ ಅರಮನೆಗೆ ಕರೆ ದುಕೊಂಡು ಹೋದನು. ಅಲ್ಲಿ ಮಹಾರಾಣಿಯು ರತ್ನಾವತಿಯ ಕಥೆ ಕೇಳಿದ ಮೇಲೆ ಆ ಬೆಸ್ತರವನು ತಂದೊಪ್ಪಿಸಿದ ಮಗು ಅವಳದೇ ಇರಬೇ ಕೆಂದು ಸಂಶಯ ಪಟ್ಟಳು. ಮಗುವಿನ ಮೈಮೇಲೆ ಇದ್ದ ಪೀತಾಂಬರದ ತುಂಡನ್ನು ಅವಳು ತೆಗೆದಿಟ್ಟಿದ್ದಳು. ಅದನ್ನು ತಂದು ರತ್ನಾವತಿಗೆ ತೋರಿ ಸಲು ಅವಳು ತನ್ನದೇ ಎಂದು ಗುರುತು ಹಿಡಿದಳು ಮತ್ತು ತಾನು ಸಮುದ್ರ ದಲ್ಲಿ ಬಿದ್ದಾಗ ಉಟ್ಟುಕೊಂಡಿದ್ದ ಪೀತಾಂಬರವನ್ನು ತರಿಸಿ ಹರಿದಿದ್ದ ಭಾಗ ವನ್ನು ತೋರಿಸಿದಳು. ಆಗ ಆ ರಾಜಪುತ್ರನು ರತ್ನಾವತಿಯ ಮಗನೆಂದೇ ಎಲ್ಲರೂ ಅಭಿಪ್ರಾಯ ಪಟ್ಟರು. ಆಗ ಆ ತಾಯಿ ಮಕ್ಕಳು ಪ್ರೇಮಾತಿಶ ಯದಿಂದ ಆಲಿಂಗಿಸಿದರು.

ಆ ಮೇಲೊಂದು ದಿನ ರತ್ನಾವತಿಯು ಹೂಗಳನ್ನು ಕೊಂಡುಕೊಳ್ಳಲು ಪೇಟೆಗೆ ಹೋದಾಗ, ಅಂಗಡಿಯಲ್ಲಿ ಕುಳಿತಿದ್ದ ಜಯವರ್ಮನನ್ನು ನೋಡಿದಳು. ಅವನು ತನ್ನ ಪತಿಯಾಗಿರಬಹುದೆಂಬ ಸಂಶಯವೂ ಹುಟ್ಟಿತು. ಆದರೆ ನೋಡದೆ ಬಹಳ ಕಾಲವಾಗಿದ್ದುದರಿಂದ ಫಕ್ಕನೇ ಗುರುತುವಾಗುವಂತಿರಲಿಲ್ಲ. ಆದರೂ ರತ್ನಾವತಿಯು ತನ್ನ ದಾಸಿಯನ್ನು ಕಳಿಸಿ ಆ ಜಯವರ್ಮನನ್ನು ಮಾತನಾಡಿಸಿದಳು. ಜಯವರ್ಮನು ತನ್ನೆಲ್ಲ ಕಥೆಯನ್ನು ಹೇಳಿ ವ್ಯಥೆ ಪಟ್ಟನು. ಅವನೇ ತನ್ನ ಪತಿಯೆಂದು ರತ್ನಾವತಿಗೆ ಖಚಿತವಾಯಿತು. ಆ ಮೇಲೆ ರಾಜನಿದ್ದಲ್ಲಿಗೆ ತೆರಳಿ ಎಲ್ಲ ಸಂಗತಿಯನ್ನು ತಿಳಿಸಿದಳು. ರಾಜನು ಅವನನ್ನು ಅರಮನೆಗೆ ಕರೆಸಿ ಪತ್ನೀ ಪುತ್ರರನ್ನು ಅವನ ಮುಂದೆ ತಂದು ನಿಲ್ಲಿಸಿದನು. ಆಗ ಅವರೆಲ್ಲರೂ ಅತ್ಯಂತ ಪ್ರೇಮಾತಿಶಯದಿಂದ ಆಲಿಂಗಿಸಿಕೊಂಡರು. ಅರಮನೆಯಲ್ಲಿ ಅವರು ಕೆಲವು ದಿನಗಳ ವರೆಗೆ ಸುಖ ಸಂತೋಷದಿಂದ ಉಳಿದರು. ಆ ಮೇಲೆ ಆ ರಾಜನು ಅಂಗರಕ್ಷಕರೊಂದಿಗೆ ಅವರೆಲ್ಲರನ್ನೂ ಅವರ ರಾಜ್ಯಕ್ಕೆ ಕಳಿಸಿಕೊಟ್ಟನು. ಮಗನು, ಸೊಸೆ, ಮೊಮ್ಮಗ ನಗುಮೊಗದಿಂದ ಸುರಕ್ಷಿತ ಬಂದುದನ್ನು ಕಂಡು ವಯೋವೃದ್ಧನಾದ ವಿಜಯಪಾಲನಿಗೆ ಹಿಡಿಸಲಾರದಷ್ಟು ಸಂತೋಷವಾಯಿತು. ತನ್ನ ಮಗನಿಗೇ ಅವನು ರಾಜ್ಯವನ್ನು ಒಪ್ಪಿಸಿ ತಾನು ವಾನಪ್ರಸ್ಥಾಶ್ರಮ ಸೇರಿದನು.

ಮೋಹಿನೀ ಆ ಬಡಿಗರವನು ಕಾಮಾತುರನಾದುದರಿಂದ ತಾನು ಪ್ರಾಣ ಕಳೆದುಕೊಂಡನು. ಅಲ್ಲದೆ ಅನೇಕರ ಜೀವನವನ್ನು ಕಷ್ಟಕ್ಕೀಡು ಮಾಡಿದನು. ರತ್ನಾವತಿಯು ಕೂಡಾ ಪುರುಷ ಮೋಹದಿಂದ ಬಹಳ ದುಃಖಕ್ಕೀಡು ಮಾಡಿದಳು. ಆದುದರಿಂದ ಕಾಮವನ್ನು ನಿಗ್ರಹಿಸದಿದ್ದರೆ ಅದು ಸ್ತ್ರೀಪುರುಷರಿಗೆ ನಿಶ್ಚಯವಾಗಿಯೂ ಹಾನಿಯನ್ನುಂಟು ಮಾಡುತ್ತದೆ. ಆದುದರಿಂದ ನೀನೂ ಆ ದುರ್ಬುದ್ಧಿಗೆ ಒಳಗಾಗಬೇಡ. ಒಂದು ವೇಳೆ ಕಮಲಾವತಿಯ ಧೈರ್ಯ ಶೌರ್ಯ ನಿನ್ನಲ್ಲಿ ಕೂಡಾ ಇಲ್ಲ ಎಂದನು. ಆಗ ಅವಳು ಕಮಲಾವತಿಯ ಕಥೆ ಕೇಳಲು ಇಷ್ಟಪಟ್ಟುದುದರಿಂದ ಮೋಹನದಾಸನು ಅದನ್ನು ಹೇಳತೊಡಗಿದನು.

## ೨೫. ಕಮಲಾವತಿಯ ಕಥೆ

ಪೂರ್ವ ಕಾಲದಲ್ಲಿ ಹಸ್ತಿನಾವತಿಯಲ್ಲಿ ಬಲಭೀಮನೆಂಬ ಹೆಸರಿನ ಒಬ್ಬ ಅರಸನಿದ್ದನು. ಅವನ ಮಗನ ಹೆಸರು ವಜ್ರಸಿ ಈ ವಜ್ರನಿಗೆ ಮಂತ್ರಿ ಸುತನಾದ ತಾರಕದಾಸನೊಡನೆ ಬಹಳ ಅಚ್ಚು ಮೆಚ್ಚು. ಕರ್ಣಪುರದ ವೈಭವ ವರ್ಣನೆಗಳನ್ನು ಕೇಳಿ ಅದನ್ನು ನೋಡಿ ಬರಬೇಕೆಂದು ಕುತೂಹಲ ವುಳ್ಳವರಾದರು. ಇಬ್ಬರೂ ಅಮಿತ ದ್ರವ್ಯವನ್ನು ಹಿಡಿದುಕೊಂಡು ತಂತಮ್ಮ ಅಶ್ವಗಳನ್ನೇರಿ ಆ ನಗರಾಭಿಮುಖವಾಗಿ ಪ್ರಯಾಣ ಬೆಳಸಿದರು. ಅವರು ಆ ನಗರಕ್ಕೆ ಸಮೀಪಿಸಿದಾಗ ರಾತ್ರಿಯಾಯ್ತು. ಆದುದರಿಂದ ಊರ ಹೊರ ಗಿನ ಒಂದು ನದಿ ದಂಡೆಯಲ್ಲೇ ಬೀಡು ಬಿಟ್ಟರು.

ಮುಂಜಾನೆ ಆ ಕರ್ಣಪುರದ ರಾಜನ ಪುತ್ರಿ ನದೀ ಸ್ನಾನಕ್ಕೆ ಆ ದಂಡೆಗೆ ಬಂದಳು. ಆಗ ಮಂತ್ರಿಸುತನಾದ ತಾರಕದಾಸನು ಅಲ್ಲಿರಲಿಲ್ಲ. ವಜ್ರನು ಮಾತ್ರ ದಡದಲ್ಲಿ ನಿಂತಿದ್ದನು. ರಾಜಪುತ್ರಿಯು ಅವನನ್ನು ನೋಡಿ ಮೋಹಿತಳಾದಳು. ಅವನೂ ಅನುರಾಗ ದೃಷ್ಟಿಯಿಂದ ಅವಳನ್ನು ನೋಡ ತೊಡಗಿದನು. ಆದರೆ ಅವಳು ತನ್ನ ದಾಸೀ ಜನರೊಂದಿಗೆ ಬಂದಿದ್ದುದರಿಂದ ಇಬ್ಬರೂ ಮೂಕ ಸಂಕಟವನ್ನೇ ಅನುಭವಿಸಿದರು. ಪರಸ್ಪರ ಮಾತು ಕತೆ ಆಡಲಿಲ್ಲ. ಆದರೆ ಅವಳಿಗೆ ತನ್ನ ಮನಸ್ಸನ್ನು ಬಿಗಿ ಹಿಡಿಯುವುದೇ ಕಠಿನ ವಾಯಿತು. ಪದೇ ಪದೇ ಕಡೆಗಣ್ಣೋಟದಿಂದ ರಾಜಪುತ್ರನನ್ನು ನೋಡುತಿ ದ್ದಳು. ಅವಳ ಮನೋಭಿಲಾಷೆಯನ್ನು ಅರಿತ ಚತುರಳಾದ ಅವಳ ದಾಸಿಯು ಒಂದು ಕಮಲ ಪುಷ್ಪವನ್ನು ತಂದು ಅವಳ ಕೈಯಲ್ಲಿ ಕೊಟ್ಟಳು. ಆಗ ಆ ರಾಜಪುತ್ರಿಯು ಅದನ್ನು ಒಮ್ಮೆ ಸೂರ್ಯನಿಗೂ ಆ ಮೇಲೆ ರಾಜಪುತ್ರ ನಿಗೂ ತೋರಿಸಿ ತನ್ನ ಮೋರೆಗೆ ಮುದ್ದಿಟ್ಟುಕೊಂಡಳು. ದಂತಗಳಿಂದ ಕಡಿದು, ತನ್ನ ಕಿವಿಪಾದ ಕುತ್ತಿಗೆಗಳಿಗೂ ಒತ್ತಿಕೊಂಡು ತನ್ನ ದೇಹದ ಸುತ್ತಲೂ ತಂದು ನೀರಿನ ಮೇಲೆ ಚೆಲ್ಲಿ ಹೊರಟು ಹೋದಳು. ಅವಳು ಮಾಡಿದ ಈ ಸಂಕೇತಗಳೆಲ್ಲ ರಾಜಪುತ್ರನಿಗೆ ಅರ್ಥವಾಗಲಿಲ್ಲ. ಅವುಗಳಿಗೆ ಕೆಟ್ಟ ಅರ್ಥವನ್ನೇ ಕಲ್ಪಿಸಿದನು. ತನ್ನ ಪ್ರಾಣಕ್ಕೆ ಗಂಡಾಂತರವಿದೆಯೆಂದೂ

ಅವನು ಭಾವಿಸಿದನು ಆದುದರಿಂದ ಮಂತ್ರಿಸುತನು ಬಂದ ಕೂಡಲೇ ತನ್ನ ಭಯುವನ್ನು ಅವನಿಗೆ ತಿಳಿಸಿದನು.

ಆದರೆ ಆ ರಾಜಪುತ್ರಿಯು ಮಾಡಿದ ಸಂಕೇತಗಳಿಗೆ ತಾರಕದಾಸನು ಪ್ರಿಯವಾದ ಅರ್ಥಮಾಡಿದನು. ರಾಜಪುತ್ರನ ಮೇಲೆ ಅವಳಿಗೆ ಮೋಹವಾಗಿ ರುವುದನ್ನು ವ್ಯಕ್ತಪಡಿಸಿದವಳೆಂದು ಹೇಳಿ "ಕಮಲ ಪುಷ್ಪವನ್ನು ಮುಖಕ್ಕೆ ತೋರಿಸಿ ತಾನು ಮುದ್ದಿಸಿದುದರಿಂದ ನಮ್ಮೆಲ್ಲರ ಮುಖಗಳು ಅದಕ್ಕೆ ಸಮಾ ನವಾಗಿವೆ ಎಂದವಳು ಸೂಚಿಸಿದಳು. ಕರ್ಣಕ್ಕೆ ಒತ್ತಿಕೊಂಡುದುದರಿಂದ ಈ ಕರ್ನಪುರವನ್ನು ದಂತದಿಂದ ಕಚ್ಚಿದುದಕ್ಕೆ ತಾನು ದಂತಸೇನನ ಮಗ ಳೆಂದೂ, ಪಾದಗಳಿಗೆ ಮುಟ್ಟಿಸಿದುದರಿಂದ ತನ್ನ ಹೆಸರು ಕಮಲಾವತಿ ಯೆಂದೂ ಕುತ್ತಿಗೆಗೆ ತಗುಲಿಸಿದುದರಿಂದ ತನ್ನನ್ನು ಕಂಡು ಹೋಗಬೇಕೆಂದೂ ತನ್ನ ಸುತ್ತಲೂ ತಂದು ನೀರಿಗೆ ಚೆಲ್ಲಿದುದರಿಂದ ನಿನಗಾಗಿ ಆತ್ಮಾರ್ಪಣೆ ಮಾಡಲು ಸಿದ್ಧಳಿರುವೆನೆಂದೂ ತಿಳಿಸಿದಳು'' ಎಂದನು. ಅವಳನ್ನು ಹೇಗಾ ದರೂ ಪಡೆಯಬೇಕೆಂದು ರಾಜಪುತ್ರನಿಗೆ ಮನಸ್ಸಾಯಿತು. ಆದುದರಿಂದ ಇಬ್ಬರೂ ಸಂದರ್ಭ ಸಾಧಿಸತೊಡಗಿದರು.

ಆ ನಗರದಲ್ಲಿ ಹೆಸರಾದ ಮಾಲೆಗಾರ್ತಿಯೊಬ್ಬಳಿದ್ದಳು. ಅವಳು ದಿನಂಪ್ರತಿ ಹೂವಿನ ಮಾಲೆಯನ್ನು ಕಟ್ಟಿ ರಾಜಪುತ್ರಿಗೆ ಒಪ್ಪಿಸುತಿದ್ದಳು. ತಾರಕದಾಸನು ಇದನ್ನು ತಿಳಿದುಕೊಂಡು ಅವಳಿದ್ದಲ್ಲಿಗೆ ಬಂದು ಮೃದು ಮಧುರ ಮಾತುಗಳಿಂದಲೂ ದ್ರವ್ಯದಿಂದಲೂ ಅವಳನ್ನು ವಶಪಡಿಸಿಕೊಂಡನು. ತನಗೆ ಚಿತ್ರವಿಚಿತ್ರವಾಗಿ ಮಾಲೆಕಟ್ಟಲು ಬರುತ್ತದೆಂದೂ ನುಡಿದನು. ಅವಳು ಒಪ್ಪಿದುದರಿಂದ ತಾನೇ ಒಂದು ಮಾಲೆಯನ್ನು ಕಟ್ಟಿಕೊಟ್ಟನು. ಅದರಲ್ಲಿ ಜಾಣ್ಮೆಯಿಂದ ಒಂದು ಚೀಟಿಯನ್ನು ಬರೆದಿಟ್ಟನು. ಕಮಲಾವತಿಯು ಆ ಮಾಲೆಯನ್ನು ಧರಿಸಿದಾಗ ಆ ಚೀಟಿ ಅವಳ ಕಣ್ಣಿಗೆ ಬಿತ್ತು. ಅದರಲ್ಲಿ "ನೀನು ಮಾಡಿದ ಸಂಕೇತಗಳು ನನಗೆ ಅರ್ಥವಾಗಿವೆ. ನಿನ್ನನ್ನು ಕಾಣಲು ಆತುರ ನಾಗಿದ್ದೇನೆ. ನಿನ್ನ ಮಾಲೆಗಾರ್ತಿಯಲ್ಲಿ ಇದ್ದೇನೆ. ನೀನು ಯೋಗ್ಯ ಸಂಕೇತ ಮಾಡಿ ಕಳಿಸಿದಾಗ ಬರುತ್ತೇನೆ"ಎಂದು ಬರೆಯಲಾಗಿದ್ದಿತು. ರಾಜಪುತ್ರಿಯು ಅದನ್ನು ಗ್ರಹಿಸಿ, ಆ ಮಾಲೆಗಾರ್ತಿಯನ್ನು ಕರೆದು ತಡವಾಗಿ ಮಾಲೆ ತಂದು ದಕ್ಕಾಗಿ ಸಿಟ್ಟುಮಾಡಿ ಸುಣ್ಣದಿಂದ ಅವಳ ಬೆನ್ನಿನ ಮೇಲೆ ಗೆರೆ ಎಳೆದಳು.

ಅವಳು ಒಂದು ತಾರಕದಾಸನಿಗೆ ಅದನ್ನು ತೋರಿಸಲು "ಇದು ಶುಕ್ಲ ಪಕ್ಷ ಬರಬೇಡಿರಿ. ಕೃಷ್ಣ ಪಕ್ಷದಲ್ಲಿ ನಿನ್ನ ಆಶೆ ಕೈಗೂಡುತ್ತದೆ'' ಎಂದು ಅದರರ್ಥ ವೆಂದು ಅವನು ರಾಜಪುತ್ರನಿಗೆ ತಿಳಿಸಿದನು. ಮತ್ತೊಂದು ದಿನ ರಾಜಪುತ್ರಿಯು ಕುಂಕುಮದಿಂದ ಆ ಮಾಲೆಗಾರ್ತಿಯನ್ನು ಹೊಡೆದಳು. "ತಾನು ರಜಸ್ವಲೆಯಾಗಿದ್ದೇನೆ. ಈಗ ಬರಬೇಡ'' ಎಂದು ಹೇಳಿಕಳಿಸಿದ್ದಾಳೆಂದು ಅದಕ್ಕೆ ಅರ್ಥವೆಂದು ತಾರಕದಾಸನು ತಿಳಿಸಿದನು. ಮೂರನೇ ಸಲ ಅವಳು ಕಾಡಿಗೆ ಕೈಯಿಂದ ಮಾಲೆಗಾರ್ತಿಯ ಗಲ್ಲವನ್ನು ತೀಡಿದಳು. "ಕತ್ತಲೆಯಾದ ಮೇಲೆ ನನ್ನ ಕಿಟಕಿಯ ಬಳಿ ಬನ್ನಿ'' ಎಂದು ಅವಳು ಸೂಚಿಸಿದಳೆಂದು ತಾರಕದಾಸನು ನುಡಿದನು.

ಅದರಂತೆ ಅಂದು ರಾತ್ರಿ ವಜ್ರನು ತಾರಕದಾಸನೊಂದಿಗೆ ಅರಮನೆಯ ಗವಾಕ್ಷದ ಬಳಿ ತೆರಳಿದನು. ಅಷ್ಟು ಹೊತ್ತಿಗೆ ಸರಿಯಾಗಿ ಅವಳು ರೇಷ್ಮೆಯ ಒಂದು ಹಗ್ಗವನ್ನು ಮೇಲಿನಿಂದ ಕೆಳಗಿಳಿಸಿದಳು. ರಾಜಪುತ್ರನು ಅದನ್ನು ಹಿಡಿದುಕೊಂಡು ಮೇಲೇರಿ ಹೋದನು. ಕೋಣೆಯೊಳಗೆ ಅವನು ಇಳಿದ ಕೂಡಲೇ ಅವಳು ಆ ಹಗ್ಗವನ್ನು ಮೇಲಕ್ಕೆಳೆದು ಬಿಟ್ಟಳು. ಆ ರಾಜಪುತ್ರನನ್ನು ಸನ್ಮಾನಿಸಿ ಆದರಿಸಿ ಅವನೊಂದಿಗೆ ರಾತ್ರಿ ನಾನಾ ರತಿ ವಿಲಾಸಗಳಲ್ಲಿ ಮಗ್ನಳಾದಳು. ಬೆಳಗಾದ ಮೇಲೂ ಅವನನ್ನು ಹಿಂತಿರುಗಿ ಕಳಿಸಲು ಅವಳು ಇಷ್ಟಪಡಲಿಲ್ಲ. ಒಂದು ಪೆಟ್ಟಿಗೆಯಲ್ಲಿ ಅವನನ್ನು ಇರಿಸಿದಳು. ರಾತ್ರಿಯಾದ ಮೇಲೆ ಅದರ ಕೀಲಿ ತೆಗೆದು ಹೊರಗೆ ಕರೆಯುತಿದ್ದಳು. ಮತ್ತು ಇಡೀ ರಾತ್ರಿ ಅವರು ಸುಖದಿಂದ ಕಾಲಕಳೆಯುತಿದ್ದರು. ಆದರೆ ಈ ರಾಜಪುತ್ರನು ಚುರುಕು ಸ್ವಭಾವದವನಲ್ಲ. ಅವಳು ಮಾಡಿದ ಸಂಕೇತಗಳು ಅವನಿಗೆ ಅರ್ಥವಾಗುತ್ತಿರಲಿಲ್ಲ. ಆದುದರಿಂದ ಅವನೊಡನೆ ಬೇರೆ ಯಾರೋ ಇದ್ದಾರೆಂದು ಅವಳು ತಿಳಿದು ಕೇಳಿ ತಿಳಿದುಕೊಂಡಳು. ಆ ಮಂತ್ರಿ ಸುತನು ಹೊರಗಿದ್ದರೆ ತಾನು ಮಾಡಿದ ದುರಾಚಾರವು ಪರರಿಗೆ ತಿಳಿಯಬಹುದೆಂದು ರಾಜಪುತ್ರಿಯು ಸಂದೇಹಪಟ್ಟಳು. ಹೇಗಾದರೂ ಮಾಡಿ ಆ ಮಂತ್ರಿಸುತನನ್ನು ಕೊಲ್ಲಿಸಬೇಕೆಂದು ಅವಳು ಒಂದು ಉಪಾಯ ಹೂಡಿದಳು.

ಒಂದು ದಿನ ಅವಳು ನಾನಾ ಭಕ್ಷ್ಯ ಭೋಜ್ಯಗಳನ್ನು ಮಾಡಿಸಿದಳು.

ಅದರಲ್ಲಿ ಸ್ವಲ್ಪ ಅಂಶವನ್ನು ಆ ಮಂತ್ರಿಸುತನಿಗೆ ಕೊಟ್ಟು ಬರುವುದು ಒಳ್ಳೇದೆಂದು ರಾಜಪುತ್ರನಿಗೆ ತಿಳಿಸಿದಳು. ಅವನು ಮಾಡಿದ ಉಪಕಾರಕ್ಕೆ ಅಷ್ಟನ್ನಾದರೂ ಮಾಡಬೇಕೆಂಬ ಸದ್ಭಾವನೆಯಿಂದ ತಾನು ಕಳಿಸಿರುವು ದಾಗಿ ತಿಳಿಸಬೇಕೆಂದಳು. ಅದರಂತೆ ರಾಜಪುತ್ರನು ಹಗ್ಗದ ಸಹಾಯದಿಂದ ಇಳಿದು ಆ ಪಕ್ವಾನ್ನಗಳನ್ನು ಮಾಲೆಗಾರ್ತಿಯ ಮನೆಗೆ ತಂದು ತನ್ನ ಮಿತ್ರ ನಿಗೆ ಕೊಟ್ಟು ಅಷ್ಟರವರೆಗೆ ನಡೆದುದೆಲ್ಲವನ್ನೂ ತಿಳಿಸಿದನು. ಆದರೆ ತಾರಕ ದಾಸನಿಗೆ ಅವಳ ಇಂಗಿತದ ಬಗ್ಗೆ ಸಂಶಯ ಬಂದಿತು. ಆದುದರಿಂದ ಅವನು ಆ ಪಕ್ವಾನ್ನವನ್ನು ತಿನ್ನುವ ಮೊದಲು ಸ್ವಲ್ಪಾಂಶವನ್ನು ಅಲ್ಲಿದ್ದ ಒಂದು ನಾಯಿಗೆ ಹಾಕಿದನು. ಅದನ್ನು ತಿಂದಕೂಡಲೇ ಅದು ಪ್ರಾಣಬಿಟ್ಟಿತು. ಆಗ ಆ ಮಂತ್ರಿಸುತನು ರಾಜಪುತ್ರಿಯ ದುಷ್ಟವಿಚಾರವನ್ನು ತನ್ನ ಮಿತ್ರ ನಿಗೆ ವಿವರಿಸಿ "ಮಿತ್ರಾ, ನಾನು ಪಕ್ವಾನ್ನವನ್ನು ತಿಂದಕೂಡಲೇ ಮೃತನಾದೆ ನೆಂದು ಅವಳಿಗೆ ಹೇಳು. ನನ್ನನ್ನು ಒಂದೆಡೆ ಹುಗಿದು ಬಂದಿರುವೆನೆಂದೂ ನುಡಿ. ಇಲ್ಲದಿದ್ದರೆ ನನ್ನನ್ನು ಕೊಲ್ಲಿಸಲು ಅವಳು ಬೇರೆ ಉಪಾಯಗಳನ್ನು ಮಾಡದೇ ಇರಲಾರಳು" ಎಂದನು. ರಾಜಪುತ್ರನು ಹಿಂತೆರಳಿ ಕಮಲಾವತಿಗೆ ಅದನ್ನು ತಿಳಿಸಿ ಬಹಳ ದುಃಖಿತನಾದವನಂತೆ ಜೋಲುಮೋರೆ ಹಾಕಿಕೊಂ ಡನು. ಕಮಲಾವತಿಯು ಆ ವಾರ್ತೆ ಕೇಳಿ ಬಹಳ ಹರುಷಪಟ್ಟಳು. ಆ ಆನಂದದಲ್ಲಿ ರೇಶ್ಮೆಯ ಹಗ್ಗವನ್ನು ಮೇಲೆಳೆಯಲೂ ಮರೆತುಬಿಟ್ಟಳು. ಅವ ನೊಡನೆ ಮಂಚದಲ್ಲಿ ರತಿಕ್ರೀಡೆಯಲ್ಲಿ ಮಗ್ನಳಾದಳು.

ಆದರೆ ರಾತ್ರಿ ಪಹರೆಯವನು ಆ ರೇಶ್ಮೆಯ ಹಗ್ಗವನ್ನು ಕಂಡನು. ಯಾರೋ ಕಳ್ಳರು ರಾಜಪುತ್ರಿಯ ಕೋಣೆಗೆ ಪ್ರವೇಶಿಸಿರಬೇಕೆಂದು ನಂಬಿ ಆ ಹಗ್ಗವನ್ನೇರಿ ಬಂದನು ಕಳ್ಳರಲ್ಲ; ರಾಜಪುತ್ರಿಯು ಪರಪುರುಷನೊಡನೆ ಮಂಚದ ಮೇಲೆ ಮಲಗಿದುದು ಅವನಿಗೆ ಕಾಣಿಸಿತು. ಆಗ ಅವನು ಇನ್ನೂ ಕೆಲವು ಪಹರೆಯವರನ್ನು ಕರೆದುಕೊಂಡು ಬಂದು ಆ ಮಂಚಕ್ಕೆ ಹಗ್ಗಗ ಳನ್ನು ಬಿಗಿದು ಸದ್ದಿಲ್ಲದೆ ಅಟ್ಟದಿಂದ ಇಳಿಸಿ, ಅದನ್ನು ಹೊತ್ತುಕೊಂಡು ಹೋಗಿ ಊರ ಹೊರಗಿನ ದೇವಾಲಯದೊಳಗಿಟ್ಟು ಹೊರಗೆ ಕೀಲಿ ಹಾಕಿ ಪಹರೆ ಇಡಿಸಿದನು. ನಸುಕಿನಲ್ಲಿ ಕಮಲಾವತಿಗೆ ಎಚ್ಚರಿಕೆಯಾಯಿತು. ಆಗ ತಾನಿದ್ದ ಸ್ಥಳವನ್ನು ಕಂಡು ಇದೇನು ಕನಸೋ ಎಂದು ಗಾಬರಿಯಾ

ದಳು. ಆದರೆ ನಿಜಸ್ಥಿತಿ ತಿಳಿದ ಕೂಡಲೇ ಅವಳು ರಾಜಪುತ್ರನನ್ನು ಎಬ್ಬಿಸಿ ತನಗೆ ಬಂದಿರುವ ಪ್ರಾಣಾಪತ್ತನ್ನು ತಿಳಿಸಿದಳು. ಆಗ ರಾಜಪುತ್ರನು ತನ್ನ ಮಿತ್ರನ ಸಮಾಚಾರ ತಿಳಿಸಿ, ಮಾಲೆಗಾರ್ತಿಯಲ್ಲಿರುವ ತಾರಕದಾಸ ನಿಗೆ ಈ ಸುದ್ದಿಯನ್ನು ಮುಟ್ಟಿಸಿದರೆ ಹೇಗಾದರೂ ಅವನು ರಕ್ಷಿಸದೇ ಇರ ಲಾರನೆಂದು ನುಡಿದನು. ಆ ಕೂಡಲೇ ರಾಜಪುತ್ರಿಯು ದೇವಸ್ಥಾನದಲ್ಲೇ ಮನೆಮಾಡಿಕೊಂಡಿದ್ದ ಪೂಜಾರಿಯನ್ನು ಕರೆದು ತನ್ನ ಮೈಮೇಲಿನ ಚಿನ್ನಾ ಭರಣಗಳನ್ನೆಲ್ಲ ತೆಗೆದು ಅವನಿಗೆ ಕೊಟ್ಟು ಅವನನ್ನು ತನ್ನ ವಶಪಡಿಸಿಕೊಂ ಡಳು. ಆ ಮೇಲೆ ಅವನನ್ನು ಮಾಲೆಗಾರ್ತಿಯಿದ್ದಲ್ಲಿಗೆ ಕಳಿಸಿಕೊಟ್ಟಳು. "ನಿನ್ನ ಒಂದು ಹೋರಿಯು ರಾಜನ ತೋಟದೊಳಗೆ ಹೊಕ್ಕು ಹಾವಳಿ ಎಬ್ಬಿಸಿತು. ಸಿಪಾಯಿಗಳು ಅದನ್ನು ಬಂಧಿಸಿ ದೇವಾಲಯದಲ್ಲಿ ಕಟ್ಟಿಹಾಕಿ ದ್ದಾರೆ. ನೀನು ಬಂದು ಬಿಡಿಸಿಕೊಂಡು ಹೋಗು" ಎಂಬ ಗುಪ್ತ ಸಂದೇಶ ವನ್ನು ಆ ಪೂಜಾರಿಯು ಮುಟ್ಟಿಸಿದನು.

ಆ ಕೂಡಲೇ ತಾರಕದಾಸನು ಸ್ತ್ರೀವೇಷವನ್ನು ಧರಿಸಿ ಹರಿವಾಣದಲ್ಲಿ ಪೂಜಾ ಸಾಮಗ್ರಿಗಳನ್ನು ಹಿಡಿದುಕೊಂಡು ಬೆಳಕು ಹರಿಯುವ ಮೊದಲೇ ಆ ದೇವಾಲಯಕ್ಕೆ ಬಂದನು. ಆದರೆ ಪಹರೆಯವನು ಬಿಡಲಿಲ್ಲ. ಆಗ ಅವಳು "ಸಿಪಾಯಿಯೇ, ನಾನು ಮಕ್ಕಳಾಗಬೇಕೆಂದು ಒಂದು ವ್ರತವನ್ನು ಹಿಡಿದಿದ್ದೇನೆ. ಅದಕ್ಕಾಗಿ ದಿನಂಪ್ರತಿ ಸೂರ್ಯೋದಯದ ಮೊದಲು ಬಂದು ದೇವರನ್ನು ಅರ್ಚಿಸುತ್ತೇನೆ. ದೇವತಾಪೂಜೆ ಇಲ್ಲದೆ ಅನ್ನ ನೀರುಗಳನ್ನೂ ಮುಟ್ಟುವವಳಲ್ಲ. ಸ್ತ್ರೀಯರು, ಮಕ್ಕಳು, ದೇವರು ಇವರ ಮೇಲೆ ರಾಜರಿಗೆ ಬಹಳ ಭಕ್ತಿ ಇದೆ. ನೀನು ಹೀಗೆ ಮಾಡಿದುದು ಗೊತ್ತಾದರೆ ದುಷ್ಪರಿಣಾಮ ವಾದೀತು" ಎಂದನು. ಪಹರೆಯವನು ಹೆದರಿ ಒಳಗೆ ಬಿಟ್ಟನು. ಒಳಗೆ ಬಂದ ಕೂಡಲೇ ತಾರಕದಾಸನು ತನ್ನ ಸ್ತ್ರೀವೇಷವನ್ನು ತೆಗೆದಿಟ್ಟನು. ಗಂಟೆಬಾರಿಸಿ, ಪೂಜೆಮಾಡಿ ಕಮಲಾವತಿಯು ಅದೇ ಹರಿವಾಣವನ್ನು ಹಿಡಿ ದುಕೊಂಡು ಹೊರಟುಹೋದಳು. ರಾಜಪುತ್ರನೂ ತಾರಕದಾಸನೂ ಆ ಮಂಚ, ರಾಜೋಚಿತವಾದ ಬಟ್ಟೆಬರೆ, ಹಗ್ಗ ಮೊದಲಾದವುಗಳೆಲ್ಲ ಬೆಂಕಿ ಹಚ್ಚಿ ಅಗ್ನಿಷ್ಟಿಕೆ ಮಾಡಿದರು. ಅದೇ ಭಸ್ಮವನ್ನು ಕೈ ಮೈಗಳಿಗೆಲ್ಲ ಬಳಿದು ಕೊಂಡು ಸನ್ಯಾಸಿಗಳಂತೆ ಪದ್ಮಾಸನ ಹಾಕಿಕೊಂಡು ಕಣ್ಮುಚ್ಚಿ ಕುಳಿತರು.

ಇತ್ತ ಬೆಳಗಾದ ಕೂಡಲೇ ಸಿಪಾಯಿಯು ಮಹಾರಾಜನಿದ್ದಲ್ಲಿಗೆ ತೆರಳಿ ರಾತ್ರಿ ರಾಜಪುತ್ರಿಯು ಮಾಡಿದ್ದ ಅನುಚಿತ ವರ್ತನೆಯನ್ನು ಅರಿಕೆ ಮಾಡಿಕೊಂಡನು. ಅವಳನ್ನು ಆ ವಿಟಪುರುಷನೊಡನೆ ದೇವಾಲಯದಲ್ಲಿ ಬಂಧಿಸಿರುವದಾಗಿಯೂ ತಿಳಿಸಿದನು. ರಾಜನು ಕೋಪದಿಂದ ಆ ಸಿಪಾಯಿಯೊಡನೆ ದೇವಾಲಯಕ್ಕೆ ಹೊರಟುಬಂದನು. ಆದರೆ ಅಲ್ಲಿ ಇಬ್ಬರು ಸನ್ಯಾಸಿಗಳು ಮಾತ್ರ ಕುಳಿತಿದ್ದರು. ಆಗ ರಾಜನು ರೇಗಿ ಆ ಸಿಪಾಯಿಗೆ ದೇಹಾಂತ ಶಿಕ್ಷೆಯನ್ನು ವಿಧಿಸಿದನು. ದೇವಾಲಯದಿಂದ ವಜ್ರನೂ ತಾರಕದಾಸನೂ ಹೊರಟುಹೋದರು. ಆದರೆ ರಾಜಪುತ್ರಿಯ ಮೇಲಿನ ಮೋಹ ಮಾತ್ರ ಹೋಗಲಿಲ್ಲ. ಹೇಗಾದರೂ ಮಾಡಿ ಮತ್ತೆ ಅವಳೊಡನೆ ತನ್ನನ್ನು ಕೂಡಿಸಬೇಕೆಂದು ವಜ್ರನು ಮಿತ್ರನಿಗೆ ತಿಳಿಸಿದನು. ಆಗ ಅವನು ಯೋಚಿಸಿ ರಾಜಪುತ್ರನಿಗೆ ಸ್ತ್ರೀವೇಷವನ್ನು ಹಾಕಿ ಒಂದು ಸಂಧ್ಯಾಕಾಲದ ಹೊತ್ತು ರಾಜನಿದ್ದಲ್ಲಿಗೆ ಕರೆದುಕೊಂಡು ಬಂದನು. ರಾಜನನ್ನು ಕಂಡು "ಮಹಾರಾಜ, ಇವಳು ನನ್ನ ಪತ್ನಿ. ಊರಿಗೆ ಕರೆದುಕೊಂಡು ಹೋಗುತ್ತಿದ್ದೇನೆ. ಆದರೆ ರಸ್ತೆಯಲ್ಲಿ ಕಳ್ಳಕಾಕರ ಭಯವಿದೆ. ಆದುದರಿಂದ ಕೆಲವು ದಿವಸಗಳ ವರೆಗೆ ಇವಳಿಗೆ ಆಶ್ರಯ ಕೊಡಿರಿ ಆಮೇಲೆ ಬಂದು ಕರೆದುಕೊಂಡು ಹೋಗುತ್ತೇನೆ" ಎಂದನು. ರಾಜನು ನಂಬಿ ಅವಳನ್ನು ತನ್ನ ಮಗಳ ವಶಕ್ಕೆ ಒಪ್ಪಿಸಿದನು. ರಾಜಪುತ್ರಿಯು ಮತ್ತೆ ತನ್ನ ಪ್ರಿಯತಮನನ್ನು ಪಡೆದು ಹಗಲಿರುಳು ಮತ್ತಕಾಮಿನಿಯಾಗಿ ಸುಖದಿಂದ ಇರತೊಡಗಿದಳು.

ಹೀಗಿರಲು ವಿದೇಶಕ್ಕೆ ಸೈನ್ಯದೊಂದಿಗೆ ತೆರಳಿದ್ದ ಅವಳ ಪತಿಯು ಬಂದನು. ವಜ್ರನನ್ನೂ ಸ್ತ್ರೀವೇಷ ಹಾಕಿಕೊಂಡುದುದರಿಂದ ಪತ್ತೆಯಾಗುವಂತಿರಲಿಲ್ಲ. ಕಮಲಾವತಿಯು ತನ್ನ ಪತಿಯನ್ನು ಸ್ನೇಹದಿಂದಲೇ ಆದರಿಸಿದಳು. ರಾತ್ರಿ ಅವನೊಡನೇ ಕ್ರೀಡಾಸಕ್ತನಾದಳು. ಒಮ್ಮೆ ಅವಳ ಪತಿಯು ಸ್ತ್ರೀವೇಷದಲ್ಲಿರುವ ವಜ್ರನನ್ನು ಕಂಡು ಮೋಹಿತನಾದನು. ಅವಳು ಯಾರು, ಏನು ಎಂದು ಕೇಳಿ ತಿಳಿದುಕೊಂಡು ಹೇಗಾದರೂ ಮಾಡಿ ಅವಳನ್ನು ತನ್ನ ವಶಪಡಿಸಬೇಕೆಂದು ಕೇಳಿಕೊಂಡನು. ಆಗ ಕಮಲಾವತಿಯು "ಅವಳು ದುರ್ಲಭಳು. ನೀನೇ ರಾತ್ರಿ ಅವಳ ಕೋಣೆಗೆ ಹೋಗಿ ವಶಳಾದರೆ ನೋಡು" ಎಂದಳು ಇತ್ತ ಆ ವಜ್ರನು ಇದ್ದಲ್ಲಿಗೆ ಬಂದು ನಡೆದ

ವೃತ್ತಾಂತವನ್ನು ಹೇಳಿ ತನ್ನ ಪತಿಯು ಬಲಾತ್ಕರಿಸಲು ಬಂದಾಗ ಅವನ ಗುಪ್ತಾಂಗವನ್ನೇ ಕೊಯ್ದುಬಿಡು ಎಂದು ಹೇಳಿದಳು. ಇದನ್ನು ತಿಳಿಯದ ಕಮಲಾವತಿಯ ಪತಿಯು ರಾತ್ರಿ ವಜ್ರನಲ್ಲಿ ಮಲಗಿದ್ದ ಕೋಣೆಗೆ ತೆರಳಿ ಬಲಾತ್ಕಾರ ಮಾಡತೊಡಗಿದನು.ಆಗ ಅವಳು ರೇಗಿ ಅವನ ಗುಪ್ತಾಂಗವನ್ನು ಕೊಯ್ದುಬಿಟ್ಟಳು. ಇದರಿಂದ ಅವನು ದುಃಖಿತನಾಗಿ ಬೆಳಗಾದ ಮೇಲೆ ತನ್ನ ಮರ್ಯಾದೆ ಹೋಗುವುದೇ ನಿಶ್ಚಯವೆಂದು ಖಾತಿಗೊಂಡನು. ಮತ್ತು ಕೂಡಲೇ ನದೀ ದಂಡೆಗೆ ತೆರಳಿ ಕಲ್ಲು ಕಟ್ಟಿಕೊಂಡು ಹಾರಿ ಪ್ರಾಣತೊರೆದನು. ವಜ್ರನು ಬೆಳಗಾಗುವುದರೊಳಗೆ ಸ್ತ್ರೀ ವೇಶವನ್ನು ಬಿಚ್ಚಿ ಓಡಿ ಹೋದನು. ಪತಿಯು ರಾತ್ರಿ ಅರಮನೆಗೆ ಬಂದಿದ್ದನೆಂದೂ ಬ್ರಾಹ್ಮಣನ ಪತ್ನಿಯೊಂದಿಗೆ ಓಡಿ ಹೋದನೆಂದೂ ಕಮಲಾವತಿಯು ಸುದ್ದಿ ಹಬ್ಬಿಸಿದಳು.

ಕೆಲವು ದಿವಸಗಳ ಮೇಲೆ ತಾರಕದಾಸನು ರಾಜನ ಆ ಸ್ಥಾನಕ್ಕೆ ಬಂದು ತನ್ನ ಪತ್ನಿಯನ್ನು ಕಳಿಸಿಕೊಡಬೇಕೆಂದನು. ರಾಜನು ನಡೆದ ವೃತ್ತಾಂತವನ್ನು ಹೇಳಲು ಬ್ರಾಹ್ಮಣನು ಸಿಟ್ಟಾಗಿ “ಮಹಾರಾಜ, ನನ್ನ ಪತ್ನಿಯನ್ನು ಅವನು ಓಡಿಸಿಕೊಂಡು ಹೋದ ಮೇಲೆ ಅವನ ಪತ್ನಿಯನ್ನು ನನಗೆ ಒಪ್ಪಿಸುವುದೊಂದೇ ಯೋಗ್ಯ ಮಾರ್ಗ” ಎಂದನು. ಅರಸನು ಕಮಲಾವತಿಯ ಅಭಿಪ್ರಾಯ ಕೇಳಲು ತಾನು ತೆರಳಲು ಸಿದ್ಧವಿರುವುದಾಗಿ ಅವಳು ಹೇಳಿದಳು. ಕೂಡಲೇ ತಾರಕದಾಸನು ಅವಳನ್ನು ಕರೆದುಕೊಂಡು ಬಂದು ಮಾಲೆಗಾರ್ತಿಯಲ್ಲಿದ್ದ ತನ್ನ ಮಿತ್ರನಿಗೊಪ್ಪಿಸಿದನು. ಆ ಮೇಲೆ ಅಲ್ಲಿಂದ ಅವರು ತಮ್ಮ ರಾಜ್ಯದ ಕಡೆಗೆ ಹೊರಟರು.

ಮೋಹಿನೀ, ಕಮಲಾವತಿಯ ಸಾಹಸವನ್ನು ಕಂಡೆಯಾ? ಅವಳ ದುರ್ಬುದ್ಧಿಯನ್ನು ಅರಿತೆಯಾ? ಕಾಮಪೀಡಿತಳಾದ ಅವಳು ತನ್ನ ಪತಿಯನ್ನು ಕೊಲ್ಲಿಸಿದಳು. ಆದುದರಿಂದ ನೀನೂ ಈ ದುರ್ಬುದ್ಧಿಗೆ ಒಳಗಾಗಬೇಡ. ಕಾಮವಿಲಾಸಿನಿ ಎಂಬೊಬ್ಬಳು ತಾನು ಬಂಧನದಲ್ಲಿದ್ದರೂ ಅನ್ಯ ಪುರುಷರ ಮೇಲೆ ಆಸಕ್ತರಾಗದೆ ಪತಿಯೊಡನೆ ರತಿಸುಖವನ್ನು ಪಡೆದಳು. ನೀನೂ ಹಾಗೆ ಮಾಡಬಹುದಾಗಿದೆ ಎಂದನು. ಆಗ ಮೋಹಿನಿಯು ಕಾಮವಿಲಾಸಿನಿಯ ಕಥೆಯನ್ನು ಕೇಳಲು ಆತುರಪಟ್ಟಳು. ಆಗ ಮೋಹನದಾಸನು ಹೇಳಲಾರಂಭಿಸಿದನು.

## ೨೬. ಕಾಮವಿಲಾಸಿನಿಯ ಕಥೆ

ಪ್ರಾಚೀನ ಕಾಲದಲ್ಲಿ ಕಾಮಾಪುರದಲ್ಲಿ ಚಂದ್ರಚೂಡ ಎಂಬೊಬ್ಬ ಅರಸನಿದ್ದನು. ಅವನು ಇನ್ನೂ ತರುಣ. ಒಂದು ದಿನ ಅವನು ಒಬ್ಬನೇ ರಸ್ತೆಯಲ್ಲಿ ತಿರುಗುತ್ತಿದ್ದನು. ಆಗ ಒಂದು ಮನೆಯ ಉಪ್ಪರಿಗೆಯ ಮೇಲೆ ತರುಣಿಯೊಬ್ಬಳು ಕುಳಿತಿದ್ದಳು. ಅವಳ ರೂಪಾತಿಶಯಕ್ಕೆ ಮೋಹಿತನಾದ ರಾಜನು ಅವಳನ್ನು ನೋಡುತ್ತ ನಿಂತುಬಿಟ್ಟನು. ಆಗ ಆ ತರುಣಿಯು ತನ್ನ ದಾಸಿಯನ್ನು ಕರೆದು ರಾಜನಿಗೆ ಕೇಳಿಸುವ ಹಾಗೆ "ಈ ರಾಜನಿಗೆ ಏನೇನೂ ಬುದ್ಧಿ ಇಲ್ಲ. ಒಬ್ಬನೇ ತಿರುಗುತ್ತಿದ್ದಾನಲ್ಲ. ಅಂಗರಕ್ಷಕರು ಯಾರೂ ಇಲ್ಲ. ಯಾರಾದರೂ ವೈರಿಗಳು ಬಂದು ತಿವಿದರೆ ಏನು ಗತಿ? ಇವನನ್ನು ಮದುವೆಯಾಗಿ ಪುತ್ರಸಂತಾನ ಪಡೆದು ಅವನ ಮೂಲಕ ಇವನಿಗೆ ಬುದ್ಧಿ ಕಲಿಸಬೇಕು; ನೋಡು'' ಎಂದಳು.

ಈ ಮಾತುಗಳನ್ನು ಕೇಳಿದ ರಾಜನು ಅರಮನೆಗೆ ಬಂದು ಮಂತ್ರಿಯನ್ನು ಕಂಡನು. ಆ ವರ್ತಕನ ಮಗಳೊಂದಿಗೆ ವಿವಾಹವಾಗಲು ಬಯಸುತ್ತೇನೆಂದು ತಿಳಿಸಿ ಮಂತ್ರಿಯನ್ನು ಕಳಿಸಿಕೊಟ್ಟನು. ವರ್ತಕನು ಒಪ್ಪಿದುದರಿಂದ ಬೇಗನೇ ಮದುವೆಯೂ ಆಯಿತು. ಮದುವೆಯಾದ ಕೂಡಲೇ ರಾಜನು ಅವಳನ್ನು ರಾಣಿಯಂತೆ ನಡೆಸಿಕೊಳ್ಳಲಿಲ್ಲ. ಅವಳೊಡನೆ ಸಂಭೋಗ ಸುಖವನ್ನು ಅನುಭವಿಸಲಿಲ್ಲ. ಅವಳನ್ನು ಒಂದು ಮನೆಯಲ್ಲಿ ಬಂಧಿಸಿಟ್ಟನು ಮತ್ತು ಹೊರಗೆ ಸಿಪಾಯಿಗಳನ್ನು ನಿಲ್ಲಿಸಿದನು. "ನೀನು ಮದುವೆ ಆಗುವ ಮೊದಲು ಆಡಿದ ನುಡಿಗಳು ನಿನಗೆ ನೆನಪಿವೆಯೋ ಹೇಗೆ? ನಿನ್ನ ಮಗನ ಮೂಲಕ ನನಗೆ ಬುದ್ಧಿ ಕಲಿಸು" ಎಂದು ಹೇಳಿದನು. ಆಗ ಆ ಕಾಮವಿಲಾಸಿನಿಯು ಬಹಳ ದುಃಖಿತಳಾದಳು. ರಾಜನನ್ನು ಮದುವೆಯಾಗುವದಕ್ಕಾಗಿ ತಾನು ಆ ಮಾತುಗಳನ್ನಾಡಿದೆ. ಆದರೆ ರಾಜನು ಈಗ ಅದರ ಸೇಡು ತೀರಿಸಿಕೊಳ್ಳುತ್ತಿದ್ದಾನಲ್ಲ! ಎಂದವಳು ದುಃಖಿಸಿದಳು.

ಕೆಲವು ದಿವಸಗಳಾದ ಮೇಲೆ ಅವಳ ಬಂಧುವರ್ಗದವರೊಬ್ಬರು ಅವಳನ್ನು ಕಾಣಲು ಬಂದರು. ಆಗ ಅವಳು ತನ್ನ ಕಣ್ಣಿನ ಕಾಡಿಗೆಯನ್ನು

ಒಂದು ಕಡ್ಡಿಗೆ ಹಚ್ಚಿ ತಂದೆಗೊಂದು ಪತ್ರ ಬರೆದು ಗುಪ್ತವಾಗಿ ಕೊಟ್ಟಳು. ಹೇಗಾದರೂ ಮಾಡಿ ಮನೆಯಿಂದ ಈ ಬಂದೀಖಾನೆ ವರೆಗೆ ಒಂದು ನೆಲ ಮಾಳಿಗೆಯನ್ನು ಮಾಡಿಸಬೇಕೆಂದು ಆ ಪತ್ರದಲ್ಲಿ ಬರೆದಿದ್ದಳು. ಅದನ್ನು ಓದಿದ ಅವಳ ತಂದೆಯು ದೂರದೇಶದಿಂದ ಅಂತಹ ತಜ್ಞನೊಬ್ಬನನ್ನು ಕರೆಸಿ ನೆಲಮಾಳಿಗೆಯನ್ನು ತೋಡಿಸಿದನು. ಕಾಮವಿಲಾಸಿನಿಯು ತನಗೆ ಇಷ್ಟ ಬಂದಾಗ ಆ ನೆಲಮಾಳಿಗೆ ಮೂಲಕ ತಂದೆಯ ಮನೆಗೆ ಹೋಗುತ್ತಿದ್ದಳು. ಸ್ವಲ್ಪಕಾಲ ದಾಟಿದ ಮೇಲೆ ಅವಳು ತನ್ನ ವೇಷವನ್ನು ಬಹುಮಟ್ಟಿಗೆ ಬದ ಲಾಯಿಸಿ ದಾಸಿಯೊಂದಿಗೆ ದೇವಾಲಯಕ್ಕೆ ಹೋದಳು. ಅದೇ ದಿನ ರಾಜನೂ ಅಲ್ಲಿಗೆ ಬರುವವನಿದ್ದನು. ಅದನ್ನು ತಿಳಿದು ಕಾಮವಿಲಾಸಿನಿಯು ತನ್ನ ಅಂಗಾಂಗ ಸೌಂದರ್ಯವು ಕಾಣಿಸುವಂತೆಯೂ ಅವನನ್ನು ಮೋಹ ಗೊಳಿಸುವಂತೆಯೂ ವರ್ತಿಸಿದಳು. ಅವಳ ಈ ಪ್ರೇಮಚೇಷ್ಟೆಯನ್ನೆಲ್ಲ ಕಂಡು ತುಂಬಾ ಮೋಹಿತನಾದನು. ರಾತ್ರಿ ಬರುವೆನೆಂದು ನೇತ್ರಸಂಕೇತ ಮಾಡಿ ಹೊರಟುಹೋದನು ಮತ್ತು ರಾತ್ರಿ ವೇಷಪಲ್ಲಟ ಮಾಡಿಕೊಂಡು ಬಂದು ಅವಳೊಡನೆ ರಮಿಸಿ ಉಂಗುರವನ್ನು ಕೊಟ್ಟನು. ಕರ್ಮಧರ್ಮ ಸಂಯೋಗದಿಂದ ಕಾಮವಿಲಾಸಿನಿಗೆ ಅದೇ ದಿನ ಗರ್ಭವು ನಿಂತಿತು. ಪ್ರಸವ ಕಾಲ ಬರಲು ಅವಳು ಗಂಡು ಮಗುವನ್ನು ಹಡೆದಳು. ಕಾಮವಿಲಾಸಿನಿಯ ತಂದೆಯ ಮನೆಯಲ್ಲೇ ಅವನು ದೊಡ್ಡವನಾದನು. ವಿದ್ಯಾಬುದ್ಧಿಯನ್ನು ಕಲಿತನು. ದೊಡ್ಡವನಾದ ಬಳಿಕ ತಾಯಿ ಅವನಿಗೆ ತನ್ನ ಕಥೆಯೆಲ್ಲವನ್ನೂ ಹೇಳಿದಳು.

ಆಮೇಲೆ ಆ ರಾಜಪುತ್ರನು ಉತ್ತಮವಾದ ವೇಷಭೂಷಣಗಳನ್ನು ತೊಟ್ಟು ನಗರದಲ್ಲಿರುವ ದೊಡ್ಡ ವ್ಯಾಪಾರಸ್ಥನ ಅಂಗಡಿಗೆ ಹೋದನು. ಅವನ ದಿವ್ಯ ರೂಪ, ಅಮೌಲ್ಯ ಬಟ್ಟೆಬರೆ ಕಂಡೇ ಆ ವರ್ತಕನು ವಿಸ್ಮಿತನಾ ದನು. ತಾನು ಪರದೇಶದ ವರ್ತಕನೆಂದೂ ರಾಜನಲ್ಲಿ ತೆರಳಬೇಕೆಂದೂ ಅವನು ಹೇಳಿ ಕೆಲವು ವಸ್ತುಗಳನ್ನು ತೋರಿಸಿ ಅವನಿಂದ ಅಪಾರ ಹಣ ವನ್ನು ಮುಂಗಡವಾಗಿ ಪಡೆದುಕೊಂಡನು. ಅದರಂತೆಯೇ ಮತ್ತೊಬ್ಬ ವರ್ತಕನನ್ನೂ ವಂಚಿಸಿ ರಾತ್ರಿ ಮರಳಿದನು. ಆ ವರ್ತಕರು ರಾಜನಿಗೆ ದೂರುಕೊಟ್ಟರು. ಕಳ್ಳ ವ್ಯಾಪಾರಿಯನ್ನು ಹಿಡಿಯಲು ಅಜ್ಞಾಪಿಸಲಾ

ಯಿತು. ಕೊತವಾಲನು ನಗರದ ಬಾಗಿಲುಗಳನ್ನು ಮುಚ್ಚಿ ಅಲ್ಲಲ್ಲಿ ಸಿಪಾಯಿಗಳನ್ನು ನಿಲ್ಲಿಸಿದನು. ಇದನ್ನು ರಾಜಪುತ್ರನು ತಿಳಿದು ಕೊತವಾಲನ ಇತಿಹಾಸವನ್ನೆಲ್ಲ ಕೇಳಿ ತಿಳಿದುಕೊಂಡನು. ಆ ಕೊತವಾಲನ ಮಗನು ಪರದೇಶಕ್ಕೆ ಹೋಗಿದ್ದನು. ಅದನ್ನು ರಾಜಪುತ್ರನು ಅರಿತು ರಾತ್ರಿ ಕುದುರೆಯನ್ನೇರಿಕೊಂಡು ಬಂದನು. ಸಿಪಾಯಿಗಳು ತಡೆಯಲು ತಾನು ಕೊತವಾಲನ ಮಗನೆಂದು ಹೇಳಿ ಅವನ ಹೆಸರನ್ನು ಹೇಳಿದನು. ಅವರು ಹೋಗಗೊಟ್ಟರು. ಕೊತವಾಲನ ಮನೆಗೆ ಬಂದಾಗ ತಾಯಿಯೂ ಮಗನೆಂದೇ ಭ್ರಮಿಸಿ ಅವನಿಗೆ ಊಟ ಉಪಚಾರ ಮಾಡಿದಳು. ರಾತ್ರಿ ಸೊಸೆಯನ್ನು ಅವನ ಕೋಣೆಗೆ ಕಳಿಸಿಕೊಟ್ಟಳು. ರಾಜಪುತ್ರನು ತಾನು ತಂದಿದ್ದ ವೀಳ್ಯವನ್ನು ಅವಳಿಗೆ ತಿನ್ನಲು ಕೊಟ್ಟನು. ಅದನ್ನು ತಿಂದಕೂಡಲೇ ಅವಳು ಗುಂಗಿನಿಂದ ಮಲಗಿಕೊಂಡಳು. ಆಗ ಅವನು ಅವಳ ಚಿನ್ನಾಭರಣವನ್ನೆಲ್ಲ ತೆಗೆದುಕೊಂಡು ಒಯ್ದನು. ಅವಳಿಗೆ ಎಚ್ಚರವಾದ ಮೇಲೆ ಎಲ್ಲ ಸಂಗತಿಯೂ ತಿಳಿಯಿತು. ಪುನಃ ಆ ಮೋಸಗಾರನ ಬಗ್ಗೆ ದರ್ಬಾರಿಗೆ ದೂರು ಹೋಯಿತು.

ಆ ದಿನ ಮಂತ್ರಿಯೇ ಆ ಠಕ್ಕನನ್ನು ಹಿಡಿಯಲು ನಗರದಲ್ಲಿ ಅತ್ತಿತ್ತ ಸಂಚರಿಸತೊಡಗಿದನು. ಇದು ರಾಜಪುತ್ರನಿಗೆ ತಿಳಿಯಲು ಅವನು ಸುಂದರ ಸ್ತ್ರೀಯ ವೇಷವನ್ನು ಧರಿಸಿಕೊಂಡು ಆ ಮಂತ್ರಿ ಇದ್ದ ಸಿಪಾಯಿ ಠಾಣೆಯ ಬಳಿ ಬಂದನು. ಸಿಪಾಯಿಗಳು ಅವಳನ್ನು ನಿಲ್ಲಿಸಿ ಮಂತ್ರಿಯಿದ್ದಲ್ಲಿಗೆ ಕರೆದುಕೊಂಡು ಹೋಗಿ ಅವನ ಮುಂದೆ ನಿಲ್ಲಿಸಿದರು. "ನಾನು ವರ್ತಕನ ಮಗಳು. ನನ್ನ ತಾಯಿ ಪ್ರಸವಿಸಿರುವಳೆಂದು ದಾಸಿ ಬಂದು ಹೇಳಿರುವದರಿಂದ ತಾಯಿಯನ್ನು ನೋಡಲು ಹೋಗುತಿದ್ದೇನೆ" ಎಂದಳು. ಮಂತ್ರಿಯು ಅದನ್ನು ನಂಬಿದನು. ಅವಳ ರೂಪ ಲಾವಣ್ಯಕ್ಕೆ ಮನಸೋತ ಮಂತ್ರಿಯು ಅವಳೊಡನೆ ವಿನೋದ ಮಾತುಕತೆ ಆಡತೊಡಗಿದನು. ಅಲ್ಲಿರುವ ಕೈಕೋಳಗಳನ್ನು ಆ ಸ್ತ್ರೀಯು ಅದೇನೆಂದು ಕೇಳಲು "ಕಳ್ಳರ ಕೈಗೆ ತೊಡಿಸುವ ಬೇಡಿ" ಎಂದು ಮಂತ್ರಿಯು ಉತ್ತರವಿತ್ತನು. "ನನ್ನ ಕೈಗೆ ತೊಡಿಸಿರಿ" ಎಂದವಳು ಒತ್ತಾಯ ಮಾಡಿದಳು. "ಬೇಡ. ನನ್ನ ಕೈಗೇ ಹಾಕಿ ತೋರಿಸುತ್ತೇನೆ" ಎಂದು ಮಂತ್ರಿ ಹೇಳಿದನು. ಆ ಕೂಡಲೇ ಆ ಠಕ್ಕ

ಸ್ತ್ರೀಯು ಕೀಲಿ ಜಡಿದು ಒಂದು ನೆವ ಹೇಳಿ ಹೊರಗೆ ಬಂದು ಅಲ್ಲಿಂದ ಮಾಯವಾದಳು.

ಕಳ್ಳನನ್ನು ಹಿಡಿದು ಕೊಟ್ಟವರಿಗೆ ಅಪಾರ ದ್ರವ್ಯವನ್ನು ಕೊಡುವುದಾಗಿ ರಾಜನು ಡಂಗುರ ಸಾರಿದುದನ್ನು ಕೇಳಿ ರತಿಮಂಜರಿ ಎಂಬ ವೇಶ್ಯೆಯು ತಾನು ಹಿಡಿದುಕೊಡುವುದಾಗಿ ನುಡಿದಳು. ರಾಜಪುತ್ರನಿಗೆ ಇದು ತಿಳಿದ ಕೂಡಲೇ ಅವನು ಮತ್ತೆ ಸ್ತ್ರೀ ವೇಷ ಧರಿಸಿ ಮಧ್ಯರಾತ್ರಿ ಕಾಲಕ್ಕೆ ಆ ರತಿಮಂಜರಿಯ ಮನೆಗೆ ತೆರಳಿದನು. "ನಿನ್ನ ಅಕ್ಕನು ಗುಡುಗುಡಿ ಸೇದುತಿದ್ದಾಗ ಮೂರ್ಛೆಹೋದಳು. ಆಗ ಅವಳ ವಿಟನು ಅವಳ ಸಂಪತ್ತನ್ನು ಅಪಹರಿಸಿಕೊಂಡು ಹೋದನು. ಅವಳ ದಾಸಿ ನನ್ನನ್ನು ಕಳಿಸಿದಳು" ಎಂದಳು. ಅದನ್ನು ಕೇಳಿ ರತಿ ಮಂಜರಿಯು ಅಕ್ಕನ ಮನೆಗೆ ಹೊರಟಳು. ಅರ್ಧ ದಾರಿಗೆ ಬಂದ ಕೂಡಲೇ ಆ ಕಪಟ ಸ್ತ್ರೀಯು ನಾನು ವೈದ್ಯನನ್ನು ಕರೆದುಕೊಂಡು ಬರುತ್ತೇನೆಂದು ರತಿಮಂಜರಿಗೆ ಹೇಳಿ ಬೇರೊಂದು ದಾರಿಯಿಂದ ರತಿಮಂಜರಿಯ ಮನೆಗೇ ಬಂದನು. "ರತಿಮಂಜರಿಯ ಎಲ್ಲ ಚಿನ್ನಾಭರಣ ಹಾಗೂ ಪೀತಾಂಬರ ಸೀರೆ ಹಿಡಿದುಕೊಂಡು ಅವಳ ದಾಸಿ ರೂಪವತಿ ನನ್ನೊಂದಿಗೆ ಬರುವಂತೆ ರತಿಮಂಜರಿ ಹೇಳಿದಳು. ಏಕೆಂದರೆ ಅವಳು ರಾಜನ ದರ್ಬಾರಿಗೆ ಹೋಗಬೇಕಾದ ಪ್ರಸಂಗವೂ ಇದೆ'' ಎಂದಳು. ಇದನ್ನು ಕೇಳಿ ರತಿಮಂಜರಿಯ ದಾಸಿ ರೂಪವತಿಯು ಎಲ್ಲವನ್ನೂ ಹಿಡಿದುಕೊಂಡು ಹೊರಟಳು. ದಾರಿಯಲ್ಲಿ ಸ್ತ್ರೀವೇಷಧಾರಿಯಾದ ರಾಜಪುತ್ರನು ಅವೆಲ್ಲವನ್ನೂ ತಾನು ತೆಗೆದುಕೊಂಡು ಬೇರೆ ದಾರಿ ಹಿಡಿದನು. ರತಿಮಂಜರಿಯು ಅಕ್ಕನ ಮನೆಗೆ ತೆರಳಿದಾಗ ಅವಳು ನಗುತ್ತಲೇ ಇದ್ದಳು. ಗಾಬರಿಯಿಂದ ಮನೆಗೆ ಹಿಂತಿರುಗಿದಾಗ ಮನೆ ಬರಿದಾಗಿತ್ತು. ಇದು ಆ ಕಳ್ಳನ ಕಾರಸ್ಥಾನವೆಂದೇ ಅವಳಿಗೆ ತಿಳಿದುದರಿಂದ ಅವಳೂ ರಾಜನಿಗೆ ದೂರು ಕಳಿಸಿ ಕೊಟ್ಟಳು.

ಆ ಮೇಲೆ ರಾಜನೇ ಒಂದು ದಿನ ಆ ಠಕ್ಕನನ್ನು ಹಿಡಿಯಲು ಹೊರಟನು. ರಾಜಪುತ್ರನು ಅದನ್ನರಿತು ಕೆಲವು ಕುಂಬಳಕಾಯಿಯ ಬುರುಡೆಗಳನ್ನು ತಂದು ಅವುಗಳಿಗೆ ಸುಣ್ಣ ಹಚ್ಚಿದನು. ಆ ಮೇಲೆ ಅಗಸನ ವೇಷ ಹಾಕಿಕೊಂಡು ಬಟ್ಟೆಗಳ ಗಂಟುಗಳನ್ನು ಹೊತ್ತುಕೊಂಡು ಊರಿನ ಕೆರೆಗೆ

ಹೋದನು. ಕುಂಬಳಕಾಯಿಯ ಬುರುಡೆಗಳನ್ನು ನೀರಿನ ಮೇಲೆ ಚೆಲ್ಲಿದನು. ಮತ್ತೆ ಬಟ್ಟೆಗಳನ್ನು ಒಗೆಯುತೊಡಗಿದನು. ರಾತ್ರಿಯಾದರೂ ಅವನ ಕೆಲಸ ಮುಗಿಯಲಿಲ್ಲ. ಅವನ ಹೊರತು ಮತ್ತಾರೂ ಇರಲಿಲ್ಲ. ಬಟ್ಟೆ ಒಗೆವ ಸಪ್ಪಳ ವನ್ನು ಕೇಳಿ ರಾಜನೇ ಅಲ್ಲಿಗೆ ಬಂದನು. ಮತ್ತು ಈ ದಾರಿಯಿಂದ ಯಾರಾ ದರೂ ಹೋದರೇನು?" ಎಂದು ಕೇಳಿದನು ಆಗ ಆ ಠಕ್ಕಸೇನನು "ಮಹಾ ರಾಜ, ನೀವು ಬರುವ ಕೆಲವು ಕ್ಷಣಗಳ ಮೊದಲು ಯಾರೋ ಒಬ್ಬನು ಈ ನೀರಿನಲ್ಲಿ ಧುಮುಕಿ ಈಸುತ್ತ ಅವಸರದಿಂದ ಆಚೆದಂಡೆಯ ಕಡೆ ಹೋಗಲೆತ್ನಿ ಸಿದನು" ಎಂದನು. ಅರಸನು ನೀರಿನ ಕಡೆ ನೋಡಲು ಅದರ ಮಧ್ಯೆ ತೇಲು ತ್ತಿದ್ದ ಕುಂಬಳಕಾಯಿ ಬುರುಡೆಗಳು ಮನುಷ್ಯರ ತಲೆಗಳಂತೆ ಅವನಿಗೆ ಕಾಣಿ ಸಿದುವು. ಆಗ ರಾಜನು ತನ್ನ ವೇಷಭೂಷಣಗಳನ್ನು ತೆಗೆದಿಟ್ಟು ನೀರಿಗೆ ಧುಮುಕಿ ಈಸತೊಡಗಿದನು ಆ ಕೂಡಲೇ ಠಕ್ಕಸೇನನು ಅರಸನ ಬಟ್ಟೆಗಳ ನ್ನೆಲ್ಲ ಹಿಡಿದುಕೊಂಡು ಅಲ್ಲಿಂದ ಕಾಲಿಗೆ ಬುದ್ಧಿ ಹೇಳಿದನು. ನೀರಿನಲ್ಲಿ ಈಸುತ್ತ ಈಸುತ್ತ ರಾಜನು ಕುಂಬಳಕಾಯಿ ಬುರುಡೆಗಳನ್ನು ಕಂಡು ವ್ಯಸನ ಪಟ್ಟು ಹಿಂತಿರುಗಿದನು. ಆದರೆ ಅವನ ಬಟ್ಟೆಗಳು ಅಲ್ಲಿರಲಿಲ್ಲ. ಇದು ಠಕ್ಕ ಸೇನನ ಮೋಸವೆಂದೇ ಅವನು ಬಗೆದು ಮರಳಿದನು. ಸಿಪಾಯಿಗಳು ಅವ ನನ್ನೇ ಥಳಿಸಿದರು. ಬೆಳಗಾದ ಮೇಲೆ ಅವನೇ ರಾಜನೆಂದು ಪರಿತಾಪ ಪಟ್ಟರು.

ಠಕ್ಕಸೇನನ ಬುದ್ಧಿ ಚಾತುರ್ಯವನ್ನು ಕಂಡು ಅರಸನು ಬೆಕ್ಕಸಬೆರಗಾ ದನು. "ಅವನೇ ಅರಮನೆಗೆ ಬಂದು ಭೆಟ್ಟಿಯಾದರೆ ಅವನಿಗೆ ಉಡುಗೊರೆ ಕೊಡುವೆ'' ಎಂದು ಡಂಗುರ ಹೊಡೆಸಿದನು. ಅದನ್ನು ಕೇಳಿ ಠಕ್ಕಸೇನನು ಅರಸನ ಬಟ್ಟೆಗಳನ್ನು ತಾನು ಅಪಹರಿಸಿದ್ದ ಎಲ್ಲ ಚಿನ್ನಾಭರಣ ಮತ್ತು ದ್ರವ್ಯಗಳನ್ನು ಹಿಡಿದುಕೊಂಡು ರಾಜ ದರ್ಬಾರಿಗೆ ತೆರಳಿದನು. ರಾಜನಿಗೆ ಶಿರಸಾವಂದಿಸಿ ಅವುಗಳನ್ನೇ ಅರ್ಪಿಸಿದನು. ರಾಜನು ಮೆಚ್ಚಿ "ನೀವು ಯಾರು? ನಿಮ್ಮ ಹೆಸರೇನು? ನಿಮ್ಮ ಊರು ಯಾವುದು?'' ಎಂದು ಕೇಳಿದನು. ಆಗ ಆ ಠಕ್ಕಸೇನನು "ಮಹಾರಾಜ, ನಾನು ತಮ್ಮ ಸುಪುತ್ರನು. ಕಾಮವಿಲಾ ಸಿಯ ಮಗನು'' ಎಂದು ನುಡಿದನು. ಆ ಮಾತುಗಳನ್ನು ಕೇಳಿ ರಾಜನಿಗೆ ವಿಪರೀತ ಕೋಪವು ಬಂತು ಕೂಡಲೇ ಅವನು ಕಾಮವಿಲಾಸಿನಿಯನ್ನು

ಬಂಧಿಸಿಟ್ಟಿದ್ದ ಮನೆಗೆ ತೆರಳಿ ಅವಳ ದುರಾಚಾರವನ್ನು ಖಂಡಿಸಿ ಅವಳ ಶಿರ ಛೇದನ ಮಾಡುವುದಾಗಿ ಗರ್ಜಿಸಿದನು. ಆಗ ಕಾಮವಿಲಾಸಿನಿಯು ತಾನು ತೋಡಿಸಿದ್ದ ಸುರಂಗ ಮಾರ್ಗದ ಕಥೆ, ದೇವಾಲಯದಲ್ಲಿ ರಾಜನೊಡನೆ ನಡೆಸಿದ್ದ ರತಿಕ್ರೀಡೆ ಮೊದಲಾದವುಗಳನ್ನು ಹೇಳಿ ಆ ರಾಜನಿಗೇ ಅವನು ಹುಟ್ಟಿರುವುದಾಗಿ ನುಡಿದಳು. ಆಗ ರಾಜನು ಅವಳ ಧೈರ್ಯ, ಮನೋಬಲ, ಚಾತುರ್ಯಗಳಿಗೆ ಮೆಚ್ಚಿ ಅವಳ ಬಂಧನ ಬಿಡಿಸಿ ತನ್ನ ರಮನೆಗೆ ಕರೆದುಕೊಂಡು ಹೋದನು.

"ಮೋಹಿನೀ, ಆ ಕಾಮವಿಲಾಸಿನಿಯಂತೆ ನೀನೂ ನಿನ್ನ ಪತಿಯನ್ನು ಒಲಿಸಿಕೊಂಡು ಸುಖದಿಂದ ಇರು. ಈ ಸನ್ಮಾರ್ಗವನ್ನು ತೊರೆದು ಅನ್ಯ ಮಾರ್ಗ ಹಿಡಿದು ಕೆಟ್ಟು ಹೋಗಬೇಡ. ಅದರಿಂದ ವಿನಾಶವು ಕಟ್ಟಿಟ್ಟದ್ದು." ಎಂದು ನುಡಿದನು ಆಗ ಮೋಹಿನಿಯು "ವೈದ್ಯನೇ, ನಾನು ಇನ್ನೂ ದುರ್ಮಾರ್ಗಕ್ಕೆ ಬಿದ್ದಿಲ್ಲ. ನೀವು ಹೇಳಿದ ಸಾರಾಸಾರ ವಿಚಾರಗಳಿಂದ ನನ್ನ ಮನಸ್ಸು ಶುದ್ಧವಾಗಿದೆ. ಇನ್ನು ನಾನು ಶ್ಯಾಮಣ್ಣನಂತೆ ಬೇಗನೇ ವಿಷಯಲಂಪಟ ತನಕ್ಕೆ ಮನಸೋಲುವವಳಲ್ಲ" ಎಂದಳು. ಆಗ ಆ ಶ್ಯಾಮಣ್ಣನ ಕಥೆಯನ್ನು ಕೇಳಲು ವೈದ್ಯನು ಬಯಸಿದುದರಿಂದ ಮೋಹಿನಿಯು ಹೇಳತೊಡಗಿದಳು.

## ೨೬. ಶ್ಯಾಮಣ್ಣನ ಕಥೆ

ಪೂರ್ವಕಾಲದಲ್ಲಿ ಮೂವರು ಮಿತ್ರರು ದೇಶಸಂಚಾರಕ್ಕೆ ಹೊರಟರು. ಒಂದು ದಿನ ಸಂಜೆ ಅವರು ಕಾಶ್ಮೀರ್ ಪಟ್ಟಣಕ್ಕೆ ಸಮೀಪಿಸಿದರು. ನಡೆಯುತ್ತಾ ಹೋಗುತಿದ್ದಾಗ ಅವರಲ್ಲೊಬ್ಬನು "ಈ ದಾರಿಯಿಂದ ಯಾವುದೋ ಒಂದು ಉದ್ದ ಕುತ್ತಿಗೆಯ ಪ್ರಾಣಿಯು ಹೋಗಿದೆ. ಅದರ ಬಲಗಣ್ಣು ಕುರುಡಾಗಿದ್ದಿರಬೇಕು" ಎಂದನು. ಆಗ ಎರಡನೆಯವನು, "ಅದು ನಿಜ. ಅದರ ಮೇಲೆ ಗರ್ಭಿಣಿ ಸ್ತ್ರೀಯೊಬ್ಬಳು ಕುಳಿತಿದ್ದಳು" ಎಂದನು. ಅದನ್ನು ಕೇಳಿ ಮೂರನೇಯವನು "ಅದರ ಬೆನ್ನಿನ ಮೇಲೆ ಸಕ್ಕರೆ ಚೀಲ ಹಾಕಿದ್ದರೆಂದು ತೋರುತ್ತದೆ'' ಎಂದನು. ಹಾಗೆ ಅವರು ಮಾತನಾಡುತ್ತ ಊರೊಳಗೆ ಪ್ರವೇಶಿಸಿದಾಗ ಒಬ್ಬನು ಅವರನ್ನು ತಡೆದು "ನೀವೊಂದು ಒಂಟೆ

ಕಂಡಿರಾ ?" ಎಂದು ಕೇಳಿದನು. ಆಗ ಅವರು ಮೂವರೂ "ಅದರ ಒಂದು ಕಣ್ಣು ಕುರುಡಾಗಿದ್ದಿತಲ್ಲವೇ ? ಅದರ ಬೆನ್ನ ಮೇಲೆ ಗರ್ಭಿಣಿ ಸ್ತ್ರೀಯೊಬ್ಬಳು ಕುಳಿತಿದ್ದಳಲ್ಲವೇ ? ಅದರ ಬೆನ್ನ ಮೇಲೆ ಸಕ್ಕರೆ ಚೀಲ ಹೇರಿದ್ದಿತಲ್ಲವೇ ?" ಎಂದು ಪ್ರಶ್ನಿಸಿದರು. ಆಗ ಹೌದು" ಎಂದವನು ಉತ್ತರಕೊಟ್ಟಕೂಡಲೇ ಈ ಮೂವರೂ "ನಾವು ಒಂಟೆಯನ್ನು ಕಂಡಿಲ್ಲ" ಎಂದು ನುಡಿದರು. ಆಗ ಆ ಒಂಟೆ ಮಾಲಕನಿಗೆ ಆ ಪಥಿಕರ ಮೇಲೇ ಸಂಶಯ ಹುಟ್ಟಿತು. ಇವರ್‍ಹ ಕಳ್ಳರಿರಬಹುದೆಂದು ಊಹಿಸಿ ಊರಿನ ಅರಸನಿಗೆ ದೂರು ಕೊಟ್ಟನು.

ಸಿಪಾಯಿಗಳು ಬಂದು ಆ ಮೂವರು ಪಥಿಕರನ್ನು ಬಂಧಿಸಿ ರಾಜನ ಮುಂದೆ ನಿಲ್ಲಿಸಿದರು. ಆಗ ಅವರು ತಾವು ನಿರಪರಾಧಿಗಳೆಂದೂ ತೀರ್ಥ ಕ್ಷೇತ್ರಗಳನ್ನು ಸಂಚರಿಸಲು ಹೊರಟಿರುವವರೆಂದೂ ನುಡಿದರು. ಆ ಪ್ರಾಣಿಯ ಕಾಲಿನ ಹೆಜ್ಜೆ ಮತ್ತು ರಸ್ತೆಯ ಒಂದೇ ಮಗ್ಗುಲಿನ ಹುಲ್ಲನ್ನು ತಿನ್ನುತ್ತಾ ಹೋದುದರಿಂದ ಅದರ ಬಲಗಣ್ಣು ಕುರುಡೆಂದು ತಾನು ನುಡಿದೆನೆಂದು ಒಬ್ಬನು ನುಡಿದನು. ಆ ಪ್ರಾಣಿಯ ಮೇಲೆ ಕುಳಿತಿದ್ದವಳು ನೆಲದ ಮೇಲೆ ಕುಳಿತು ಎದ್ದಾಗ ಕೈ ಊರಿದ್ದಳು. ಅವಳ ಕಾಲಿನ ಹಾಗೂ ಕೈಗಳ ಬಳೆಗಳ ಚಿನ್ಹೆ ದೂಳಿನಲ್ಲಿ ಮೂಡಿತ್ತು. ಆದುದರಿಂದ ಅವಳು ಗರ್ಭಿಣಿ ಸ್ತ್ರೀಯೆಂದು ತಾನು ನುಡಿದೆನೆಂದು ಎರಡನೆಯವನು ಹೇಳಿದನು. ಸಕ್ಕರೆಯು ಸಾಲಾಗಿ ಬಿದ್ದು ಇರುವೆಗಳು ಮುಕ್ಕಿರುವುದರಿಂದ ಅದರ ಬೆನ್ನಿನ ಮೇಲೆ ಸಕ್ಕರೆ ಚೀಲವಿತ್ತೆಂದು ತಾನು ನುಡಿದೆನೆಂದು ಮೂರನೆಯವನು ಉತ್ತರಕೊಟ್ಟನು. ಅವರ ಚಾತುರ್ಯವನ್ನು ಕಂಡು ರಾಜನಿಗೆ ಆಶ್ಚರ್ಯವಾಯಿತು. ಅವರನ್ನು ಪುನಃ ಪರೀಕ್ಷಿಸಬೇಕೆಂದು ರಾಜನು ಒಂದು ಬಾಯಿಕಟ್ಟಿದ ಪಾತ್ರೆಯನ್ನು ತರಿಸಿ, ಇದರೊಳಗೆ ಏನಿದೆ ಹೇಳಿರಿ. ಸರಿಯಾಗಿ ಹೇಳಿದರೆ ಬಿಟ್ಟುಬಿಡುತ್ತೇನೆ ಇಲ್ಲದಿದ್ದರೆ ಠಕ್ಕರೆಂದು ಶಿಕ್ಷಿಸುತ್ತೇನೆ'' ಎಂದನು. ಅದಕ್ಕೆ ಅವರು ಒಪ್ಪಿ ಕೊಂಡರು.

ಒಬ್ಬನು ಆ ಬಾಯಿಕಟ್ಟಿದ ಪಾತ್ರೆಯನ್ನು ಕೈಯಲ್ಲಿ ಹಿಡಿದು ಅಲು ಗಿಸಿ "ಇದರೊಳಗೆ ದುಂಡಗಿನ ಒಂದು ವಸ್ತುವಿದೆ" ಎಂದು ನುಡಿದನು. ಎರ ಡನೇಯವನು ಅದನ್ನು ಹಿಡಿದು ಅಲುಗಿಸಿ, "ಇದರಲ್ಲಿ ಬಹಳ ಬೀಜಗಳಿವೆ. ಅವರೆ ರಕ್ತವರ್ಣವಿವೆ'' ಎಂದನು. ಮೂರನೇಯವನು ಅದನ್ನು ಹಿಡಿದು

"ಇದರೊಳಗೆ ಅನಾನಸ್ ಹಣ್ಣಿದೆ" ಎಂದು ಹೇಳಿದನು. ಆ ಮೇಲೆ ಆ ಪಾತ್ರೆಯ ಬಾಯಿಯನ್ನು ಬಿಚ್ಚಿ ನೋಡಲು ಅದರೊಳಗೆ ಅನಾನಸ್ ಹಣ್ಣೇ ಇದ್ದಿತು. ಇದನ್ನು ಕಂಡು ರಾಜನಿಗೂ ಹರ್ಷವಾಯಿತು. ಆ ಮೂವರ ಚಾತುರ್ಯಕ್ಕೂ ಅವನು ಮೆಚ್ಚಿ ತನ್ನ ಊರಿನಲ್ಲೇ ಇರಿಸಿಕೊಂಡನು. ವರ್ತಕನ ಒಂಟೆಯು ಧರ್ಮಶಾಲೆಯ ಬಳಿ ಇಳಿದುಕೊಂಡಿತ್ತು. ಅವನ ಹೆಂಡತಿಯೂ ಸುರಕ್ಷಿತವಾಗಿದ್ದಳು.

ಆ ಊರಿನ ರಾಜನು ಒಂದು ದಿನ ಆ ಮೂವರು ಪಥಿಕರನ್ನು ಕರೆಸಿ "ನೀವು ಯಾವ ಯಾವ ವಿದ್ಯೆಗಳನ್ನು ಅರಿತಿರುವಿರಿ?'' ಎಂದು ಪ್ರಶ್ನಿಸಿದನು. ತನಗೆ ರತ್ನಪರೀಕ್ಷೆ ಗೊತ್ತಿದೆಯೆಂದೊಬ್ಬನು ನುಡಿದನು. ಅಶ್ವಪರೀಕ್ಷೆಯನ್ನು ತಾನು ಬಲ್ಲೆನೆಂದು ಮತ್ತೊಬ್ಬನು ಹೇಳಿದನು. ಮನುಷ್ಯರನ್ನು ಪರೀಕ್ಷಿಸಿ ಅವರ ಗುಣಾವಗುಣಗಳನ್ನು ಹೇಳಬಲ್ಲೆನೆಂದು ಮೂರನೆಯವನು ಉತ್ತರ ಕೊಟ್ಟನು. ಅವರನ್ನು ಪರೀಕ್ಷಿಸುವ ಸಂದರ್ಭಗಳೂ ಬೇಗನೇ ಬಂದುವು. ಒಂದು ದಿನ ಒಬ್ಬ ರತ್ನವ್ಯಾಪಾರಿಯು ಅಮೂಲ್ಯವಾದ ಒಂದು ರತ್ನವನ್ನು ತಂದು ರಾಜನಿಗೊಪ್ಪಿಸಿದನು. ಆಗ ರಾಜನು ತನ್ನ ರತ್ನಪರೀಕ್ಷಕನನ್ನು ಕರೆಸಿ ಕೇಳಲು "ಮಹಾರಾಜ, ಇದರ ಒಳಗೆ ಒಂದು ತೂತಿದೆ. ಅದರಲ್ಲೊಂದು ಹುಳವಿದೆ" ಎಂದನು. ಆಗ ಅದನ್ನು ವರ್ತಕನ ಸಮ್ಮತಿಯಿಂದ ಒಡೆದು ನೋಡಲು ರತ್ನಪರೀಕ್ಷಕನ ಮಾತು ನಿಜವಾಗಿ ಪರಿಣಮಿಸಿತು. ಮತ್ತೊಂದು ದಿನ ಇರಾಣದ ವ್ಯಾಪಾರಿಯೊಬ್ಬನು ಉತ್ತಮವಾದ ಒಂದು ಕುದುರೆಯನ್ನು ತಂದು ರಾಜನಿಗೊಪ್ಪಿಸಿದನು. ರಾಜನು ಈ ಅಶ್ವಪರೀಕ್ಷಕನನ್ನು ಕರೆದು ಕೇಳಲು ಅವನು ಕುದುರೆಯನ್ನು ಹತ್ತಿ ಸ್ವಲ್ಪ ದೂರ ತೆರಳಿ ಮರಳಿ ಬಂದು "ಮಹಾರಾಜ, ಇದು ಬಹಳ ದೂರ ಓಡಲಾರದು. ಇದು ಸಣ್ಣದಿದ್ದಾಗ ಎಮ್ಮೆಯ ಹಾಲು ಇದಕ್ಕೆ ಕುಡಿಸಿರಬೇಕು" ಎಂದನು. ಅದು ನಿಜವೆಂದು ಇರಾಣಿ ವ್ಯಾಪಾರಿಯು ನುಡಿದನು. ಆಮೇಲೆ ರಾಜನು ತನ್ನ ಒಬ್ಬಳು ಮಗಳನ್ನು ಏಕಾಂತದಲ್ಲಿ ಈ ಮನುಷ್ಯ ಪರೀಕ್ಷಕನಿಗೆ ತೋರಿಸಿ "ಇವಳು ಯಾರ ಮಗಳು?" ಎಂದು ಕೇಳಿದನು. ಆಗ ಅವನು "ಇವಳು ತಮ್ಮ ಡೊಂಬರವಳಲ್ಲಿ ಹುಟ್ಟಿದವಳು" ಎಂದ ಏಕಾಂತದಲ್ಲಿ ಉತ್ತರ ಕೊಟ್ಟನು. ಅದು ನಿಜವಿದ್ದುದರಿಂದ ರಾಜ

ನಿಗೆ ಸಂತೋಷವಾಯಿತು. ಆ ಮೂವರಿಗೂ ನಾನಾ ಉಡುಗೊರೆಗಳನ್ನು ಕೊಟ್ಟು ಸತ್ಕರಿಸಿದನು.

ಆಮೇಲೆ ಒಂದು ದಿನ ರಾಜನು ಮನುಷ್ಯ ಪರೀಕ್ಷಕನನ್ನು ಕರೆಸಿ ತನ್ನನ್ನು ಪರೀಕ್ಷಿಸಿ ಹೇಳಬೇಕೆಂದು ಕೇಳಿದನು. ಆದರೆ ಅವನು ಮೊದಲು ಒಪ್ಪಲಿಲ್ಲ. ಆದರೆ ರಾಜನು ಹಟಹಿಡಿದು ಅವನ ಉತ್ತರವು ಅಪ್ರಿಯವಾಗಿದ್ದರೂ ತಾನು ಯಾವ ಹಾನಿಯನ್ನೂ ಮಾಡುವದಿಲ್ಲವೆಂದು ವಚನ ಕೊಟ್ಟದ್ದುದರಿಂದಲೂ ಆ ಮನುಷ್ಯ ಪರೀಕ್ಷಕನು ಒಪ್ಪಿಕೊಳ್ಳಬೇಕಾಯಿತು. ರಾಜನು ಸ್ವಲ್ಪ ದೂರದವರೆಗೆ ಓಡಿ ಆಮೇಲೆ ಬಂದು ತನ್ನನ್ನು ಕಾಣಬೇಕೆಂದು ಅವನು ನುಡಿದನು. ಅದರಂತೆ ಅವನು ಓಡುತ್ತ ಬರಲು "ನಿಮ್ಮ ತಂದೆ ಅಡಿಗೆ ಭಟ್ಟನು'' ಎಂದು ನುಡಿದನು. ಅದನ್ನು ಕೇಳಿ ರಾಜನಿಗೆ ಬಹಳ ಕೋಪ ಬಂದಿತು. ಆದರೆ ಅದನ್ನು ಆಗ ನುಂಗಿಕೊಂಡನು.. ಸಂಜೆ ತಾಯಿಯನ್ನು ಏಕಾಂತವಾಗಿ ಕಂಡು "ನನ್ನ ನಿಜ ತಂದೆ ಯಾರೆಂದು ಹೇಳು. ಸತ್ಯ ಹೇಳಿದರೆ ಕೊಲ್ಲುವದಿಲ್ಲ" ಎಂದು ನುಡಿದನು. ಆಗ ಅವನ ತಾಯಿಯು "ಮಗನೇ, ನಿನ್ನ ತಂದೆಗೆ ಪುತ್ರಸಂತಾನವೇ ಆಗಲಿಲ್ಲ. ಕೊನೆಗೆ ಬೇಸರದಿಂದ ಕಾಡಿಗೆ ಹೊರಡಲು ನಿರ್ಧರಿಸಿದನು. ನಾನೇ ಅವನನ್ನು ತಡೆದು ಬೇಗನೇ ಪುತ್ರಸಂತಾನವಾಗುವದೆಂದು ಸಮಾಧಾನ ಪಡಿಸಿದೆ. ಒಂದು ದಿನ ಅವನು ಬೇಟೆಗಾಗಿ ಕಾಡಿಗೆ ಹೋದನು. ಅದೇ ದಿನ ನನಗೆ ಬಹಳ ಕಾಮಾತುರವಾಯಿತು. ಅಡಿಗೆ ಭಟ್ಟನು ಊಟ ತಂದುದನ್ನು ಕಂಡು ಅವನ ಮೇಲೆಯೇ ಮೋಹಪಟ್ಟು ಕೂಡಿದೆ. ಅಂದೇ ಗರ್ಭ ನಿಂತು ನಿನ್ನನ್ನು ಪಡೆದೆ" ಎಂದು ನುಡಿದಳು. ಆಗ ಮನುಷ್ಯ ಪರೀಕ್ಷಕನು ಆಡಿದ ಮಾತು ನಿಜವೆಂದು ಅರಸನು ಸಂತೋಷಪಟ್ಟನು.

ಆದರೆ ಅರಸನಿಗೆ ತನ್ನ ಜನ್ಮ ಕಥೆಯನ್ನು ಕೇಳಿ ವ್ಯಸನವೂ ವೈರಾಗ್ಯವೂ ಹುಟ್ಟಿತು. ಅವನು ದೇಶ ಕೋಶವನ್ನೆಲ್ಲ ಮಂತ್ರಿಗೊಪ್ಪಿಸಿ ತೀರ್ಥ ಯಾತ್ರೆಗೆ ಹೊರಟನು. ಅನೇಕ ಊರುಗಳನ್ನು ಸುತ್ತಿ ಮಾರ್ಗಾಯಾಸದಿಂದ ಒಂದು ದಿನ ಒಂದು ಮರದ ಕೆಳಗೆ ಮಲಗಿದ್ದನು. ಆಗ ಆ ದಾರಿಯಾಗಿ ಬಂದ ಒಬ್ಬ ಅರಸನು ಸನ್ಯಾಸ ಸ್ವೀಕರಿಸಿ ಕುಳಿತಿದ್ದ ಆ ತರುಣನ ರಾಜತೇಜವನ್ನೂ ಅಂಗಾಂಗ ಸೌಂದರ್ಯವನ್ನೂ ಕಂಡು ಅವನೊಡನೆ

ಮೃದುಮಧುರವಾಗಿ ಮಾತುಕತೆ ನಡೆಸಿದನು. ಸನ್ಯಾಸಿಯು ತನ್ನ ವೈರಾಗ್ಯದ ಕತೆ ಹೇಳಲು ಅರಸನು "ಅಹಾ, ಎಂತಹ ತಪ್ಪು ಮಾಡಿದೆ. ಪೂರ್ವ ಜನ್ಮದಲ್ಲಿ ಮಾಡಿದ ಪುಣ್ಯದ ಫಲದಿಂದ ಈ ರಾಜಪದವಿ ಲಭಿಸಿದೆ. ಅದನ್ನು ಬಿಟ್ಟುಬಂದೆಯಲ್ಲ; ಈ ಭ್ರಾಂತಿಯನ್ನು ತೊರೆದು, ಮತ್ತೆ ರಾಜ್ಯಕ್ಕೆ ತೆರಳಿ ರಾಜ್ಯಪಾಲನೆ ಮಾಡು'' ಎಂದನು. ಅದನ್ನು ಕೇಳಿ ಆ ಶ್ಯಾಮಣ್ಣನು ಪಶ್ಚಾತ್ತಾಪಪಟ್ಟು ಹಿಂದೆ ಬಂದು ಮತ್ತೆ ರಾಜ್ಯಭಾರ ಮಾಡಲಾರಂಭಿಸಿದನು. ಆದರಂತೆ ಬುದ್ಧಿವಂತನಾದವನು ತಾನೊಂದು ಕಾರ್ಯವನ್ನು ಆರಂಭಿಸುವ ಮೊದಲೇ ಸಾರಾಸಾರ ವಿಚಾರ ಮಾಡಬೇಕು."

ಮೋಹಿನಿಯು ಹೇಳಿದ ಈ ಕಥೆಯನ್ನು ಕೇಳಿ ಮೋಹನದಾಸನು ಸಂತೋಷಭರಿತನಾಗಿ "ಮೋಹಿನೀ ನಾನು ಹೇಳಿದ ಕಥೆಗಳನ್ನು ಕೇಳಿ ನೀನು ಸನ್ಮಾರ್ಗ ಪ್ರವೃತ್ತಳಾದರೆ ಒಳ್ಳೇದು. ಇನ್ನು ಮುಂದೆ ನಾನಿದ್ದಲ್ಲಿ ಬರಬೇಡ. ಏಕೆಂದರೆ, ನೀನು ಆಗಾಗ ಬರುತ್ತಿರುವುದನ್ನು ಕಂಡ ಜನರು ನಿನಗೆ ಏನಾದರೂ ಅಂದಾರು. ನನಗೆ ಪ್ರಭುದೇವನ ಗತಿ ಬಂದೀತು'' ಎಂದನು. ಅದನ್ನು ಕೇಳಿದ ಮೋಹಿನಿಯು ಆ ಪ್ರಭುದೇವನ ಕಥೆ ಕೇಳಲು ಇಷ್ಟಪಟ್ಟುದುದರಿಂದ ಅವನು ಅದನ್ನು ಹೇಳತೊಡಗಿದನು.

## ೨೭. ಪ್ರಭುದೇವನ ಕಥೆ

ಪೂರ್ವ ಕಾಲದಲ್ಲಿ ಚಂದ್ರನಗರದಲ್ಲಿ ಒಬ್ಬ ವ್ಯಾಪಾರಿಯಿದ್ದನು. ಅವನಿಗೆ ಪ್ರಭುದೇವನೆಂಬ ಒಬ್ಬ ಮಗನಿದ್ದನು. ವಯೋವೃದ್ಧನಾದ ಆ ವ್ಯಾಪಾರಿಯು ಮರಣಹೊಂದಿದ ಮೇಲೆ ಮಗನೇ ವ್ಯಾಪಾರಕ್ಕೆ ನಿಂತನು. ತಂದೆಯು ಸಾಯುವ ಮೊದಲು ಗೋಣಿ ಚೀಲದಲ್ಲಿ ಸರಕು ಸಾಮಾನುಗಳನ್ನೆಲ್ಲ ಗಂಟು ಕಟ್ಟಿದ್ದನು. ಆದರೆ ಆಗ ಅವುಗಳ ಬೆಲೆಯು ಹೆಚ್ಚಿರಲಿಲ್ಲ. ಅವುಗಳನ್ನು ಪರದೇಶಕ್ಕೆ ತೆಗೆದುಕೊಂಡು ಹೋದರೆ ಹೆಚ್ಚು ಬೆಲೆ ಬರಬಹುದೆಂದು ಪ್ರಭುದೇವನು ಭಾವಿಸಿದನು. ಮತ್ತು ತಾಯಿಯೊಡನೆ ಈ ವಿಚಾರವನ್ನು ತಿಳಿಸಿ ಅವಳ ಅಪ್ಪಣೆಯನ್ನು ಪಡೆದುಕೊಂಡನು.

ಆ ಮೇಲೆ ಅವನು ಕಾಂತಾವರಕ್ಕೆ ಪ್ರಯಾಣ ಬೆಳಸಿದನು. ಅಲ್ಲಿ

ಒಂದು ಮನೆಯನ್ನು ಬಾಡಿಗೆಗೆ ತೆಗೆದುಕೊಂಡು ವ್ಯಾಪಾರ ಆರಂಭಿಸಿದನು. ಅಲ್ಲಿದ್ದ ಒಬ್ಬ ದಲಾಲನೂ ಅವನಿಗೆ ಸಹಾಯ ನೀಡಿದನು. ಆದರೆ ದುರದೃಷ್ಟದಿಂದ ಆ ದಲಾಲನೂ ಒಂದು ದಿನ ಆಕಸ್ಮಿಕವಾಗಿ ಮರಣಹೊಂದಿದನು. ಪ್ರಭುದೇವನು ಅವನ ಸ್ಮಶಾನಯಾತ್ರೆಗೂ ಹೋದನು. ಸ್ಮಶಾನವು ಊರಿನ ಹೊರಗಿತ್ತು. ಮತ್ತು ದಹನಕ್ರಿಯೆಯೆಲ್ಲ ನಡೆದಾಗ ಮಧ್ಯರಾತ್ರಿಯಾಯಿತು. ಪ್ರಭುದೇವನು ನಗರಕ್ಕೆ ಹಿಂತೆರಳಿದಾಗ ನಗರದ ಮಹಾದ್ವಾರವನ್ನು ಹಾಕಿದ್ದರು. ಆದುದರಿಂದ ಅವನು ಸ್ಮಶಾನಕ್ಕೆ ಹಿಂತಿರುಗಿದನು. ಆದರೆ ಅಷ್ಟರಲ್ಲಿ ಯಾರೋ ಒಂದು ಪೆಟ್ಟಿಗೆಯನ್ನು ಹೊತ್ತುಕೊಂಡು ಬರುತ್ತಿದ್ದರು. ಪ್ರಭುದೇವನು ಮರೆಯಲ್ಲಿ ನಿಂತು ನೋಡಲಾರಂಭಿಸಿದನು. ಪೆಟ್ಟಿಗೆ ತಂದವರು ಒಂದು ದೊಡ್ಡ ಹೊಂಡ ತೋಡಿ ಆ ಪೆಟ್ಟಿಗೆಯನ್ನು ಕೆಳಗಿಳಿಸಿ ಮೇಲೆ ಮಣ್ಣು ಹಾಕಿ ಹೊರಟರು. ಪ್ರಾಯಶಃ ಅವರು ಕಳ್ಳರಿರಬೇಕೆಂದು ಪ್ರಭುದೇವನು ಭಾವಿಸಿದನು. ಆ ಪೆಟ್ಟಿಗೆಯಲ್ಲಿ ಏನಿದೆಯೋ ಏನೋ ನೋಡಬೇಕೆಂಬ ಕುತೂಹಲವೂ ಉಂಟಾಯಿತು. ಅವರು ಹೊರಟು ಹೋದ ಮೇಲೆ ಅವನು ಮೆಲ್ಲಗೆ ಮಣ್ಣನ್ನಗೆದು ಪೆಟ್ಟಿಗೆಯ ಬಾಯಿ ತೆರೆದನು. ಒಳಗೆ ಅಂದವಾದ ವಸ್ತ್ರ ಹಾಗೂ ಚಿನ್ನಾಭರಣಗಳನ್ನು ಧರಿಸಿದ್ದ ಸ್ತ್ರೀಯೊಬ್ಬಳು ಮಲಗಿದ್ದಳು. ಅವಳು ಮೂರ್ಛಾವಸ್ಥೆಯಲ್ಲಿದ್ದಳು. ಹೊರತು ಮರಣ ಹೊಂದಿರಲಿಲ್ಲ. ಆದುದರಿಂದ ಪ್ರಭುದೇವನು ಪಂಜೆಯನ್ನು ನೀರಲ್ಲಿ ಅದ್ದಿ ತಂದು ಅವಳ ಮೋರೆ ಮೇಲೆ ಹಿಂಡಿದನು. ಸ್ವಲ್ಪ ಹೊತ್ತಿನ ಮೇಲೆ ಅವಳಿಗೆ ಪ್ರಜ್ಞೆ ಬಂದಿತು. ಪ್ರಭುದೇವನು ಅವಳನ್ನು ಸಂತೈಸಿ ನಸುಕಿಗೆ ತನ್ನ ಮನೆಗೆ ಕರೆದುಕೊಂಡು ಬಂದನು.

ಪೆಟ್ಟಿಗೆಯಲ್ಲಿ ಹುಗಿಯಲ್ಪಟ್ಟಿದ್ದ ಈ ಸ್ತ್ರೀ ಆ ಊರಿನ ದೊರೆಯ ಪಟ್ಟಮಹಷಿ. ರಾಜನಿಗೆ ಅವಳ ಮೇಲೆ ಬಹಳ ಪ್ರೀತಿ. ಆದರೆ ಅವಳ ಸವತಿಯರಿಗೆ ಅದು ಹೊಟ್ಟೆಕಿಚ್ಚಿಗೆ ಕಾರಣವಾಗಿತ್ತು. ರಾಜನು ಒಂದು ದಿನ ಬೇಟೆಗೆ ಹೋಗಿದ್ದಾಗ ಆ ಸವತಿಯರು ಅನ್ನದಲ್ಲಿ ವಿಷಕೂಡಿಸಿದರು. ರಾಣಿಯು ಸ್ವಲ್ಪ ತಿಂದ ಕೂಡಲೇ ಮೂರ್ಛೆ ಹೋದಳು. ಆ ಮೇಲೆ ಅವರು ಅವಳನ್ನು ಪೆಟ್ಟಿಗೆಯಲ್ಲಿ ಹಾಕಿ ಸ್ಮಶಾನಕ್ಕೆ ಹೊತ್ತು ಹುಗಿದರು. "ನೀನಿರದಿದ್ದರೆ ನಾನಿಷ್ಟರ ವರೆಗೆ ಬದುಕುತಿದ್ದಿಲ್ಲ. ಆದರೆ ನೀನು ನನ್ನನ್ನು ಕಾಪಾಡಿದ

ಸಂಗತಿಯನ್ನು ಬೇರೆ ಯಾರೊಡನೆಯೂ ಹೇಳಬೇಡ"ಎಂದವಳು ನುಡಿದಳು.

ಅತ್ತ ಅರಮನೆಯಲ್ಲಿ ರಾಣಿಯ ಸವತಿಯರು ಒಂದು ಗೊಂಬೆಯನ್ನು ಮಾಡಿಸಿದರು. ರಾಣಿಯು ಮರಣ ಹೊಂದಿದಳೆಂದು ಸುದ್ದಿ ಹಬ್ಬಿಸಿದರು. ಗೊಂಬೆಯನ್ನು ಪೆಟ್ಟಿಗೆಯಲ್ಲಿ ಮಲಗಿಸಿ ಅದನ್ನು ಮೆರವಣಿಗೆ ತೆಗೆದುಕೊಂಡು ಹೋಗಿ ಸ್ಮಶಾನದಲ್ಲಿ ಬೇರೊಂದು ಕಡೆ ಹುಗಿಸಿದರು. ಬೇಟೆಯಿಂದ ಹಿಂತಿರುಗಿದ ರಾಜನು ತನ್ನ ಪ್ರೀತಿಯ ರಾಣಿಯ ಮರಣದ ವಾರ್ತೆ ಕೇಳಿ ಬಹಳ ದುಃಖಪಟ್ಟನು. ಆದರೆ ಅವನು ಬಂದ ಸುದ್ದಿಯು ರಾಣಿಗೆ ತಿಳಿಯಲು, ಅವಳು ತಾನು ಬದುಕಿದ ಸಂಗತಿ ಹಾಗೂ ತನ್ನನ್ನು ಕಾಪಾಡಿದ ಪ್ರಭುದೇವನ ದಯ ಇದನ್ನು ಒಂದು ಓಲೆಯಲ್ಲಿ ಬರೆದಳು. ಅದನ್ನು ಅರಮನೆಯಲ್ಲಿರುವ ತನ್ನ ಪ್ರಿಯ ದಾಸಿಗೆ ಕೊಡಬೇಕೆಂದು ಪ್ರಭುದೇವನಿಗೆ ಹೇಳಿದಳು. ಆದರೆ ಆ ಪತ್ರವನ್ನು ಓದಿದ ಕೂಡಲೇ ರಾಜನಿಗೆ ಸಿಟ್ಟು ಬಂದಿತು. ಆ ದಾಸಿಯರನ್ನು ಕೊಲ್ಲಿಸಿದನು. ಪ್ರಭುದೇವನೆಂದ ವರ್ತಕನ ಮನೆಯನ್ನು ಝಡತಿ ಮಾಡಿ ಅವನನ್ನು ಅಲ್ಲಿರುವ ಸ್ತ್ರೀಯನ್ನು ಬಂಧಿಸಿ ತರಲು ಆಜ್ಞಾಪಿಸಿದನು. ರಾಜಾಜ್ಞೆಯಂತೆ ಸಿಪಾಯಿಗಳು ಪ್ರಭುದೇವನ ಮನೆಗೆ ಮುತ್ತಿಗೆ ಹಾಕಿದರು. ಆಗ ಅವನು ಕೆಲಸದವನ ವೇಷ ಹಾಕಿಕೊಂಡು ಪಾರಾಗಿ ಹೋದನು. ರಾಣಿಯೆಂಬ ಕಲ್ಪನೆ ಇಲ್ಲದೆ ಆ ಸ್ತ್ರೀಯನ್ನು ಹಿಡಿದು ಜೇಲಿಗಟ್ಟಿದರು. ಪ್ರಭುದೇವನ ಸಂಪತ್ತನ್ನೆಲ್ಲ ವಶಪಡಿಸಿಕೊಂಡರು.

ತಪ್ಪಿಸಿಕೊಂಡು ಹೋದ ಪ್ರಭುದೇವನು ಒಂದು ಹಡಗವನ್ನೇರಿ ವಿದೇಶಕ್ಕೆ ಪ್ರಯಾಣ ಮಾಡಿದನು. ಆದರೆ ಸಮುದ್ರದಲ್ಲಿ ದೊಡ್ಡ ಬಿರುಗಾಳಿ ಎದ್ದು ಆ ಹಡಗವು ಒಂದು ಬಂಡೆಗೆ ಅಪ್ಪಳಿಸಲ್ಪಟ್ಟಿತು. ಅದರೊಳಗಿನವರೆಲ್ಲರೂ ನೀರು ಪಾಲಾದರು. ಪ್ರಭುದೇವನು ಮಾತ್ರ ಮುರಿದ ಒಂದು ಹಲಗೆಯನ್ನು ಹಿಡಿದು ಈಸಿ ದಂಡೆಗೆ ಸೇರಿದನು. ಆ ಸಮುದ್ರಕ್ಕೆ ಸ್ನಾನಕ್ಕೆ ಬಂದಿದ್ದ ಒಬ್ಬ ವರ್ತಕನು ಪ್ರಭುದೇವನ ಮೇಲೆ ಅಂತಃಕರಣ ಪಟ್ಟು ತನ್ನ ಮನೆಗೆ ಕರೆದುಕೊಂಡು ಹೋದನು. ತನ್ನ ಅಂಗಡಿಯಲ್ಲಿ ಅವನಿಗೆ ಒಂದು ಕೆಲಸವನ್ನು ಕೊಟ್ಟನು. ಪ್ರಭುದೇವನು ಪ್ರಾಮಾಣಿಕನಿದ್ದುದರಿಂದ ಆ ವ್ಯಾಪಾರಿಯ ಲಾಭವು ಹೆಚ್ಚಾಯಿತು. ಆದರೆ ಆ ವರ್ತಕನು ತುಂಬಾ ಲೋಭಿ. ಸಂಬಳ ಕೊಡಲು ಹಿಂದುಮುಂದು ನೋಡುತ್ತಿದ್ದನು. ಆದುದ

ರಿಂದ ಪ್ರಭು ದೇವನು ತನ್ನ ಸಂಬಳವನ್ನು ತಾನೇ ತೆಗೆದುಕೊಂಡು ಅದನ್ನು ಆ ವರ್ತಕನಿಗೆ ಕಳಿಸುತಿದ್ದನು. ಒಂದೆರಡು ತಿಂಗಳ ಮೇಲೆ ಅವನಿಗೆ ಸಿಟ್ಟು ಬಂತು. ಪ್ರಭು ದೇವನನ್ನು ಕೆಲಸದಿಂದ ಹೊರಗೆ ಹಾಕಿದನು.

ಅಲ್ಲಿಂದ ಹೊರಟ ಪ್ರಭುದೇವನು ಜೀವಕ್ಕೆ ಬೇಸತ್ತು ಮತ್ತೆ ಸಮುದ್ರ ದಂಡೆಯ ಕಡೆ ನಡೆದನು. ಅಲ್ಲಿ ಆಳುಗಳು ಸಮುದ್ರದಲ್ಲಿ ಮುಳುಗಿ ಮುತ್ತುಗಳನ್ನು ತೆಗೆಯುತ್ತಿದ್ದರು. ಆ ದೊಡ್ಡ ವ್ಯಾಪಾರಿಯೊಬ್ಬನು ಅವರನ್ನೆಲ್ಲ ಈ ಕೆಲಸಕ್ಕೆ ಹಚ್ಚಿದ್ದನು. ಪ್ರಭುದೇವನು ಆ ವ್ಯಾಪಾರಿಯ ಬಳಿಗೆ ತೆರಳಿ ತನಗೆ ಧರ್ಮಕೊಡಬೇಕೆಂದು ಕೇಳಿದನು. ಆಗ ಅವನು ಆ ಆಳುಗಳನ್ನು ಕರೆದು ಈ ಸಲ ನೀವು ನೀರಲ್ಲಿ ಮುಳುಗಿ ದೊರಕಿಸಿದ ಮುತ್ತುಗಳೆನ್ನೆಲ್ಲ ಇವನಿಗೆ ಕೊಡಿರಿ, ಎಂದನು. ಅವರು ಮುಳುಗಿ ಮೇಲಕ್ಕೆ ಬಂದಾಗ ಉತ್ತಮವಾದ ಹತ್ತು ಮುತ್ತುಗಳನ್ನು ತಂದರು. ಅವೆಲ್ಲವನ್ನು ಆ ವ್ಯಾಪಾರಿಯು ಪ್ರಭುದೇವನಿಗೆ ಕೊಟ್ಟನು. ಆದರೆ ಅವನು ಅಲ್ಲಿಂದ ಬರುತ್ತಿದ್ದಾಗ ದಾರಿಯಲ್ಲಿ ಕಳ್ಳರು ಅವನನ್ನು ತಡೆದು ಅವನ ಬಟ್ಟೆಗಳನ್ನೆಲ್ಲ ಅಪಹರಿಸಿದರು. ಅವನು ಬಾಯಲ್ಲಿ ಇಟ್ಟುಕೊಂಡಿದ್ದ ಎರಡು ಮುತ್ತುಗಳು ಮಾತ್ರ ಉಳಿದುವು. ಪ್ರಭುದೇವನು ಅವನ್ನೆ ಹಿಡಿದುಕೊಂಡು ಆ ಊರಿನ ಮುತ್ತು ವ್ಯಾಪಾರಿ ಇದ್ದಲ್ಲಿಗೆ ಬಂದನು. ಅವನು ಮುತ್ತುಗಳನ್ನು ಮಾರುತ್ತಿದ್ದುದನ್ನು ಯಾರೋ ಒಬ್ಬನು ನೋಡಿ "ಇಂಥ ಹತ್ತು ಮುತ್ತುಗಳು ನನ್ನಲ್ಲಿ ಇದ್ದವು. ಈಗ ಎಂಟೆ ಇವೆ. ಇವೆರಡು ನನ್ನ ಮುತ್ತುಗಳೇ ಆಗಿವೆ" ಎಂದನು. ಈ ಮಾತು ರಾಜನವರೆಗೂ ಹೋಯಿತು. ಪ್ರಭುದೇವನನ್ನು ಕಳ್ಳನೆಂದು ತಿಳಿದು ಅವನನ್ನು ಸೆರೆಮನೆಗಟ್ಟಿದರು. ಆದರೇ ಸ್ವಲ್ಪ ದಿನಗಳು ಉರುಳಿದ ಮೇಲೆ ಪ್ರಭುದೇವನಿಗೆ ಮುತ್ತುಗಳನ್ನು ಕೊಟ್ಟ ವ್ಯಾಪಾರಿಯ ಗುಮಾಸ್ತನು ಇದನ್ನು ಕೇಳಿ ಪ್ರಭುದೇವನು ನಿರಪರಾಧಿಯೆಂದು ರಾಜನಿಗೆ ತಿಳಿಸಿ ಅವನ ಸೆರೆ ಬಿಡಿಸಿದನು. ಅವನಿಗೆ ತನ್ನ ತೋಟಗಾರನ ಕೆಲಸವನ್ನು ಕೊಟ್ಟನು.

ಒಂದು ದಿನ ಪ್ರಭುದೇವನು ಆ ತೋಟದಲ್ಲಿ ಒಂದಡೆ ಕುಳಿತು ವೀಳ್ಯ ಹಾಕುತ್ತಿದ್ದನು. ಆಗ ಅವನ ಕೈಯಲ್ಲಿದ್ದ ಅಡಿಕೆಯೊಂದು ಕೆಳಗೆಬಿತ್ತು. ಅಲ್ಲಿ ಸ್ವಲ್ಪ ಪೊಳ್ಳು ಸ್ಥಳವಿದ್ದಂತೆ ಅವನಿಗೆ ಭಾಸವಾಯಿತು. ಅಲ್ಲಿ ಮಣ್ಣನ್ನು ಅಗೆಯಲು ಒಂದು ಬಾಗಿಲು ಕಂಡಿತು. ಅದನ್ನು ತೆರೆದು ಒಳಗೆ ನೋಡಲು

ಮೆಟ್ಟಲುಗಳು ಕಾಣಸಿದವು· ಅವೆಲ್ಲವುಗಳನ್ನು ಇಳಿದು ಹೋದನು. ಅದು ಅರಮನೆಯ ದಾರಿಯಾಗಿತ್ತು.ಅಂತಃಪುರಕ್ಕೆ ತೆರಳುವ ಕಳ್ಳಮಾರ್ಗವಾಗಿತ್ತು ಪ್ರಭುದೇವನು ಅಂತಃಪುರಕ್ಕೂ ಕಾಲಿಟ್ಟನು. ಆದರೆ ಅಲ್ಲಿ ರಾಜನು ಮಲಗಿ ಕೊಂಡಿದ್ದನು. ಅಪ್ಪಣೆಯಿಲ್ಲದೆ ಅವನು ಅಂತಃಪುರಕ್ಕೆ ಬಂದುದನ್ನು ಕಂಡ ರಾಜನು ರೇಗಿ ಅವನನ್ನು ತನ್ನ ನಗರದಿಂದ ಹೊರಗೆ ಹಾಕಿದನು.

ಅತ್ತ ಕಾಂತಾವರದ ಅರಸನು ಒಂದುದಿನ ಸೆರೆಮನೆಯಲ್ಲಿದ್ದ ತನ್ನ ರಾಣಿಎಂದು ಹೇಳಿಕೊಳ್ಳುವ ಸ್ತ್ರೀಯನ್ನು ನೋಡಹೋದನು. ಆಗ ಅವಳ ಗುರ್ತು ಹತ್ತಿತು. ತನ್ನ ರಾಣಿಯು ಮರಣ ಹೊಂದಿಲ್ಲವೆಂದು ಅವನು ಅರಿತು ಅವಳನ್ನು ಮುಕ್ತಗೊಳಿಸಿದನು. ಅರಮನೆಗೆ ಬಂದು ಅವಳು ತನ್ನ ಸವತಿಯರು ಮಾಡಿದ ಮೋಸಕೃತ್ಯಗಳನ್ನೂ ಸ್ಮಶಾನದಲ್ಲಿ ತನ್ನನ್ನು ಬದುಕಿಸಿದ ಪ್ರಭು ದೇವನ ಉದಾತ್ತ ಮನೋಭಾವವನ್ನು ತಿಳಿಸಿದಳು. ಆ ಪ್ರಭುದೇವನನ್ನ ಹುಡುಕಿಕೊಂಡು ಬರಲು ಚಾರರನ್ನು ಕಳಿಸಿದನು. ಚಾರರು ಅವನನ್ನು ಒಂದು ಧರ್ಮಛತ್ರದಲ್ಲಿ ಕಂಡರು. ಕಾಂತಾವರದ ಅರಸನಲ್ಲಿ ಅವನನ್ನು ಕೂಡಲೇ ಕರೆದುಕೊಂಡು ಬಂದರು. ರಾಜನು ಅವನಿಗೆ ಅಪಾರ ದ್ರವ್ಯವನ್ನು ಉಡುಗೊರೆಯಾಗಿ ಕೊಟ್ಟುದ್ದುದರಿಂದರ ಪ್ರಭುದೇವನು ಮತ್ತೆ ಅದೇ ನಗರ ದಲ್ಲಿ ಅಂಗಡಿ ಹಾಕಿ ಹೊಸವ್ಯಾಪಾರ ವ್ಯವಹಾರವನ್ನು ಆರಂಭಿಸಿದನು.

ಮೋಹಿನೀ, ಆ ಪ್ರಭುದೇವನು ಸನ್ಮಾರ್ಗಿ, ಪರೋಪಕಾರವುಳ್ಳವನು. ದುಷ್ಕರ್ಮ ಪ್ರವೃತ್ತ ನಾಗಿರಲಿಲ್ಲ. ಆದುದರಿಂದ ಎಂತಹ ಕಷ್ಟಗಳು ಬಂದರೂ ಅಧೀರನಾಗದೆ ಅವುಗಳನ್ನು ಇದಿರಿಸಿದನು. ಮತ್ತು ಅವುಗಳಿಂದ ಪಾರಾದನು. ಅದರಂತೆ ಇದ್ದರೆ ನೀನಾದರೂ ಕಷ್ಟಗಳನ್ನು ಇದಿರಿಸಲು ಸಮ ರ್ಥಳಾಗುತ್ತಿ. ಪತಿವ್ರತಾ ಮಹಿಳೆಯೆಂದೂ ಪರಮ ಪಾವನಳೆಂದೂ ಕೀರ್ತಿಗ ಳಿಸಿದ ಇನ್ನೊಬ್ಬ ಸ್ತ್ರೀಯ ಕತೆಯನ್ನು ನಾನುಬಲ್ಲೆ" ಎಂದನು· ಆಗ ಮೋಹಿನಿಯು ಆ ಕಥೆಯನ್ನು ಕೇಳಲು ಬಯಸಿದುದರಿಂದ ಮೋಹನದಾಸ ಹೇಳಲಾರಂಭಿಸಿದನು.

— —

# ೨೮. ಪತಿವ್ರತೆಯ ಕತೆ

ಪೂರ್ವಕಾಲದಲ್ಲಿ ನಾಗಪುರ ಎಂಬ ಒಂದು ನಗರದಲ್ಲಿ ಒಬ್ಬ ವರ್ತಕ ನಿದ್ದನು. ಅವನಿಗೆ ಗುಣನಿಧಿ ಎಂಬವನು ಒಬ್ಬನೇ ಮಗನು ಅವನು ದೊಡ್ಡವ ನಾದ ಮೇಲೆ ಮದುವೆಮಾಡಿಸಬೇಕೆಂದು ವ್ಯಾಪಾರಿಯು ಬಯಸಿದನು. ಮಗನನ್ನು ಕರೆದು ಈ ಮಾತುಗಳನ್ನು ಹೇಳಿದನು. ಆಗ ಗುಣನಿಧಿಯು "ತಂದೆಯೇ, ನಾನು ಒಂದು ಪತ್ರವನ್ನು ಬರೆದುಕೊಡುತ್ತೇನೆ. ಅದಕ್ಕೆ ಯೋಗ್ಯ ಉತ್ತರಕೊಡುವ ಕನ್ಯೆಯನ್ನು ನಾನು ಲಗ್ನವಾಗುತ್ತೇನೆ. ಅವಳು ಅಂಗವಿಹೀ ನಳಾಗಿದ್ದರೂ ರೋಗಿಯಾಗಿದ್ದರೂ ಅಡ್ಡಿ ಇಲ್ಲ" ಎಂದನು. ಅವನ ತಂದೆಯು ಅದಕ್ಕೆ ಒಪ್ಪಿ ವಿಶ್ವಾಸಕ್ಕೆ ಪಾತ್ರನಾದ ಒಬ್ಬ ಬ್ರಾಹ್ಮಣನನ್ನು ಕರೆದು ಮಗ ನು ಬರೆದ ಪತ್ರವನ್ನು ಅವನ ಕೈಗಿತ್ತು ಕಳಿಸಿದನು.

ಬ್ರಾಹ್ಮಣನು ಊರಿಂದ ಊರಿಗೆ ಪ್ರಯಾಣ ಬೆಳಿಸಿದನು ಕನ್ಯಾಪಿತೃಗ ಳೆಲ್ಲರೂ ಅವನನ್ನು ಸ್ವಾಗತಿಸಿ ತಂತಮ್ಮ ಕನ್ಯೆಯರನ್ನು ಅವನಿಗೆ ತೋರಿಸಿದ ರು. ಆದರೆ ಯಾವ ಕನ್ಯೆಗೂ ಆ ಪತ್ರಕ್ಕೆ ಸರಿಯಾದ ಉತ್ತರ ಕೊಡಲಾಗ ಲಿಲ್ಲ. ಅವನು ನಿರಾಶೆಯಿಂದ ಊರಿಗೆ ಹೊರಟನು. ಮಾರ್ಗಮಧ್ಯೆ ಒಬ್ಬ ಶ್ರೀಮಂತನೂ ದಾನಿಯೂ ಆದ ವ್ಯಾಪಾರಿಯಲ್ಲಿ ಇಳಿದುಕೊಂಡನು. ಆ ವ್ಯಾಪಾರಿಯು ಸಾಮಾನ್ಯ ವರ್ತಕನೊಬ್ಬನ ಮನೆಗೆ ಆ ಬ್ರಾಹ್ಮಣನನ್ನು ಕಳಿಸಿ, ವಿವಾಹ ಯೋಗ್ಯಳಾದ ಒಂದು ಕನ್ಯಾರತ್ನವಿದೆಂದು ತಿಳಿಸಿದನು. ಬ್ರಾಹ್ಮಣನು ನಂಬಿ ಅಲ್ಲಿಗೆ ಬಂದು ಆ ವರ್ತಕನ ಭೆಟ್ಟಿಯಾದನು. ವರ್ತಕನ ಮಗಳು ಆ ಪತ್ರವನ್ನು ತೆಗೆದುಕೊಂಡು ಓದಿದಳು. ಮತ್ತು ಅದಕ್ಕೆ ಸರಿಯಾ ದ ಒಂದು ಉತ್ತರವನ್ನು ಬರೆದುಕೊಟ್ಟಳು. ಆ ಉತ್ತರದಲ್ಲಿ ಅವಳು "ದುರಾ ಚಾರ ಪ್ರವೃತ್ತಳಾದ ಸ್ತ್ರೀಯನ್ನ ನಿರ್ಬಂಧಿಸುವುದು ಕಠಿನ. ಎಷ್ಟು ಪ್ರತಿಬಂ ಧಿಸಿದರೂ ಅವಳು ದುಷ್ಟ ಕಾರ್ಯವನ್ನು ಬಿಡಲಾರಳು. ಸ್ವಯಂನಿಗ್ರಹ ದಿಂದಲೇ ಶೀಲವಂತರಾಗಿ ಬಾಳಲು ಸಾಧ್ಯವಿದೆ ಯಾವ ಸ್ತ್ರೀ ತನ್ನನ್ನು ತಾನೇ ರಕ್ಷಿಸಿಕೊಳ್ಳುತ್ತಾಳೋ ಅವಳೇ ಸುಶೀಲಳು. ಅವಳನ್ನು ಭಂಗಗೊಳಿಸಲು ಯಾರಿಂದಲೂ ಸಾಧ್ಯವಿಲ್ಲ." ಎಂದಿದ್ದಿತು.

ಬ್ರಾಹ್ಮಣನು ಆ ಉತ್ತರವನ್ನು ಗುಣನಿಧಿಗೆತಂದುಕೊಟ್ಟನು. ಅದನ್ನು ಓದಿ ಗುಣನಿಧಿಗೆ ಬಹಳ ಸಂತೋಷವಾಯಿತು. ಅದೇ ಕನ್ಯೆಯನ್ನು ತಾನು ಮದುವೆಮಾಡಿಕೊಳ್ಳುವುದಾಗಿ ತಂದೆಗೆ ತಿಳಿಸಿದನು. ಅವನೂ ಮದುವೆಯ ಸಿದ್ಧತೆ ನಡೆಸಿದನು. ಶುಭದಿನ ಶುಭಮುಹೂರ್ತದಲ್ಲಿ ಮದುವೆಯೂ ಆಯಿತು. ಆ ದೇಶಕಾಲ ಪದ್ಧತಿಯಂತೆ ಗುಣನಿಧಿಯ ಪತ್ನಿಯು ಆಗ ತವರುಮನೆಯಲ್ಲಿ ಉಳಿದಳು. ಗುಣನಿಧಿಯು ತನ್ನ ಊರಿಗೆ ಹೊರಟುಬಂದನು. ಆದರೆ ತನ್ನ ಪತ್ನಿಯ ಗುಣಶೀಲಗಳನ್ನು ಪರೀಕ್ಷಿಸಬೇಕೆಂಬ ಇಚ್ಛೆಯಿಂದ ಅವನು ಒಬ್ಬ ಭಿಕ್ಷುಕನ ವೇಷಹಾಕಿಕೊಂಡು ತನ್ನ ಹೆಂಡತಿಯ ಊರಿಗೆ ಹೋದನು. ಅಲ್ಲಿ ತನ್ನ ಮಾವನಅಂಗಡಿಗೆ ಹೋಗಿ ಭಿಕ್ಷೆಕೇಳುತ್ತ ಕುಳಿತನು. ವರ್ತಕನು ಬೇರೆ ಕೆಲಸದಲ್ಲಿದ್ದುದರಿಂದ ಬೇಗನೇ ಭಿಕ್ಷೆ ನೀಡಲಿಲ್ಲ. ಅದಕ್ಕೆ ಸ್ವಲ್ಪ ಸಮಯವೂ ಹಿಡಿಯಿತು. ಆ ಕಾಲದಲ್ಲಿ ವ್ಯಾಪಾರಿ ಒಂದು ಹುಂಡಿ ವ್ಯಾಪಾರ ಮಾಡಿದನು. ಮತ್ತು ಅದರಿಂದ ಅವನಿಗೆ ಎಂದಿಗಿಂತ ಅತಿಶಯ ಲಾಭ ದೊರೆಯಿತು, ಆಗ ಈ ಭಿಕ್ಷುಕನು ಬಂದು ತನ್ನ ಅಂಗಡಿಯಲ್ಲಿ ಕುಳಿತಿದ್ದುದರಿಂದಲೇ ತನಗೆ ಅಷ್ಟುಲಾಭವಾಯಿತೆಂದು ಆ ವ್ಯಾಪಾರಿಯು ತಿಳಿದುಕೊಂಡನು. ಅವನೊಬ್ಬ ಮಹಾತ್ಮನಿರಬೇಕೆಂದೂ ಅವನು ಭಾವಿಸಿದನು. ಮತ್ತು ಆ ಭಿಕ್ಷುಕ ವೃತ್ತಿಮಾಡಿ ಜೀವಿಸುವುದರ ಬದಲು ತನ್ನಲ್ಲೇ ಇರಬೇಕೆಂದೂ, ಇದ್ದರೆ ತಾನು ಕೈತುಂಬ ಸಂಬಳ ಕೊಡುವುದಾಗಿಯೂ ಹೇಳಿದನು. ಭಿಕ್ಷುಕನ ವೇಷದಾರಿಯಾದ ಅವನು ಅದಕ್ಕೆ ಸಮ್ಮತಿಸಿದನು. ಅವನು ಪ್ರಾಮಾಣಿಕನಿದ್ದು ಅಂಗಡಿಯ ಲೆಕ್ಕಪತ್ರಗಳನ್ನೆಲ್ಲ ಸರಿಯಾಗಿ ಇಡತೊಡಗಿದನು. ಆದರಿಂದ ಆ ವ್ಯಾಪಾರಿಗೆ ಲಾಭವೇ ಹೆಚ್ಚಾದಂತೆ ತೋರಿತು. ಆ ಕೆಲಸದವನ ಮೇಲೆ ಬಹಳ ಪ್ರೀತಿಯೂ ಆಯಿತು. ಅವನು ವರ್ತಕನ ಹೆಂಡತಿ ಮತ್ತು ಮಗಳ ಪ್ರೀತಿ ವಿಶ್ವಾಸಗಳಿಗೂ ಪಾತ್ರನಾದನು.

ಹೀಗೆ ಇರಲು ಒಂದುದಿನ ಪರಊರಿನ ಶ್ರೀಮಂತ ವ್ಯಾಪಾರಿಯೊಬ್ಬನು ಆ ನಗರಕ್ಕೆ ಬಂದನು. ಇದೇವರ್ತಕನ ಅಂಗಡಿಯಲ್ಲಿ ಅವನ ವ್ಯಾಪಾರ. ಆದುದರಿಂದ ಅವನನ್ನು ತನ್ನಮನೆಗೆ ಊಟಕ್ಕೆ ಕರೆದನು. ಗುಣನಿಧಿಯ ಹೆಂಡತಿಯೇ ಅವರಿಗೆಲ್ಲ ಆ ಊಟವಿಕ್ಕಿದಳು. ಆಗ ಆ ಪರವೂರಿನ ವರ್ತಕನ ದೃಷ್ಟಿ ಗುಣನಿಧಿಯ ಹೆಂಡತಿಯಮೇಲೆ ಬಿತ್ತು. ಅವಳ ಲಾವಣ್ಯಗಳಿಗೆ ಅವನು

ಮನಸೋತು ಕಾಮಾತುರನಾದ. ಊಟ ಉಪಚಾರಗಳೆಲ್ಲ ಆದ ಮೇಲೆ ಅವನು ಗುಣನಿಧಿಯನ್ನು ಹತ್ತಿರ ಕರೆದು "ನೀವು ಈ ಮನೆಯವರೋ? ಕೆಲಸಕ್ಕಿರುವ ನೌಕರರೋ ?" ಎಂದು ಪ್ರಶ್ನಿಸಿದನು. ನೌಕರದಾರನೆಂದು ಗೊತ್ತಾದ ಮೇಲೆ ಆ ಶ್ರೀಮಂತನು "ಈ ವ್ಯಾಪಾರಿಯ ಹುಡುಗಿ ಬಹಳ ರೂಪವಂತೆ ಇದ್ದಾಳೆ. ಅವಳಮೇಲೆ ನನಗೆ ಮೋಹವಾಗಿದೆ. ಒಂದುರಾತ್ರಿ ಅವಳೊಡನೆ ಸುಖಪಡಲು ಇಚ್ಛೆಯಾಗಿದೆ ಅವಳು ಬೇಡಿದಷ್ಟು ಹಣವನ್ನು ನಾನು ಕೊಡುತ್ತೇನೆ. ನಿನಗೂ ತುಂಬಾ ಉಡುಗೊರೆ ಕೊಡುತ್ತೇನೆ" ಎಂದನು. ಗುಣನಿಧಿಯು ಅದಕ್ಕೊಪ್ಪಿ ತನ್ನ ಆತ್ತೆಯಿದ್ದಲ್ಲಿ ಬಂದು ಗುಟ್ಟಾಗಿ ಅವಳೊಡನೆ ಮಾತನಾಡತೊಡಗಿದನು."ಅವನು ಶ್ರೀಮಂತನು. ಇದಕ್ಕಾಗಿ ಬೇಕಾದಷ್ಟು ಹಣಕೊಡುತ್ತಾನೆ. ನೀವೂ ಶ್ರೀಮಂತರಾಗುತ್ತೀರಿ. ಇದುತಪ್ಪಲ್ಲ ದೊಡ್ಡದೊಡ್ಡ ಮನೆತನದ ಸ್ತ್ರೀಯರೂ ಒಮ್ಮೊಮ್ಮೆ ಈ ರೀತಿ ಮಾಡುತ್ತಾರೆ" ಎಂದು ಅವಳ ಕಿವಿವೂದಿದನು. ದ್ರವ್ಯದ ಆಶೆಯಿಂದ ಆ ವರ್ತಕನ ಹೆಂಡತಿಯು ಒಪ್ಪಿ ತನ್ನ ಮಗಳಿದ್ದಲ್ಲಿಗೆ ಬಂದು ಈ ವಿಷಯವನ್ನು ಸೂಚಿಸಿದಳು. "ನೀನು ಇದಕ್ಕೆ ಒಪ್ಪು. ನಿನ್ನಿಂದ ನಾವು ಭಾಗ್ಯವಂತರಾಗುತ್ತೇವೆ. ಆದರಲ್ಲಿ ಅರ್ದಾಂಶ ಹಣವನ್ನು ನೀನೇತೆಗೆದುಕೋ. ನಿನ್ನನ್ನು ಯಾರೂ ನೋಡುವುದಿಲ್ಲ. ಯಾರಿಗೂ ಇದು ಗೊತ್ತಾಗುವದಿಲ್ಲ" ಎಂದು ಹೇಳಿದಳು.

ತಾಯಿಯ ಮಾತುಕೇಳಿ ಮಗಳು ಆಶ್ಚರ್ಯಚಕಿತಳಾದಳು. ಹುಟ್ಟಿದ ಕೂಡಲೇ ನೀನು ನನ್ನನ್ನು ಕೊಲ್ಲಬಹುದಿತ್ತಲ್ಲ! ಲಗ್ನವಾದಮೇಲೆ ಗಂಡನ ಮನೆಗೂ ಕಳಿಸಬಹುದಿತ್ತು. ಈಗ ನನ್ನಿಂದ ಇಂತಹ ದುರಾಚಾರವನ್ನು ಮಾಡಿಸಲು ಯತ್ನಿಸುತ್ತಿದ್ದಿಯಲ್ಲ! ಎಂದು ತಿರಸ್ಕರಿಸತೊಡಗಿದಳು. ಆದರೆ ತಾಯಿ ಕೇಳದೇ ಇದ್ದುದರಿಂದ ಉಪಾಯವಿಲ್ಲದೆ ಒಪ್ಪಿಕೊಂಡಳು. ತಾನು ಶ್ರೀಮಂತನ ಕೋಣೆಗೆ ಹೋಗುವುದಿಲ್ಲವೆಂದೂ ಅವನೇ ತನ್ನಸ್ಥಳಕ್ಕೆ ಬರಬೇಕೆಂದೂ ಹೇಳಿದಳು. ತಾಯಿಯು ಇದನ್ನು ಗುಣನಿಧಿಗೆ ತಿಳಿಸಿದಳು. ಅವನ ಸೂಚನೆಯಂತೆ ಆ ಶ್ರೀಮಂತ ವರ್ತಕನು ಸುಮ್ಮನೆ ಇದ್ದಲ್ಲಿಗೆ ತೆರಳಿದನು. ಆಗ ಅವಳು ನಗುತ್ತ ಅವನನ್ನು ಸ್ವಾಗತಿಸಿ ಅವನಿಗೆ ತಿನ್ನಲು ಮಿಠಾಯಿಗಳನ್ನು ಕೊಟ್ಟಳು. ಆ ಮೇಲೆ ಮದ್ಯವನ್ನು ಕುಡಿಯಲು ಕೊಟ್ಟಳು. ಮಿಠಾಯಿಯಲ್ಲಿ ಎಚ್ಚರ ತಪ್ಪುವ ಔಷಧಗಳನ್ನು ಹಾಕಿದ್ದರಿಂದ

ಅದನ್ನು ತಿಂದ ಸ್ವಲ್ಪ ಹೊತ್ತಿನಲ್ಲೇ ಆ ವರ್ತಕನು ನಿದ್ದೆ ಹೋದನು. ಅವಳು ಬೇರೆಕಡೆ ಹೊರಟು ಹೋದಳು.

ಬೆಳಗಾದಮೇಲೆ ಆ ವರ್ತಕನು ಗುಣನಿಧಿಯನ್ನು ಕರೆಸಿ ರಾತ್ರಿನಡೆದ ಸಂಗತಿಯನ್ನು ಹೇಳಿದನು. ನನಗೆ ಆ ಮಿಠಾಯಿ ತಿನ್ನಿಸಿ ಹೋದಳು. ಅವಳನ್ನು ಮುಟ್ಟುವುದೇ ನನ್ನಿಂದಾಗಲಿಲ್ಲ. ಆದರೆ ಅವಳಂತಹ ರೂಪವತಿಯೊಡನೆ ಒಮ್ಮೆಯಾದರೂ ಭೋಗಿಸದ ಈ ಜೀವ ವ್ಯರ್ಥವೇ ಸರಿ. ಆದುದರಿಂದ ನೀನು ಇನ್ನೊಮ್ಮೆ ಪ್ರಯತ್ನವಾಡಿ ನೋಡು. ಇನ್ನೂ ನಿನಗೆ ಅಮೂಲ್ಯ ಒಡವೆಗಳನ್ನು ಕೊಡುತ್ತೇನೆ" ಎಂದು ಆಶೆ ತೋರಿಸಿದನು ಗುಣನಿಧಿಯು ಪುನಃ ತನ್ನ ಅತ್ತೆಯನ್ನು ಕರೆದು ನಡೆದ ಸಮಾಚಾರವನ್ನೆಲ್ಲ ಹೇಳಿ ಇನ್ನೊಮ್ಮೆ ಆ ಕಾಮುನರಗಿಣಿಯನ್ನು ವರ್ತಕನೊಡನೆ ಕೂಡಿಸಬೇಕೆಂದು ನುಡಿದನು. ಅವಳು ಆದಕ್ಕೊಪ್ಪಿ ತನ್ನಮಗಳನ್ನು ಒಪ್ಪಿಸುತ್ತೇನೆಂದು ನುಡಿದಳು. ಮತ್ತು ಅದರಂತೆ ಆ ರಾತ್ರಿ ವರ್ತಕನು ಅವರ ಮನೆಗೆ ಹೋದನು. ಆಗ ಅವಳು ಅತ್ಯಾದರದಿಂದ ಅವನನ್ನು ಸ್ವಾಗತಿಸಿದಳು. ಅವನೊಡನೆ ನಗುತ್ತ ಮಾತನಾಡುತ್ತ "ವೊನ್ನೆ ನೀವು ಬೇಗನೆ ನಿದ್ದೆಮಾಡಿದಿರಿ. ಮದ್ಯಪಾನದಿಂದ ಅಷ್ಟು ಅಮಲೇರುತ್ತಿದೆ ಎಂದು ನಾನು ತಿಳಿದಿದ್ದಿಲ್ಲ. ನನ್ನ ಆಶೆಯು ಈಡೇರಲಿಲ್ಲ. ಇಂದುಮಾತ್ರ ಹಾಗೆ ಮಾಡಬೇಡಿರಿ. ಬೆಳಗಾಗುವವರೆಗೂ ನಿಮ್ಮ ಕಾಮಾತುರವನ್ನು ಪರಿಹರಿಸಿಕೊಳ್ಳಿರಿ" ಎಂದು ನುಡಿದಳು. ಮತ್ತು ಗುಡುಗುಡಿಯನ್ನು ಸೇದಲು ಕೊಟ್ಟಳು. ವರ್ತಕನು ವೀಳ್ಯತಿಂದಕೂಡಲೆ ಅವನಿಗೆ ನಿದ್ದೆಬಂದಿತು. ಆಗ ಅವಳು ಅಲ್ಲಿಂದ ಎದ್ದು ಹೋದಳು. ಅಪಾರ ಧನಕನಕವನ್ನು ಅವಳಿಗೆ ಕೊಟ್ಟು ಕಳೆದುಕೊಂಡ ಆವರ್ತಕನು ಬೆಳಗಾದ ಮೇಲೆ ಯಾರಿಗೂ ಹೇಳದೆ ಆ ನಗರದಿಂದ ಹೊರಟುಹೋದನು.

ಇನ್ನೊಂದುದಿನ ಗುಣನಿಧಿಯು ಅತ್ತೆಯಿದ್ದಲ್ಲಿ ತೆರಳಿ "ನಿಮಗೆ ನಾನು ಅಪಾರ ಸಂಪತ್ತನ್ನು ಕೊಡಿಸಿದೆ. ಆ ಶ್ರೀಮಂತನಾದ ವರ್ತಕನು ದ್ರವ್ಯಕೊಟ್ಟನು ಹೊರತು ನಿಮ್ಮ ಮಗಳು ಅವನ ಆ ಇಚ್ಛೆನುಕೂಲಳಾಗಿಲ್ಲ. ಈಗ ನನ್ನ ಮಾತನ್ನಾದರೂ ಅವಳು ಕೇಳಬೇಕು. ನಿಮಗೆ ನಾನೂ ಉಪಕಾರ ಮಾಡಿರುವದರಿಂದ ನನ್ನೊಡನೆ ಅವಳು ಒಂದುರಾತ್ರಿಕಳೆಯಬೇಕು. ಇಲ್ಲದಿದ್ದರೆ ನಾನು ನಿಮ್ಮಲ್ಲಿಂದ ಹೊರಟು ಹೋಗುತ್ತೇನೆ" ಎಂದನು. ಅದನ್ನು

ಕೇಳಿದ ಆ ಸ್ತ್ರೀಯು ಈ ಭೃತ್ಯನಿಂದ ತಮಗೆ ಅಪಾರ ಸಂಪಾದನೆಯಾಯಿತು ಎಂದು ನೆನಸಿ ಅದಕ್ಕೂ ಒಪ್ಪಿದಳು. ಮತ್ತು ತನ್ನ ಮಗಳನ್ನು ಏಕಾಂತಕ್ಕೆ ಕರೆದು ಅದನ್ನು ತಿಳಿಸಿದಳು. ಆದರೆ ಈಗ ಅವಳು ಸಮ್ಮತಿಸಲಿಲ್ಲ. ನಾನು ಭೃತ್ಯನ ಸ್ಪರ್ಶಮಾಡಲಾರೆನೆಂದಳು. ದುರಾಚಾರಕ್ಕೆ ತನ್ನನ್ನು ಪ್ರೇರೇಪಿಸುತ್ತಿರುವ ತಾಯಿಯನ್ನು ಜರೆದಳು. ಅಲ್ಲದೆ ತಾಯಿಯು ಒತ್ತಾಯ ಮಾಡಿದ್ದೇ ಆದರೆ ರಾಜನಕಡೆಗೆ ತೆರಳುವುದಾಗಿ ಬೆದರಿಕೆ ಹಾಕಿದಳು. ಅದನ್ನು ಕೇಳಿ ತಾಯಿ ಹೆಚ್ಚುಒತ್ತಾಯ ಮಾಡಲಿಲ್ಲ. ಗುಣನಿಧಿಯು ಅಂದೇ ರಾತ್ರಿಅಲ್ಲಿಂದ ಹೊರಟುಹೋದನು.

ಆಮೇಲೆ ತನ್ನ ಊರಿಗೆ ಬಂದ ಗುಣನಿಧಿಯು ತನ್ನ ನಿಜ ವೇಷವನ್ನು ಧರಿಸಿ ವೈಭವದಿಂದ ಮಾವನ ಮನೆಗೆ ತೆರಳಿದನು. ಅಳಿಯನಿಗೆ ಅತ್ತೆ ಮಾವ ಮಾನಮರ್ಯಾದೆಯನ್ನು ಮಾಡಿದರು. ಹೆಂಡತಿಯು ಅತ್ಯಂತ ಪ್ರೇಮಾತಿಶಯದಿಂದ ನಡೆದುಕೊಂಡಳು. ಆಗ ಗುಣನಿಧಿಯು ತಾನು ಹೂಡಿದ ಆಟವನ್ನೆಲ್ಲ ತನ್ನ ಪತ್ನಿಗೆ ತಿಳಿಸಿದನು. ಮತ್ತು ಅವಳ ಸದಾಚಾರ ಸಂಪನ್ನತೆಗಾಗಿ ಅಮಿತ ಆನಂದವನ್ನು ವ್ಯಕ್ತಗೊಳಿಸಿದನು. ಅದು ಕೊನೆಗೆ ಅತ್ತೆಮಾವಂದಿರಿಗೂ ಗೊತ್ತಾಯಿತು. ಅವರೂ ಪ್ರಸನ್ನರಾದರು. ಕೆಲವು ದಿವಸಗಳಮೇಲೆ ಅವನು ತನ್ನ ಪತ್ನಿಯನ್ನು ಕರೆದುಕೊಂಡು ತನ್ನ ಊರಿಗೆ ಹೋದನು.

ಮೋಹಿನಿ,ಸನ್ಮತಿಯು ತನ್ನ ಧೈರ್ಯ ಮತ್ತು ಚಾತುರ್ಯದಿಂದ ಸಂಪತ್ತನ್ನು ಗಳಿಸಿದಳು. ಆದರೆ ಶೀಲಭ್ರಷ್ಟಳಾಗಲಿಲ್ಲ. ಅದರಿಂದ ಕೊನೆಗೆ ಅವಳಿಗೆ ಸುಖವೂ ಲಭಿಸಿತು. ಅವಳಂತೆ ನೀನಾದರೂ ಪತಿವ್ರತೆಯಾಗಿದ್ದರೆ ಸುಖದೊರೆಯುವುದರಲ್ಲಿ ಸಂದೇಹವಿಲ್ಲ" ಎಂದನು. ಆಗ ಮೋಹಿನಿಯು "ವೈದ್ಯವರನೇ ಸನ್ಮತಿಗೆ ಭವಿಷ್ಯದಮೇಲೆ ಆಶೆಯಿತ್ತು. ಮುಂದಾದರೂ ತನ್ನಪತಿಯು ಬಂದು ತನ್ನನ್ನು ಕರೆದೊಯ್ದು ಸುಖಪಡಿಸ ಬಹುದೆಂದು ತಿಳಿದಿದ್ದಳು. ಆದರೆ ನಾನು ನಿರಾಶಳಾಗಿದ್ದೆನಲ್ಲವೇ?" ಎಂದು ಹೇಳಿದಳು. ಅದು ಅವರ ಅದೃಷ್ಟ ಎಂದು ಮೋಹನದಾಸನು ಇನ್ನೊಂದು ಉದಾಹರಣೆಯನ್ನು ಕೊಟ್ಟನು.

---

# ೨೯. ದೇವದತ್ತನ ಕತೆ

ಪೂರ್ವ ಕಾಲದಲ್ಲಿ ಕಾಶಿನಗರದಲ್ಲಿ ದೇವದತ್ತನೆಂಬ ಒಬ್ಬ ರಾಜನಿ ನಿದ್ದ. ಅವನಿಗೆ ಅಸಂಖ್ಯರಾಣಿಯರಿದ್ದರು. ಆದರೆ ಒಬ್ಬರಲ್ಲೂ ಪುತ್ರ ಸಂತಾನ ವಾಗಲಿಲ್ಲ. ಆದರಿಂದ ಅವನು ತುಂಬಾ ದುಃಖಿತನಾದನು. ಒಂದು ದಿನ ಪ್ರಸಿದ್ಧ ಜೋತಿಷ್ಯನೊಬ್ಬನು ಆ ನಗರಕ್ಕೆ ಬಂದಿರುವನೆಂದು ಕೇಳಿ ರಾಜನು ತನ್ನ ಆಸ್ಥಾನಕ್ಕೆ ಕರೆಸಿ ತನ್ನ ಅದೃಷ್ಟ ಏನಿದೆಯೆಂದು ಪ್ರಶ್ನಿಸಿದನು. ಆಗ ಜೋತಿಷ್ಯನು "ಮಹಾರಾಜ ನಿಮಗೆ ಇನ್ನು ಒಂದು ವರುಷ ದೊಳಗೆ ಪುತ್ರ ಸಂತಾನ ವಾಗುತ್ತದೆ. ಆದರೆ ಅವನು ಅಲ್ಪವಯಿ. ಹುಲಿಯಿಂದ ಮರಣ ಒದ ಗುವ ಸಂಭವವಿದೆ. ಒಂದು ವೇಳೆ ಆ ವಿಪತ್ತಿನಿಂದ ಪಾರಾದರೆ ಮುಂದೆ ಶುಭ ವಾಗುತ್ತದೆ" ಎಂದು ನುಡಿದನು. ಪುತ್ರ ಸಂತಾನವಾಗುತ್ತದೆಂಬ ಸಂತೋಷ ದಲ್ಲಿ ಉಳಿದ ವಿಚಾರಗಳನ್ನು ಅರಸನು ಮರೆತು ನಲಿದನು.

ಅದರಂತೆ ಅವನ ರಾಣಿಯೊಬ್ಬಳು ಗರ್ಭವತಿಯಾದಳು. ನವಮಾಸ ಕಳೆದಮೇಲೆ ಗಂಡು ಮಗನನ್ನು ಹಡೆದಳು. ರಾಜನು ಆ ಮೇಲೆ ಮಗುವಿನ ರಕ್ಷಣೆಗಾಗಿ ಬಹಳ ಮುಂಜಾಗ್ರತೆ ವಹಿಸಿದನು. ಅವನಿಗೆ ನಾಲ್ಕೈದು ವರುಷ ಗಳು ತುಂಬಿದ ಮೇಲೆ ಗುಡ್ಡದ ಮೇಲಿರುವ ಒಂದು ಕೋಟೆಯಲ್ಲಿ ಅವನನ್ನಿ ರಿಸಿದನು. ಅಲ್ಲೇ ಪಹರೆಯರನ್ನು ನೇಮಿಸಿ ಬಾಲಕನ ಆರೈಕೆ ಮಾಡತೊಡಗಿ ದನು. ಆದರೆ ವಿಧಿವಿಲಾಸವನ್ನು ತಪ್ಪಿಸುವವರು ಯಾರು? ಒಂದು ದಿನ ಬೇಟೆ ಗಾರರು ಆ ಗುಡ್ಡದಲ್ಲಿ ಬೇಟೆಯಾಡತೊಡಗಿದರು. ಒಂದು ಹುಲಿಅವರ ಕಣ್ಣು ತಪ್ಪಿಸಿ -ಕೋಟೆಯ ಕಡೆ ಓಡಿತು. ಬೇಟೆಕಾರರು ಬೆನ್ನಟ್ಟುತ್ತಾ ಬಂದರು. ಹುಲಿಯು ಕೋಟೆಯ ಕಾವಲುಗಾರರನ್ನು ಗಾಯಗೊಳಿಸಿ ಒಳಗೆ ನುಗ್ಗಿತು. ಚೀರಾಟ ಕೇಳಿ ಆ ಹುಡಗನು ಹೊರಗೆ ಓಡಿ ಬಂದನು. ಹುಲಿಯು ಅವನ ಮೇಲೆ ಕೂಡಾ ಹಾರಿತು. ಅಷ್ಟರಲ್ಲಿ ಅಲ್ಲೇ ಇದ್ದ ಬೇಟೆಗಾರನೊಬ್ಬನು ಈಟಿಯಿಂದ ತಿವಿಯಲು ಹುಲಿಯು ಸತ್ತು ಬಿದ್ದಿತು. ಆದರೆ ಆ ಹುಡುಗನ ಮೇಲೆ ಹಾರಿದಾಗ ಅದರ ಕೈ ಉಗುರುಗಳು ಅವನ ಮೈಯಲ್ಲಿ ನಟ್ಟಿದ್ದವು. ಬೇಟೆಗಾರರು ಬಂದು ಆ ಹುಡುಗನನ್ನು ಎತ್ತಿಕೊಂಡು ಹೋಗಿ ಔಷದೋಪ ಛಾರ ಮಾಡಿದರು.

ಆದರೆ ಕಾಡಿನಲ್ಲಿ ಅವರೆಲ್ಲರೂ ಕುಳಿತು ಊಟಮಾಡುತ್ತಿದ್ದಾಗ ಹತ್ತಿರದಲ್ಲೇ ಒಂದು ಸಿಂಹ ಗರ್ಜಿಸಿದುದರಿಂದ ಆ ಬೇಟೆಗಾರರೆಲ್ಲ ಹೆದರಿ ಓಡಿಹೋದರು. ಆ ಬಾಲಕನು ಅಲ್ಲೇ ಉಳಿದನು. ಆದರೆ ಸಿಂಹವು ಅವನಿದ್ದಲ್ಲಿ ಬರಲಿಲ್ಲ. ಆದುದರಿಂದ ರಾತ್ರಿ ಅವನು ಅಲ್ಲೇ ನಿದ್ದೆ ಹೋದನು. ಬೆಳಗಾದ ಮೇಲೆ ಆ ಕಾಡಿನಲ್ಲೇ ಅಲೆಯತೊಡಗಿದನು. ಹಾಗೆ ಅಲೆಯುತ್ತ ಬಂದಾಗ ಒಬ್ಬ ಸನ್ಯಾಸಿಯು ಒಂದು ಮರದ ಕೆಳಗೆ ಕುಳಿತಿದ್ದುದು ಅವನಿಗೆ ಕಾಣಿಸಿತು. ಬಾಲಕನು ಅವನ ಸಮೀಪ ತೆರಳಿ ಮಾತನಾಡಿಸಿದನು. ಆ ಸನ್ಯಾಸಿಗೆ ಆ ಬಾಲಕನ ಮೇಲೆ ದಯೆ ಹುಟ್ಟಿತು. ಅವನಿಗೆ ತಿನ್ನಲು ಹಣ್ಣು ಹಂಪಲುಗಳನ್ನು ಕೊಟ್ಟನು. ಕೆಲವು ದಿನಗಳ ವರೆಗೆ ಅವನು ಅಲ್ಲೇ ಉಳಿದನು. ಆಗ ಅವನು ರಾಜಪುತ್ರನೆಂದು ಆ ಸನ್ಯಾಸಿಗೆ ತಿಳಿಯಿತು. ಆಗ ಅವನು ಆ ಬಾಲಕನ ಮೇಲೆ ಸಾಹಾನುಭೂತಿ ತೋರಿ ತನ್ನಲ್ಲಿದ್ದ ಅಮೂಲ್ಯವಾದ ಕೆಲವು ಮುತ್ತು ರತ್ನಗಳನ್ನು ಅವನಿಗೆ ಕೊಟ್ಟುಕಳಿಸಿದನು.

ಆ ಸನ್ಯಾಸಿಯು ಹೇಳಿದ ದಾರಿಯನ್ನು ಹಿಡಿದು ಬಾಲಕನು ನಡೆದು ಹೋದನು. ಸಂಜೆಯಾಗುವ ಹೊತ್ತಿಗೆ ಅವನೊಂದು ಊರು ಸೇರಿದನು. ದುರದೃಷ್ಟವಶಾತ್ ಆ ಊರಿನವರೆಲ್ಲರೂ ಕಳ್ಳರೇ ಆಗಿದ್ದರು. ಅವರು ಬಾಲಕನಲ್ಲಿದ್ದ ಮುತ್ತುರತ್ನಗಳನ್ನೆಲ್ಲ ಅಪಹರಿಸಿದರು. ಆದರೆ ಅವನನ್ನು ಕೊಲ್ಲಲಿಲ್ಲ. ಅವನನ್ನು ತಮ್ಮ ಥಂಗಡದೊಳಗೆ ಸೇರಿಸಿಕೊಂಡರು. ಕಳ್ಳತನ ಮತ್ತು ದರೋಡೆ ಮಾಡುತ್ತಿದ್ದಾಗಲೂ ಅವನನ್ನು ತಮ್ಮೊಂದಿಗೆ ಕರೆದೊಯ್ಯುತ್ತಿದ್ದರು. ಹೀಗೆ ಅವರೊಂದು ಸಲ ಒಂದು ಊರನ್ನು ಮುತ್ತಿ ದರೋಡೆ ಮಾಡಲೆತ್ನಿಸಿದಾಗ ಆ ಊರ ಜನರೆಲ್ಲರೂ ಒಟ್ಟುಗೂಡಿ ಅನೇಕ ಕಳ್ಳರನ್ನು ಹಿಡಿದು ಕಟ್ಟಿಹಾಕಿದರು. ಆ ಬಾಲಕನೂ ಸಿಕ್ಕಿಬಿದ್ದನು. ಮರುದಿನ ಊರವರು ಆ ಕಳ್ಳರನ್ನೆಲ್ಲ ರಾಜನಿದ್ದಲ್ಲಿ ಕರೆದೊಯ್ದರು. ಅವರೆಲ್ಲರಿಗೂ ಮರಣಶಿಕ್ಷೆಯನ್ನು ವಿಧಿಸಲಾಯಿತು. ಆಗ ಆ ರಾಜನು ಕಳ್ಳರನ್ನೆಲ್ಲ ನೋಡಲು ಬಂದನು ಅವರಲ್ಲಿ ಈ ಬಾಲಕನೂ ಇದ್ದುದನ್ನು ಕಂಡು ರಾಜನಿಗೆ ಆಶ್ಚರ್ಯವಾಯಿತು. ಅಲ್ಲದೆ ಆ ಬಾಲಕನು ಸುಂದರನೂ ತೇಜಸ್ವಿಯೂ ಇದ್ದನು. ರಾಜನು ಅಂತಃಕರಣದಿಂದ ಅವನೊಡನೆ ಮಾತುಕತೆ ನಡೆಸಿದನು. ಆಗ ಅವನು ತನ್ನ ಮಗನೇ ಎಂದು ಅವನಿಗೆ ತಿಳಿದು ಅವನನ್ನು ಆಲಿಂಗಿಸಿಕೊಂಡನು.

ಮೋಹಿನೀ, ಪರಮಾತ್ಮನ ಲೀಲೆಯು ಅಗಾಧವಾದುದು. ಅವನು ಒಮ್ಮೆಲೇ ಎಂತಹ ಕಷ್ಟಗಳನ್ನೂ ನಿವಾರಿಸುತ್ತಾನೆ. ಸತ್ಯಾನ್ವೇಷಿಯೂ ನೀತಿ ಪ್ರೀತಿಯಿಂದ ನಡೆದುಕೊಳ್ಳುವನನ್ನು ಅವನು ಕೈಬಿಡಲಾರ. ಆದುದರಿಂದ ನೀನಾದರೂ ಅದರಂತೆ ವರ್ತಿಸಲು ನಿರ್ಧರಿಸು. ಕಾಮಾಧೀನರಾದರೆ ಸುಖ ಶಾಂತಿಯಿಲ್ಲ. ಆದರ ಬಗ್ಗೆ ನಿನಗೊಂದು ಕಥೆಯನ್ನು ಹೇಳುತ್ತೇನೆ ಎಂದು ಹೇಳತೊಡಗಿದನು.

——

## ೩೦. ರವಿವರ್ಮನ ಕಥೆ

ಪೂರ್ವಕಾಲದಲ್ಲಿ ಕಾಶ್ಮೀರಪುರದಲ್ಲಿ ಒಬ್ಬ ರಾಜನಿದ್ದನು. ಅವನಿಗೆ ರವಿವರ್ಮನೆಂಬ ಒಬ್ಬ ಮಗನಿದ್ದನು. ರವಿವರ್ಮನಿಗೆ ರಾಜನು ಬಾಲ್ಯದಲ್ಲಿ ಯೋಗ್ಯ ವಿದ್ಯಾಭ್ಯಾಸ ಮಾಡಿಸಿದನು. ಮತ್ತು ಅವನು ದೊಡ್ಡವನಾದಮೇಲೆ ಅವನಿಗೆ ಪಟ್ಟಕಟ್ಟಿ ತಾನು ದೈವಚಿಂತನೆಯಲ್ಲಿ ಕಾಲಕಳೆಯಲು ಅಪೇಕ್ಷಿಸಿದನು.

ಆದರೆ ಅಷ್ಟರಲ್ಲಿ ಅರ್ಜುನನೆಂಬ ಅರಸನು ತನ್ನ ನೆರೆರಾಜ್ಯಗಳನ್ನೆಲ್ಲ ಗೆದ್ದು ಕಾಶ್ಮೀರಪುರಕ್ಕೂ ನುಗ್ಗಿದನು. ಕೋಟೆಯ ಹೊರಗೆ ಅವನು ಡೇರೆ ಹೊಡೆದು ತನಗೆ ಚತುರ್ಥಾಂಶ ರಾಜ್ಯವನ್ನು ಕೊಟ್ಟರೆ ಸಂಧಿಗೆ ಸಿದ್ಧ; ಇಲ್ಲದಿದ್ದರೆ ಯುದ್ಧ ಎಂದು ರಾಜನಿಗೆ ಓಲೆಬರೆದು ಕಳಿಸಿದನು. ಅದನ್ನು ಓದಿ ರಾಜನು ಭಯಾತುರನಾದನು. ಏಕೆಂದರೆ ಅರ್ಜುನನು ಬಲಶಾಲಿ. ಯುದ್ಧವಾದರೆ ಜಯದೊರೆಯುವದೆಂದು ನಿಯಮವೇನೂ ಇಲ್ಲ. ಶರಣಾಗತನಾಗಲೂ ಅವನಿಗೆ ಇಷ್ಟವಿಲ್ಲ. ಆದುದರಿಂದ ಮುಂದೇನು ಮಾಡಬೇಕೆಂದು ತೋಚದೆ ಚಿಂತಾಕ್ರಾಂತನಾದನು. ಅದನ್ನು ರಾಣಿಯು ಕಂಡು ಅದರ ಕಾರಣವೇನೆಂದು ಕೇಳಿದಳು. ಆದರೆ ರಹಸ್ಯಸಂಗತಿಗಳನ್ನು ಸ್ತ್ರೀಯರ ಮುಂದೆ ಹೇಳಬಾರದೆಂಬ ಶಾಸ್ತ್ರಸಂಗತಿಯನ್ನು ಅವನು ಸ್ಮರಿಸಿಕೊಂಡು ಹೇಳಲಾರೆನೆಂದನು. ಸ್ವಸ್ತ್ರೀಬಂಧುಗಳೊಡನೆ ಹೇಳಿದರೆ ಆಪತ್ತು ಬರಲಾರದು ಎಂದು ಅವಳ ಹೇಳಿದರೂ ಅವನು ತನ್ನ ಮನಸ್ಸನ್ನು ಬದಲಿಸಲಿಲ್ಲ.

ಮರುದಿನ ರವಿವರ್ಮನು ರಾಜ ಸಭೆಯನ್ನು ಕರೆದು ರಾಜ್ಯಕ್ಕೆ ಬಂದ ಗಂಡಾಂತರವನ್ನು ನಿವೇದಿಸಿ ಮಂತ್ರಿಗಳೂ ಸೇನಾಪತಿಗಳೂ ಸರದಾರರೂ ತಂತಮ್ಮ ಅಭಿಪ್ರಾಯವನ್ನು ಕೊಡಬೇಕೆಂದು ಆಜ್ಞಾಪಿಸಿದನು. ಆಗ ಶರಣಾಗತರಾಗುವದೇ ಒಳ್ಳೇದೆಂದು ಒಬ್ಬಿಬ್ಬರು ಮಂತ್ರಿಗಳು ನುಡಿದರು. ವೈರಿಯು ಬಲಾಢ್ಯನಿರುವನು. ಈಗ ಇದಿರಿಸಿದರೆ ನಾಶನಿಶ್ಚಯು. ನದಿಯ ದಂಡೆಯಲ್ಲಿರುವ ದೊಡ್ಡ ಮರವನ್ನು ಪ್ರವಾಹವು ಬೇರುಸಹಿತ ಕಿತ್ತುಬಿಡುತ್ತದೆ. ಆದರೆ ನದಿ ದಂಡೆಯಲ್ಲಿರುವ ಹುಲ್ಲು ಮಾತ್ರ ನೀರು ಬಂದಾಗ ಬಗ್ಗಿ ಬಿಡುತ್ತದೆ. ನೀರು ಹೋದ ಮೇಲೆ ಮತ್ತೆ ತಲೆ ಎತ್ತುತ್ತದೆ. ಅದರಂತೆ ಈಗ ನಾವು ಸಂಧಿ ಮಾಡಿ ಕೊಳ್ಳೋಣ. ಆದರೆ ಒಳಗಿಂದೊಳಗೆ ಯುದ್ಧ ಸಿದ್ಧತೆ ಮಾಡೋಣ, ಸಂದರ್ಭ ಸಾಧಿಸಿ ಆ ಮೇಲೆ ನಾವು ವೈರಿಯ ಮೇಲೆ ಬಿದ್ದು ಅವರನ್ನು ಕೊನೆ ಗಾಣಿಸಬಹುದು. ಕಾಲಾನುಭಾಗದಲ್ಲಿ ವೈರಿಯು ಜರ್ಜಿತನಾಗಿ ಅಬಲನಾಗುವ ಸಂಭವವೂ ಇದೆ." ಎಂದವರು ಹೇಳಿದರು.

ಆದರೆ ಸೇನಾಪತಿಯು ಆ ಮಾತಿಗೊಪ್ಪಲಿಲ್ಲ. ಯುದ್ಧವನ್ನೆ ಮಾಡೋಣ ಎಂದು ಅವನು ಗರ್ಜಿಸಿದನು. ಶತ್ರುಗಳಿಗಿಂತ ನಮ್ಮ ಸೈನ್ಯವು ಶ್ರೇಷ್ಠವಿದೆ. ಸೈನ್ಯದಲ್ಲಿ ಸಮರ ಕುತೂಹಲವು ಇದೆ." ಎಂದವನು ಹೇಳಿದನು. ರಾಜಪುತ್ರನು ಅದೇ ಮಾತಿಗೆ ಬೆಂಬಲ ಕೊಟ್ಟನು. "ಕ್ಷತ್ರಿಯರಿಗೆ ಯುದ್ಧವೇ ಶ್ರೇಷ್ಠಕರವಾದುದು. ಜಯದೊರೆತರೆ ಕೀರ್ತಿ ಲಭಿಸುತ್ತದೆ. ಸತ್ತರೆ ವೀರಸ್ವರ್ಗವಿದೆ. ಶರಣಾಗತರಾದರೆ ಅಪಮಾನ. ಅಲ್ಲದೆ ವೈರಿಯು ಮರ್ಯಾದೆಯಿಂದ ನಡೆಸಿಕೊಳ್ಳುತ್ತಾನೆಂಬ ನಿಯಮವೇನೂ ಇಲ್ಲ. ನಮ್ಮ ನೆರಹೊರೆಯ ರಾಜರಿಗೂ ಓಲೆಗಳನ್ನು ಬರೆದು ಕಳಿಸೋಣ. ಅವರು ಸಹಾಯ ನೀಡದೇ ಇರಲಾರರು." ಎಂದು ನುಡಿದನು. ಸೈನಿಕರೂ ಉಳಿದವರೂ ಯುದ್ಧವಾಗಲೆಂದೇ ಜಯಜಯಕಾರಮಾಡಿದರು. ಯುದ್ಧಮಾಡುವದಾಗಿ ತಿಳಿಸಿದರು

ರವಿವರ್ಮನು ಮುದುಕನಾದರೂ ತರುಣರನ್ನು ಮೀರಿಸುವ ಉತ್ಸಾಹದಿಂದ ಯುದ್ಧಕ್ಕೆ ಅಣಿಯಾದನು. ಅನೇಕ ನೆರೆಹೊರೆಯ ರಾಜರೂ ಅವನಿಗೆ ಸಹಾಯವನ್ನು ಕಳಿಸಿದರು. ಅವನ ಸೈನಿಕರೂ ಅತ್ಯುತ್ಸಾಹದಿಂದ ಕಾದಿದರು. ಯುದ್ಧದಲ್ಲಿ ಅರ್ಜುನನ ಕೈಮೇಲಾಗುವ ಚಿಹ್ನವೇನೂ ಕಾಣಲಿಲ್ಲ. ಆಗ ಅವನು ಚಾಣಕ್ಯ ತಂತ್ರ ಹೂಡಿದನು ರವಿವರ್ಮನ ಮಂತ್ರಿಗಳಲ್ಲಿ ಒಬ್ಬನನ್ನು ಒಡೆ

ದನು. ಯುದ್ಧದಲ್ಲಿ ತಾನು ಗೆದ್ದರೆ ಅವನಿಗೆ ಚತುರ್ಥಾಂಶ ರಾಜ್ಯವನ್ನು ಕೊಡುವದಾಗಿ ಆಶೆ ತೋರಿಸಿದನು. ಆ ಮಂತ್ರಿಯು ಆ ರಾಜ್ಯಲೋಭಕ್ಕೆ ಒಳಗಾಗಿ ಹಾನಿಬಯಸಿದನು. ಆಹಾರದಲ್ಲಿ ವಿಷವನ್ನು ಬೆರಸಿದುದರಿಂದ ಅಂದುರಾತ್ರಿ ಸೈನಿಕರಲ್ಲಿ ಸಾವಿರಾರು ಜನರು ಮರಣಹೊಂದಿದರು. ಆದರಿಂದ ಸೈನ್ಯದಲ್ಲಿ ಹಾಹಾಕಾರ ಎದ್ದಿತು. ಆದೇಕಾಲದಲ್ಲಿ ಅರ್ಜುನನ ಸೈನ್ಯವೂ ನುಗ್ಗಿ ಬಂದಿತು.ಯುದ್ಧದ ಗತಿ ಬದಲಾಯಿತು. ರವಿವರ್ಮನು ತನ್ನ ಪತ್ನೀ ಪುತ್ರರೊಂದಿಗೆ ಕಳ್ಳದಾರಿಯಿಂದ ಕೋಟೆಯಿಂದ ಪಾರಾಗಿಹೋದನು.

ಅವರು ಒಂದು ಕಾಡುಸೇರಿದರು. ಆದರೆ ರಾತ್ರಿ ಕಳ್ಳರ ಗುಂಪು ಅವರನ್ನು ಮುತ್ತಿತು. ಮೈಮೇಲಿದ್ದ ಚಿನ್ನಾಭರಣಗಳನ್ನೆಲ್ಲ ಅವರು ತಾವಾಗಿಕೊಟ್ಟುದರಿಂದ ಕಳ್ಳರು ಅವರ ಪ್ರಾಣಕ್ಕೇನೂ ಅಪಾಯ ಮಾಡಲಿಲ್ಲ. ಅಲ್ಲಿಂದ ಆ ಮೂವರೂ ಅನೇಕ ದಿನಗಳವರೆಗೆ ತಿರುಗುತ್ತಬಂದು ನಗರವನ್ನು ಸೇರಿದರು.ಅಲ್ಲಿ ದಯಾವಂತನೂ ದಾನಶೂರನೂ ಆದ ಒಬ್ಬ ವ್ಯಾಪಾರಿಯಲ್ಲಿ ಆಶ್ರಯ ಪಡೆದರು. ತಾವೂ ವ್ಯಾಪಾರಿಗಳೆಂದು ಅವರು ಹೇಳಿಕೊಂಡರು. ಆದರೆ ವೃದ್ಧ ವ್ಯಾಪಾರಿ ಅವರ ಮಾತನ್ನು ನಂಬಲಿಲ್ಲ. ನಿಜಸಂಗತಿಯನ್ನು ತಿಳಿಸಬೇಕೆಂದು ಅವನು ಒತ್ತಾಯ ಪಡಿಸಿದುದರಿಂದ ರವಿವರ್ಮನು ಎಲ್ಲಸಂಗತಿಯನ್ನು ಹೇಳಿದನು. ಆಗ ಆ ವ್ಯಾಪಾರಿಯು ಕರುಣೆಪಟ್ಟು "ನೀವು ನನ್ನಲ್ಲೆ ಇರಿ" ಎಂದುಹೇಳಿ ಸಮಾಧಾಯಿಸಿ "ನಾನೂ ಬಹಳ ದುಃಖಕೊಳಗಾದವನು ನನ್ನ ಕಥೆಯನ್ನು ಕೇಳಿದರೆ ನೀವೂ ವ್ಯಸನಪಡದೇ ಇರಲಾರಿರಿ" ಎಂದನು. ಆಗ ಆ ಕಥೆಯನ್ನು ತಮಗೆ ಹೇಳಬೇಕೆಂದು ಆ ಮೂವರೂ ಒತ್ತಾಯ ಪಡಿಸಿದುದರಿಂದ ಆ ವ್ಯಾಪಾರಿಯು ಹೇಳತೊಡಗಿದನು.

---

## ೩೧. ಮುದುಕನ ಪ್ರೇಮ ಕತೆ

ಪ್ರಾಚೀನಕಾಲದಲ್ಲಿ ಕಾಶ್ಮೀರದಲ್ಲಿ ರುದ್ರಸೇನನು ಆಳುತ್ತಿದ್ದನಷ್ಟೆ! ನಾನೂ ಅದೇ ವಂಶಕ್ಕೆ ಸೇರಿದವನು. ನನ್ನ ತಂದೆಯು ರಾಜ್ಯಪರಿಪಾಲನೆ

ಮಾಡುತ್ತಿದ್ದುದನ್ನು ಕಂಡು ಅದೇಕಾಲದಲ್ಲಿ ದೇಶವಿದೇಶಗಳನ್ನು ಸಂಚರಿಸ ಬೇಕೆಂಬ ಆಶೆ ಉದಯಿಸಿತು. ತಂದೆಯ ಅನುಮತಿ ಪಡೆದು ಅಮಿತ ದ್ರವ್ಯ ವನ್ನು ಹಿಡಿದುಕೊಂಡು ನಾನು ಪ್ರಯಾಣ ಸನ್ನದ್ಧನಾದೆನು. ನನ್ನೊಂದಿಗೆ ಅನೇಕ ಸಿಪಾಯಿಗಳು ಇದ್ದರು. ನಾವು ಸಂಚರಿಸುತ್ತ ಒಂದು ರಾತ್ರಿ ರಸ್ತೆಯ ಪಕ್ಕದಲ್ಲಿ ಡೇರೆ ಹೊಡೆದೆವು. ಆದರೆ ದುರದೃಷ್ಟದಿಂದ ಅದೇ ರಾತ್ರಿ ಕಳ್ಳರು ನಮ್ಮನ್ನು ಮುತ್ತಿದರು. ನಾವು ಕಲಿತನದಿಂದ ಕಾದಿದರೂ ಫಲ ದೊರೆಯಲಿಲ್ಲ. ನನ್ನ ಅನೇಕ ಸಂಗಡಿಗರು ಪ್ರಾಣ ಕಳೆದುಕೊಂಡರು. ಕೆಲ ವರು ಓಡಿಹೋದರು. ನಾನೊಬ್ಬನೇ ಆ ಕಳ್ಳರ ಕೈಗೆ ಸಿಕ್ಕಿಬಿದ್ದೆ. ಆಗ ನಾನು ಇಂತಹ ಅರಸನ ಮಗನೆಂದು ಹೇಳಿದೆ. ಅವರು ಭಯಪಟ್ಟು ನನ್ನನ್ನು ಬಿಡುಗಡೆ ಮಾಡಬಹುದೆಂದು ನಾನು ಹಾಗೆ ಹೇಳಿದೆ. ಆದರೆ ಅದರಿಂದ ಇನ್ನಷ್ಟು ಕೆಟ್ಟ ಪರಿಣಾಮವೇ ಆಯಿತು. ರಾಜನು ತಮಗೆ ಅನಂತ ಕಷ್ಟ ಕೊಟ್ಟಿರುವದರಿಂದ ತಾವೂ ಅದರ ಮುಯ್ಯಿತೀರಿಸಿಕೊಳ್ಳುವೆ ಎಂದರು. ಆ ಮೇಲೆ ನನ್ನ ಕೈಕಾಲು ಕಟ್ಟಿ ತಮ್ಮ ಕೇಂದ್ರಕ್ಕೆ ಕರೆದೊಯ್ದರು.

ನನ್ನನ್ನು ಒಂದು ಕೋಣೆಯಲ್ಲಿ ಬಂಧನದಲ್ಲಿರಿಸಿದರು. ಆಗಾಗ ಆ ಕಳ್ಳರ ಗುಂಪಿನ ಯಜಮಾನನ ಹೆಂಡತಿಯು ಆಕಸ್ಮಾತ್ ನನ್ನನ್ನು ನೋಡಿ ದಳು. ನನ್ನ ರೂಪವನ್ನೂ ಯೌವನವನ್ನೂ ನೋಡಿ ಅವಳು ಕಾಮಾತುರ ಳಾದಳು. ಕಳ್ಳರು ಹೊರಟು ಹೋದಾಗಲೆಲ್ಲ ಅವಳು ಸಂದರ್ಭಸಾಧಿಸಿ ನನ್ನನ್ನು ಕಾಣುತ್ತಿದ್ದಳು. ಆಗಾಗ ನೇತ್ರ ಸಂಕೇತ ಮಾಡತೊಡಗಿದಳು. ನಾನೂ ಅವಳು ಮಾಡಿದಂತೆಯೇ ಮಾಡಿದೆ. ಒಂದುದಿನ ಅವಳು ನನ್ನ ಸಮೀಪಬಂದು ತನ್ನ ಮನೋಭಿಲಾಷೆಯನ್ನು ಪೂರೈಸುವುದಾದರೆ ಬಂಧ ಮುಕ್ತ ಮಾಡುವುದಾಗಿ ನುಡಿದಳು. ನಾನು ಪ್ರಾಣದಾಸೆಯಿಂದ ಒಪ್ಪಿ ಕೊಂಡೆ. ಅವಳು ಅದರಂತೆ ನನ್ನ ಸೆರೆ ಬಿಡಿಸಿದಳು. ಮತ್ತು ನಾನೂ ಅವಳ ಮನಸ್ಸನ್ನು ಹರುಷಗೊಳಿಸಿದೆ. ಆ ಮೇಲೆ ನಾನು ಅಂದೇರಾತ್ರಿ ಕಣ್ಣು ತಪ್ಪಿ ಸಿಕೊಂಡು ಪಾರಾಗಿ ಹೋದೆ.

ಅನೇಕ ದಿನಗಳವರೆಗೆ ಅಲೆದ ಮೇಲೆ ನಾನು ಒಂದು ನಗರವನ್ನು ಸೇರಿದೆ. ಬಿಸಿಲಿಗೆ ಒಂದು ಮನೆಯ ಇದಿರು ನಿಂತುಕೊಂಡೆ. ಆಗ ಆ ಮನೆಯ ಇದಿರಿನ ಅಟ್ಟದ ಮೇಲೆ ಅತ್ಯಂತ ಲಾವಣ್ಯವತಿಯಾದ ಸ್ತ್ರೀಯೊಬ್ಬಳು

ನನ್ನ ಕಣ್ಣಿಗೆ ಬಿದ್ದಳು. ಅವಳ ರೂಪ ಸೌಂದರ್ಯವನ್ನು ಕಂಡು ನಾನು ತುಂಬಾ ಮೋಹಿತನಾದೆನು. ಅವಳು ಅಲ್ಲಿಂದ ಎದ್ದು ಹೋದ ಮೇಲೂ ಅವಳ ಚಿಂತೆಯಿಂದಲೇ ಅತ್ತಿತ್ತ ತಿರುಗಿದೆನು. ಸಂಜೆಯಾದ ಮೇಲೆ ನನಗೆ ಎಲ್ಲಿಯೂ ಇರಲು ಅವಕಾಶ ದೊರೆಯಲಿಲ್ಲ. ಆಗ ನಾನು ಆ ಊರಿನ ಸ್ಮಶಾನಕ್ಕೆ ತೆರಳಿ ಅಲ್ಲಿ ಮಲಗಿ ಕೊಂಡೆನು. ಮಧ್ಯರಾತ್ರಿ ಆ ಸ್ಮಶಾನಕ್ಕೆ ಕೆಲವು ಕಳ್ಳರು ಬಂದು ತಾವು ತಂದಿದ್ದ ಸಾಮಾನುಗಳನ್ನು ತಂತಮ್ಮೊಳಗೆ ಹಂಚಿಕೊಳ್ಳುತ್ತಿದ್ದರು. ಅವರಲ್ಲಿ ಒಬ್ಬನು ನನ್ನನ್ನು ನೋಡಿದನು. ನನ್ನ ಹತ್ತಿರ ಬಂದು ನನ್ನ ಕೈಹಿಡಿದನು. ನಾನು ಭಯದಿಂದ ಚೀರಿಕೊಂಡೆ. ಆದರೆ ಅವನು ನನ್ನ ಭಯ ನಿವಾರಿಸಿ ಈ ಸಂಗತಿಯನ್ನು ಯಾರಿಗೂ ಹೇಳದಿದ್ದರೆ ಕಳವು ಮಾಡಿದ ವಸ್ತುಗಳಲ್ಲಿ ಒಂದು ಪಾಲನ್ನು ನನಗೆ ಕೊಡುವುದಾಗಿ ಹೇಳಿದನು. ನಾನು ಒಪ್ಪಿದೆ. ಆದರೆ ಅಷ್ಟರಲ್ಲಿ ಸಿಪಾಯಿಗಳು ಸ್ಮಶಾನಕ್ಕೆ ಮುತ್ತಿಗೆ ಹಾಕಿದರು. ನಾನು ಚೀರಿದ ಶಬ್ದವು ಪಹರೆಯವರಿಗೆ ಕೇಳಿಸಿತ್ತು. ಮತ್ತು ಅವರು ಸಿಪಾಯಿಗಳನ್ನು ಕರೆದುಕೊಂಡು ಬಂದರು. ಎಲ್ಲರೂ ಸಿಕ್ಕಿಬಿದ್ದೆವು. ಮರುದಿನ ನಮ್ಮನ್ನೆಲ್ಲ ನ್ಯಾಯಾಧೀಶನ ಮುಂದೆ ನಿಲ್ಲಿಸಿದರು. ಎಲ್ಲರಿಗೂ ಮರಣಶಿಕ್ಷೆಯೇ ವಿಧಿಸಲ್ಪಟ್ಟಿತು. ಆದರೆ ನ್ಯಾಯಾಧೀಶನಿಗೆ ನನ್ನನ್ನು ಕಂಡ ಮೇಲೆ ಏನು ಅನ್ನಿಸಿತೋ ಏನೋ ! ನನ್ನ ಸಮೀಪ ಬಂದು ಮಾತನಾಡತೊಡಗಿದನು. ಆಗ ನಾನು ನನ್ನ ನಿಜ ವೃತ್ತಾಂತವನ್ನೆಲ್ಲ ಹೇಳಿದೆನು. ನಾನು ಮೋಹಪಟ್ಟ ತನ್ವಂಗಿಯ ಮನೆಯನ್ನು ಗುರುತಿಸಿ ಹೇಳಿದೆನು. ಆಗ ಆ ನ್ಯಾಯಾಧೀಶನಿಗೆ ನನ್ನ ಮೇಲೆ ದಯ ಹುಟ್ಟಿತು. ಅವನು ನನ್ನ ಸೆರೆ ಬಿಡಿಸಿ ತನ್ನ ಮನೆಗೆ ಕರೆದುಕೊಂಡು ಹೋದನು.

ಕೆಲವು ದಿನಗಳಾದ ಮೇಲೆ ಅವನು ನನ್ನನ್ನು ಕರೆದು "ಮಿತ್ರಾ, ನೀನು ಮೋಹಿಸಿರುವ ಆ ತನುಜೆಯೊಂದಿಗೆ ನಿನ್ನ ಮದುವೆ ಮಾಡಬೇಕೆಂದು ನಾನು ಆಶಿಸುತ್ತೇನೆ. ಆ ಕನ್ಯೆಯ ತಂದೆ ನನ್ನ ಬದ್ಧ ವಿರೋಧಿ. ನಾವಿಬ್ಬರೂ ಕಡು ಹಗೆಗಳು. ಆದರೆ ಶತ್ರುತ್ವವನ್ನು ತೊರೆದು ಮಿತ್ರನಾಗಲು ನಾನು ಬಯಸುತ್ತೇನೆ. ಆದಕ್ಕೆ ಇದು ಒಳ್ಳೇ ಸಂದರ್ಭ" ಎಂದನು. ನಾನು ಒಪ್ಪಿಕೊಂಡೆ. ಆಮೇಲೆ ನನಗೆ ಅವನು ಉತ್ತಮವಾದ ಬಟ್ಟೆಬರೆಗಳನ್ನು ಕೊಡಿಸಿದನು. ತನ್ನ ಆಶಯವನ್ನೊಳಗೊಂಡ ಒಂದು ಪತ್ರವನ್ನು ಬರೆದು ಆ ವ್ಯಾಪಾರಿಗೆ

ಕಳಿಸಿದನು. ಅವನೂ ಒಪ್ಪಿದುದರಿಂದ ಬೇಗನೇ ವಿವಾಹ ಕಾರ್ಯವು ನೆರವೇ ರಿತು. ನಾನು ಅತ್ಯಂತ ಸುಖಸಂತೋಷದಿಂದ ಇರತೊಡಗಿದೆನು. ನನ್ನ ಪತ್ನಿಯು ರೂಪವಂತೆ ಇದ್ದಂತೆ ಅತ್ಯಂತ ನಯ ವಿನಯ ಗುಣಶೀಲವುಳ್ಳ ರಮಣಿಯಾಗಿದ್ದಳು. ಯಾವಾಗಲೂ ನಗುತ್ತ ನಾನು ಸಂತೋಷದಿಂದಿರು ವಂತೆ ಯತ್ನಿಸುತ್ತಿದ್ದಳು. ಅದರಿಂದ ದಿನವೆಲ್ಲ ಒಂದು ಕ್ಷಣದಂತೆ ಕಳೆಯು ತ್ತಿತ್ತು. ಹೀಗಿರುತ್ತಿರಲು ನನಗೆ ಆಶ್ರಯಕೊಟ್ಟ ಆ ನ್ಯಾಯಾಧೀಶನು ಒಂದುದಿನ ತನ್ನ ಸೇವಕನ ಮೂಲಕ ಒಂದು ಗಂಟನ್ನು ಕಳಿಸಿಕೊಟ್ಟನು ಅದನ್ನು ಬಿಚ್ಚಿ ನೋಡಲು ನಾನು ಖೈದಿಯಾಗಿದ್ದಾಗ ತೊಟ್ಟು ಕೊಂಡ ಬಟ್ಟೆಬರೆಗಳು ಅದರಲ್ಲಿದ್ದುವು. ಅದೇನೆಂದು ನನ್ನ ಹೆಂಡತಿ ಕೇಳಲು ಅವ ಳಿಗೆ ತುಂಬಾ ದುಃಖವಾಯಿತು. ತನ್ನ ತಂದೆಯು ಮೇಲಿನ ಹಗೆತನವನ್ನು ತೀರಿಸಲು ಈ ರೀತಿ ಮಾಡಿದನು ಎಂದು ಅರಿತಳು. ತನ್ನ ಜೀವಕ್ಕೆ ಅವನು ಸಂಕಟಕೊಟ್ಟುದುದರಿಂದ ಅವನಿಗಾದರೂ ತಾನು ಬುದ್ಧಿಗಲಿಸದೇ ಇರಲಾ ರೆನೆಂದು ಅವಳು ಪ್ರತಿಜ್ಞೆ ಮಾಡಿದಳು.

ಆ ಮೇಲೆ ಅನೇಕ ದಿನಗಳಾದ ಮೇಲೆ ನನ್ನ ಪತ್ನಿಯು ಆ ನ್ಯಾಯಾ ಧೀಶನ ಮನೆಗೆ ತೆರಳಿದಳು. ಅವನನ್ನು ಏಕಾಂತ ಸ್ಥಳಕ್ಕೆ ಕರೆದು ತನ್ನ ಮೇಲು ಮುಸುಕನ್ನು ತೆಗೆದು ಅವನೊಡನೆ ಮಾತನಾಡಿದಳು. “ಸ್ವಾಮಿ, ನಾನು ವಿವಾಹ ಯೋಗ್ಯಳಾಗಿದ್ದೇನೆ. ಅನೇಕ ವರರು ಬಂದರೂ ನನ್ನ ತಂದೆ ನನ್ನ ಮದುವೆ ಮಾಡುವುದಿಲ್ಲ. ಮನೆಯಲ್ಲಿ ಇರಲಿ ಎಂದೇ ಅಪೇಕ್ಷಿ ಸುತ್ತಾನೆ. ದುಡ್ಡು ವೆಚ್ಚವಾಗುತ್ತದೆಂದು ಹಳಹಳಿಸುತ್ತಾನೆ. ಆ ಕಾರಣ ದಿಂದ ಯಾರಾದರೂ ಕೇಳಲು ಬಂದರೆ ತನ್ನ ಮಗಳು ಕುರೂಪಿ, ಮೂಕಿ, ಅಂಗವಿಹೀನಳು ಎಂದು ಹೇಳುತ್ತಾನೆ. ಅದುದರಿಂದ ಯಾರೂ ಮದುವೆ ಯಾಗಲು ಒಪ್ಪುವುದಿಲ್ಲ. ಇದರಿಂದ ನನ್ನ ಜೀವಕ್ಕೆ ಬೇಸರ ಬಂದಿದೆ” ಎಂದು ಹೇಳಿದಳು. ಮುಗುಳು ನಗುತ್ತ ನೇತ್ರ ಸಂಕೇತ ಮಾಡುತ್ತ ಬೆಡಗು ಬಿನ್ನಾಣದಿಂದ ವರ್ತಿಸಿದಳು. ಅವಳ ರೂಪ ಮಾಧುರ್ಯ ಕಂಡ ಆ ನ್ಯಾಯಾ ಧೀಶನು ತಾನೇ ಅವಳನ್ನು ಮದುವೆಯಾಗುವುದಾಗಿ ನುಡಿದನು. ಅವಳು ಬಹಳ ಸಂತೋಷ ಪಟ್ಟು ತನ್ನ ತಂದೆಯಾದ ಮನೋಹರದಾಸನನ್ನು ಕಾಣಲು ತಿಳಿಸಿದಳು. ಅವನು ಏನಾದರೂ ಕುಂಟು ನೆವಹೇಳಿದರೆ ಅದನ್ನು

ಖಂಡಿತವಾಗಿಯೂ ನಂಬಬಾರದೆಂದು ವಚನ ತೆಗೆದುಕೊಂಡಳು.

ಆ ನ್ಯಾಯಾಧೀಶನು ಅದರಂತೆ ಮನೋಹರದಾಸನಿದ್ದಲ್ಲಿ ತೆರಳಿ ತನಗೆ ಅವಳ ತನುಜೆಯನ್ನು ಮದುವೆ ಮಾಡಿಕೊಡಬೇಕೆಂದು ಕೇಳಿಕೊಂಡನು. ಅವನ ಮಾತುಕೇಳಿ ಮನೋಹರದಾಸನಿಗೆ ಆಶ್ಚರ್ಯವಾಯಿತು. ನನ್ನ ಮಗಳು ಬಹಳ ಕುರೂಪಿ, ಅವಳನ್ನು ಯಾರೂ ಮದುವೆಯಾಗಲು ಒಪ್ಪುವುದಿಲ್ಲ" ಎಂದನು. ಸುರೂಪಿ ಇರಲಿ ಕುರೂಪಿ ಇರಲಿ. ತನಗೇ ಮದುವೆಮಾಡಿ ಕೊಡಬೇಕೆಂದು ನ್ಯಾಯಾಧೀಶನು ಹಠ ಹಿಡಿಯಲು ಅವನು ಒಪ್ಪಿದನು. ಶುಭ ಮುಹೂರ್ತದಲ್ಲಿ ಮದುವೆಯೂ ಆಯಿತು. ಆಮೇಲೆ ಗಂಡ ಹೆಂಡತಿಯನ್ನು ಏಕಾಂತ ಗೃಹಕ್ಕೆ ಕಳಿಸಿದರು. ತನ್ನ ಪತ್ನಿಯ ಅನುಪಮ ಸೌಂದರ್ಯ ರಾಶಿಯನ್ನು ಕಣ್ತುಂಬ ನೋಡಬೇಕೆಂಬ ಲವಲವಿಕೆಯಿಂದ ಆ ನ್ಯಾಯಾಧೀಶನು ತಾನೇ ತನ್ನ ಪತ್ನಿಯ ಮೇಲ್ಮುಸುಕನ್ನು ತೆಗೆಯಲು ಅವಳು ಅತ್ಯಂತ ಕುರೂಪಿಯಾದ ಸ್ತ್ರೀಯಾಗಿದ್ದಳು. ಅದನ್ನು ಕಂಡು ಅವನು ಎದೆಯೊಡೆದು ಕೊಂಡನು. ಅದೇ ಚಿಂತೆಯಿಂದ ಅವನು ಸ್ವಲ್ಪಕಾಲವಾದ ಮೇಲೆ ಮರಣಹೊಂದಿದನು.

ಆ ಮೇಲೆ ನಾನು ನನ್ನ ಪ್ರೀಯ ಪತ್ನಿಯೊಡನೆ ಸುಖದಿಂದಿದ್ದೆ. ನನ್ನ ಮಾವನು ಗತಿಸಿಹೋಗಲು ನಾನೇ ಅವನ ಆಸ್ತಿ ಪಾಸ್ತಿ ಧನ ಕನಕಗಳಿಗೆಲ್ಲ ವಾರಸುದಾರನಾದೆನು. ಆದರೆ ನನ್ನ ದುರದೃಷ್ಟದಿಂದ ನನ್ನ ಪ್ರಿಯಪತ್ನಿಯು ತಂದೆ ತೀರಿಹೋದ ಮೇಲೆ ಬಹಳ ಕಾಲ ಬದುಕಲಿಲ್ಲ. ನನ್ನನ್ನು ದುಃಖಕ್ಕೀಡುಮಾಡಿ ಅವಳು ಹೋದಳು. ನನಗೆ ವ್ಯಾಪಾರ ವ್ಯವಹಾರಗಳಲ್ಲಿ ಮನಸ್ಸಾಗಲಿಲ್ಲ. ನಾನು ಮತ್ತೊಂದು ಮದುವೆಯನ್ನು ಮಾಡಿಕೊಂಡಿಲ್ಲ. ಅದೇ ಚಿಂತೆಯಲ್ಲಿದ್ದೇನೆ. ಆ ಸಂಪತ್ತನ್ನೆಲ್ಲ ನಿಮಗೆ ಕೊಡುತ್ತೇನೆ. ರಾಜ್ಯವು ಕೈತಪ್ಪಿಹೋಯಿತೆಂದು ನೀವು ವ್ಯಸನ ಪಡಬಾರದು" ಎಂದು ಅವರನ್ನು ಸಂತೈಸಿದೆನು.

ಆಗ ಮೋಹಿನಿಯು "ರವಿವರ್ಮನೂ ಅವನ ಪತ್ನಿ ಪುತ್ರರ ಗತಿ ಏನಾಯಿತು?'' ಎಂದು ಪ್ರಶ್ನಿಸಿದಳು. ಮೋಹನದಾಸನು ಅದನ್ನು ಹೇಳತೊಡಗಿದನು.

---

## ೩೨. ಪ್ರತಾಪ ಸೇನನ ಕಥೆ

ರವಿವರ್ಮನು ಆ ನಗರದಲ್ಲಿ ಪತ್ನೀ ಪುತ್ರರೊಂದಿಗೆ ವಾಸಮಾಡುತ್ತಿದ್ದುದು ಅರ್ಜುನನಿಗೆ ತಿಳಿದುದರಿಂದ ಅವನನ್ನು ಹಿಡಿದು ತರಲು ಅಥವಾ ಕೊಲ್ಲಲು ಒಳಸಂಚು ಹೂಡತೊಡಗಿದನು ಇದು ರವಿವರ್ಮನಿಗೆ ತಿಳಿದಕೂಡಲೇ ಅವನು ಎಲ್ಲರೊಂದಿಗೆ ಅಲ್ಲಿಂದ ಹೊರಬಿದ್ದನು. ಅವನ ಮಗನಾದ ಪ್ರತಾಪಸೇನನು ಭಿಕ್ಷೆಬೇಡಿತಂದು ವೃದ್ಧರಾದ ತಾಯಿ ತಂದೆಗಳನ್ನು ಪೋಷಿಸುತ್ತಿದ್ದನು. ರಾಜಪುತ್ರನು ಈ ರೀತಿ ಭಿಕ್ಷೆಬೇಡುತ್ತಿರುವುದನ್ನು ಕಂಡು ಆ ಮುದುಕರು ಬಹಳ ವ್ಯಸನ ಪಡುತ್ತಿದ್ದರು.

ಹೀಗೆ ಪ್ರತಾಪಸೇನನು ಒಂದು ದಿನ ಅಲೆಯುತ್ತಿದ್ದಾಗ ಒಂದೆಡೆ ರಾಜಪುತ್ರಿಯ ಚಿತ್ರವೊಂದು ಅವನ ಕಣ್ಣಿಗೆ ಬಿದ್ದಿತು. ಅವಳು ಕನಕಪುರದ ರಾಜಕನ್ಯೆಯಾಗಿದ್ದಳು. ತಾನು ಕೇಳುವ ಐದು ಪ್ರಶ್ನೆಗಳಿಗೆ ಉತ್ತರಕೊಡುವವನನ್ನು ತಾನು ವಿವಾಹವಾಗುವುದಾಗಿ ಅವಳು ಅದರಲ್ಲಿ ಬರೆಸಿದಳು. ಅದನ್ನು ಓದಿದ ಪ್ರತಾಪಸೇನನು ಬಹಳ ದುಃಖಿತನಾದನು. ಕನಕ ಪುರಕ್ಕೆ ತೆರಳಲು ಕೂಡಾ ನನ್ನಲ್ಲಿ ಹಣವಿಲ್ಲ. ರಾಜೋಚಿತವಾದ ಉಡುಗೆ ತೊಡುಗೆಗಳಿಲ್ಲ. ಇರುತಿದ್ದರೆ ನಾನು ಆ ರಾಜಪುತ್ರಿ ಕೇಳವ ಪ್ರಶ್ನೆಗಳಿಗೆ ಯೋಗ್ಯ ಉತ್ತರಗಳನ್ನು ಕೊಟ್ಟು ಅವಳನ್ನು ಲಗ್ನವಾಗುತ್ತಿದ್ದೆನಲ್ಲಾ'' ಎಂದು ಹಂಬಲಿಸತೊಡಗಿದನು. ಬೇಸರದಿಂದ ಒಂದು ವಟವೃಕ್ಷದ ನೆರಳಲ್ಲಿ ಕುಳಿತುಕೊಂಡನು. ಅದರ ಗಾಳಿಗೆ ಅವನಿಗೆ ಅಲ್ಲೆ ಜೊಂಪು ಹತ್ತಿತು. ಸಂಜೆಯ ತಂಗಾಳಿ ಬೀಸಿದ ಮೇಲೆ ಅವನು ಎಚ್ಚರ ಹೊಂದಿದನು. ಆಗ ಆ ಮರದ ಮೇಲೆ ಒಂದು ರಾಜಗಿಳಿಯು ಮಾತನಾಡುತ್ತಿತ್ತು. ಪ್ರತಾಪಸೇನನೂ ಅದರೊಡನೆ ಮೃದು ಮಧುರವಾಗಿ ಮಾತನಾಡಿದನು. ಅದು ಅವನ ಕೈಯಲ್ಲಿ ಬಂದು ಕುಳಿತಿತು. ಅಷ್ಟರಲ್ಲಿ ಆ ದಾರಿಯಾಗಿ ಹೋಗುತ್ತಿದ್ದವನೊಬ್ಬನು ಪ್ರತಾಪಸೇನನ ಬಳಿಗೆ ಬಂದು "ಸ್ವಾಮಿ, ಇದು ಈ ಊರಿನ ರಾಜನ ಗಿಳಿ. ಅದು ಗೂಡಿನಿಂದ ತಪ್ಪಿಸಿಕೊಂಡು ಬಂದಿದೆ. ಅದನ್ನು ಹಿಡಿದು ತಂದೊಪ್ಪಿಸಿದವರಿಗೆ ಉಡುಗೊರೆ ಕೊಡುವುದಾಗಿ ಸಾರಿರುವನು. ನೀನು ಪುಣ್ಯವಂತ

ನೆಂದು ತೋರುತ್ತದೆ. ನೀನು ಇದನ್ನು ತೆಗೆದುಕೊಂಡು ಅರಮನೆಗೆ ಹೋಗು" ಎಂದನು ಪ್ರತಾಪಸೇನನು ಅದರಂತೆ ಅರಮನೆಗೆ ತೆರಳಿದನು ರಾಜನು ಬಹಳ ಸಂತೋಷಪಟ್ಟು ನೀನು ಏನು ಬೇಡುತ್ತಿಯೋ ಅದನ್ನು ಕೊಡುತ್ತೇನೆ" ಎಂದನು. ಆಗ ಪ್ರತಾಪಸೇನನು "ರಾಜಾ, ಸ್ವಲ್ಪಕಾಲದ ವರೆಗೆ ನನ್ನ ವೃದ್ಧರಾದ ತಾಯಿ ತಂದೆಗಳಿಗೆ ಆಶ್ರಯ ಕೊಡು. ನನಗೆ ಒಂದು ಉತ್ತಮವಾದ ಕುದುರೆಯನ್ನೂ ಅಂದವಾದ ಬಟ್ಟೆಬರೆಗಳನ್ನೂ ಸ್ವಲ್ಪ ಹಣವನ್ನೂ ದಯಮಾಡು."ಎಂದು ಪ್ರಾರ್ಥಿಸಿದನು. ರಾಜನು ಅವನ ಮನೋಭಿಲಾಷೆಯನ್ನು ಸಲ್ಲಿಸಿದನು.

ಆ ಮೇಲೆ ಪ್ರತಾಪಸೇನನು ಅಲ್ಲಿಂದ ಕನಕಪುರಕ್ಕೆ ಪ್ರಯಾಣ ಬೆಳಸಿದನು. ಅಲ್ಲಿಗೆ ತೆರಳಿದ ಮೇಲೆ ಒಬ್ಬಳು ಮಾಲೆ ಗಾರ್ತಿಯ ಮನೆಯಲ್ಲಿ ಉಳಿದು ಕೊಂಡನು. ತಾನು ರಾಜಪುತ್ರಿಯನ್ನು ವಿವಾಹವಾಗುವ ಇಚ್ಛೆಯಿಂದ ಬಂದಿರುವುದಾಗಿಯೂ ಅವನಿಗೆ ತಿಳಿಸಿದನು. ಆಗ ಅವಳು ವ್ಯಸನಪಟ್ಟು "ರಾಜಪುತ್ರ, ಈ ನೀಗದ ಕೆಲಸಕ್ಕೇಕೆ ಕೈಹಾಕುತ್ತಿ? ಅವಳ ಹುಚ್ಚು ಬೇಡ. ಬಿಡು. ಈಗಾಗಲೇ ಅವಳು ಕೇಳುವ ಪ್ರಶ್ನೆಗಳಿಗೆ ಉತ್ತರ ಕೊಡಲು ಯಾರಿಂದಲೂ ಆಗಿಲ್ಲ. ಅದರಿಂದ ಅನೇಕ ರಾಜಪುತ್ರರು ಪ್ರಾಣಕಳೆದು ಕೊಂಡಿರುವರು. ಇಂದು ರಾತ್ರಿ ಒಬ್ಬನನ್ನು ಶೂಲಕ್ಕೇರಿಸುತ್ತಾರೆ" ಎಂದು ಹೇಳಿದರು. ಅದನ್ನು ಕೇಳಿ ಪ್ರಕಾಶಸೇನನು ದಃಖಪಟ್ಟು ಅಂದು ರಾತ್ರಿ ಆ ವಧ್ಯಸ್ಥಾನಕ್ಕೆ ತೆರಳಿದನು. ರಾಜಪುತ್ರ ನೊಬ್ಬನನ್ನು ಶೂಲಕ್ಕೇರಿಸಲು ಮಧ್ಯರಾತ್ರಿಗೆ ಅಲ್ಲಿಗೆ ಕರೆದುಕೊಂಡು ಬಂದರು. ಆಗ ನ್ಯಾಯಾಧೀಶನು ಆ ತರುಣನನ್ನು ಉದ್ದೇಶಿಸಿ "ರಾಜಪುತ್ರ, ಮೊದಲೇ ಮಾಡಿದ್ದ ಪಣದಂತೆ. ನಿನ್ನನ್ನು ಶೂಲಕ್ಕೇರಿಸಬೇಕಾಗಿದೆ. ಬೇಡವ ಕಾರ್ಯಕ್ಕೆ ಕೈಯಿಕ್ಕಿ ನೀನೇ ನಿನ್ನ ಪ್ರಾಣವನ್ನು ಕಳೆದು ಕೊಳ್ಳುವ ಪ್ರಸಂಗವನ್ನು ತಂದುಕೊಂಡೆ. ನಿನ್ನ ತಾಯಿ ತಂದೆಗೆ ಯಾವ ಸಂದೇಶವನ್ನಾದರೂ ಮುಟ್ಟಿಸುವದಿದ್ದರೆ ಹೇಳು" ಎಂದು ನುಡಿದನು. ಆಗ ಆ ರಾಜಪುತ್ರನು ನಗುತ್ತ "ನಾನು ಸಾವಿಗೆ ಹೆದರುವುದಿಲ್ಲ. ತಾಯಿ ತಂದೆಗೆ ಮೊದಲೇ ಹೇಳಿ ಬಂದಿದ್ದೇನೆ. ಎಂದು ನುಡಿದನು. ಆಗ ಅವರು ಅವನನ್ನು ಶೂಲಕ್ಕೇರಿಸಲು ಸಿದ್ಧರಾದರು. ಅಷ್ಟರಲ್ಲಿ ಪ್ರತಾಪಸೇನನು ಅವರ ಮಧ್ಯ ನುಗ್ಗಿ, "ತಡೆಯಿರಿ! ಅವನನ್ನು ಶೂಲಕ್ಕೇರಿ

ಸಬೇಡಿರಿ! ನಾನು ಮಹಾರಾಜನಿದ್ದಲ್ಲಿ ತೆರಳಿ ಹಿಂತಿರುಗುವವರೆಗೆ ತಡೆಯಿರಿ" ಎಂದು ನುಡಿದನು. ಆಗ ಅವರು ಅವನ ಮಾತಿನಂತೆ ತಡೆದರು.

ಅದರಂತೆ ಪ್ರತಾಪಸೇನನು ಅಲ್ಲಿಂದ ಅರಮನೆಗೆ ಬಂದು ಗಂಟೆ ಬಾರಿಸಿದನು. ಕೂಡಲೇ ಅವನಿಗೆ ಒಳಗೆ ಬರಲು ಅನುಮತಿದೊರೆಯಿತು. ಪ್ರತಾಪಸೇನನು "ಮಹಾರಾಜ, ನಾನು ನಾಳೆ ನಿಮ್ಮ ಮಗಳು ಕೇಳುವ ಪ್ರಶ್ನೆಗಳಿಗೆ ಉತ್ತರಕೊಡುತ್ತೇನೆ. ಆದುದರಿಂದ ಈ ರಾತ್ರಿ ಶೂಲಕ್ಕೆ ಹಾಕುವ ತರುಣನಿಗೆ ಜೀವದಾನ ಕೊಡಿರಿ. ನಾನು ನಾಳೆ ಸೋತರೆ ಇಬ್ಬರನ್ನು ಶೂಲಕ್ಕೆ ಹಾಕ ಬಹುದು. ರಾಜರಾದವರಲ್ಲಿ ದಯೆ ಇರಬೇಕಾದುದು ಅತ್ಯಗತ್ಯ. ರಾಜಪುತ್ರಿಯೊಬ್ಬಳ ಲಹರಿಗಾಗಿ ನೂರಾರು ಜನ ರಾಜಪುತ್ರರನ್ನು ಬಲಿಗೊಡುವುದು ಉಚಿತವಲ್ಲ. ಅದರಿಂದ ರಾಜ್ಯದಲ್ಲಿ ಅಶಾಂತಿ ಉಂಟಾದೀತು'' ಎಂದು ನುಡಿದನು. ಪ್ರತಾಪಸೇನನ ಮಾತುಗಳು ರಾಜನ ಮನಸ್ಸಿಗೆ ನಟ್ಟವು. ಪ್ರಕೃತ ಶೂಲಕ್ಕೇರಿಸಲಿರುವ ತರುಣನನ್ನು ಶೂಲಕ್ಕೇರಿಸದೆ ಸೆರೆಮನೆಯಲ್ಲಿಡಬೇಕೆಂದು ಅವನು ಆಜ್ಞಾಪಿಸಿದನು. ಪ್ರತಾಪಸೇನನು ಕೂಡಲೇ ಆ ವಧ್ಯಸ್ಥಾನಕ್ಕೆ ಬಂದು ರಾಜಾಜ್ಞೆಯನ್ನು ತಿಳಿಸಿ ಆ ರಾಜಪುತ್ರನ ಪ್ರಾಣವನ್ನು ರಕ್ಷಿಸಿದನು

ಮರುದಿನ ಪ್ರತಾಪಸೇನನು ರಾಜನ ಅರಮನೆಗೆ ತೆರಳಿ ತಾನು ಕನ್ಯಾರ್ಥಿಯಾಗಿ ಬಂದಿರುವೆನೆಂದೂ ರಾಜನ ಮಗಳಾದ ಕಲಾವತಿಯು ಕೇಳುವ ಪ್ರಶ್ನೆಗಳಿಗೆ ಉತ್ತರಕೊಡುವುದಾಗಿಯೂ ತಿಳಿಸಿದನು. ಆಗ ರಾಜನು ಅಂಥ ಹುಡುಗತನಕ್ಕೆ ಕೈಕೊಳ್ಳಬಾರದೆಂದೂ ಅದರಿಂದ ಪ್ರಾಣಕ್ಕೆ ಗಂಡಾಂತರವಿದೆಯೆಂದೂ ಪರಿಪರಿಯಾಗಿ ತಿಳಿಸಿದನು. ಆದರೆ ಪ್ರತಾಪಸೇನನು ಅವುಗಳಿಗೆಲ್ಲ ಕಿವಿಗೊಡಲಿಲ್ಲ. ಆ ರಾಜಪುತ್ರಿಯ ಪ್ರಶ್ನೆಗಳಿಗೆ ಸರಿಯಾದ ಉತ್ತರ ಕೊಟ್ಟು ರಾಜಪುತ್ರರ ಜೀವಗಳಿಗೆ ಬಂದಿರುವ ಗಂಡಾಂತರವನ್ನು ಪರಿಹರಿಸಲು ಬಯಸುತ್ತೇನೆಂದು ಅವನು ತಿಳಿಸಿದನು. ರಾಜನು ಅವನನ್ನು ತನ್ನ ಮಗಳ ಅಂತಃಪುರಕ್ಕೆ ಕಳಿಸಿದನು. ಅವನು ಬಂದ ಕೂಡಲೇ ರಾಜಪುತ್ರಿ ಕಲಾವತಿಯು ಎದ್ದು ಗೌರವವನ್ನು ಕೊಟ್ಟಳು. ಪ್ರತಾಪಸೇನನ ಧೈರ್ಯ ಹಾಗೂ ಗುಣಗಳನ್ನು ಅವಳು ಕೇಳಿದ್ದಳು. ಈಗ ಅವನ ಮೋಹನ ರೂಪವನ್ನು ಕಂಡು ಮುಗ್ಧಳಾದಳು. ಆದುದರಿಂದ ಅವಳು ಕೈ ಜೋಡಿಸಿ "ರಾಜ

ಪುತ್ರ, ನಿನಗೆ ನಾನು ಪ್ರಶ್ನೆಗಳನ್ನು ಕೇಳಲು ಬಯಸುವುದಿಲ್ಲ ಏಕೆಂದರೆ ಉತ್ತರಕೊಡಲು ಅಸಮರ್ಥನಾದರೆ ನೀನು ಕೂಡಾ ಪ್ರಾಣಕ್ಕೆ ಎರವಾಗುತ್ತೀಯಲ್ಲ ! ನಿನ್ನಂತಹ ರಾಜಪುತ್ರನು ಸಾಯಬಾರದು" ಎಂದು ಪ್ರಾರ್ಥಿಸಿದಳು. ಆಗ ಆ ಪ್ರತಾಪಸೇನನು "ರಾಜಪುತ್ರಿಯೇ, ನಿನಗೆ ನನ್ನ ಮೇಲೆ ಮೋಹವಾಗಿರುವಂತೆ ತೋರುತ್ತದೆ. ಹಾಗಿದ್ದರೆ ನಿನ್ನ ಪಣವನ್ನು ಹಿಂದಕ್ಕೆ ತೆಗೆದುಕೋ. ಇಲ್ಲದಿದ್ದರೆ ನಾನು ಹಿಂತಿರುಗಿ ಹೋಗಲಾರೆ. ನೀನು ಪ್ರಶ್ನೆಗಳನ್ನು ಕೇಳು. ಸಾಧ್ಯವಾದರೆ ಉತ್ತರ ಕೊಡುತ್ತೇನೆ. ಇಲ್ಲದೇ ಇದ್ದರೆ, ಪ್ರಾಣಹೋಗಲಿ! ಬದುಕಿ ಮಾಡುವುದಾದರೂ ಏನು. ಗೆದ್ದರೆ ಅನೇಕ ರಾಜಪುತ್ರರ ಪ್ರಾಣವನ್ನಾದರೂ ಉಳಿಸಿದಂತಾಗುತ್ತದೆ. ನೀನು ಈ ಪಣವನ್ನೇಕೆ ಮಾಡಿಕೊಂಡೆಯೋ ನಾನರಿಯೆ" ಎಂದನು. ಆಗ ಆ ರಾಜಪುತ್ರಿಯು ಪಣವನ್ನು ನಿರ್ಧರಿಸಲು ಕಾರಣವೇನೆಂದು ನುಡಿದಳು.

——

## ೩೩. ಮೃಗಗಳ ನ್ಯಾಯದ ಕಥೆ

ಪೂರ್ವಕಾಲದಲ್ಲಿ ಕಾಶ್ಮೀರ್ ರಾಜ್ಯದಲ್ಲಿ ಬಲನೆಂಬ ಒಬ್ಬ ಅರಸನಿದ್ದನು. ಅವನಿಗೆ ಬೇಟೆಯಾಡುವುದೆಂದರೆ ಇಷ್ಟ. ಒಂದು ದಿನ ಅವನು ತನ್ನ ಪರಿವಾರದೊಂದಿಗೆ ಬೇಟೆಗೆ ತೆರಳಿದನು. ಒಂದು ದಿಕ್ಕಿನಲ್ಲಿ ಅವನ ಸೈನಿಕರು ನಿಂತರು. ಇನ್ನೊಂದು ದಿಕ್ಕಿನಲ್ಲಿ ಬೇಟೆಯ ನಾಯಿಗಳನ್ನು ಬಿಟ್ಟನು. ಮೂರನೇ ದಿಕ್ಕಿನಲ್ಲಿ ಬೆಂಕಿಯನ್ನಿಟ್ಟನು. ನಾಲ್ಕನೇ ದಿಕ್ಕಿನಲ್ಲಿ ಬಲೆಯನ್ನು ಹಾಸಿದನು. ಮೃಗಗಳೆಲ್ಲ ಬೆದರಿ ದಿಕ್ಕಾಪಾಲಾಗಿ ಓಡಲಾರಂಭಿಸಿದುವು. ಸಿಕ್ಕಸಿಕ್ಕ ಇದಿರಾದ ಪ್ರಾಣಿಗಳನ್ನೆಲ್ಲ ಅವರು ಕೊಂದರು. ಒಂದು ಹರಿಣವು ತನ್ನ ಪತ್ನಿ ಮತ್ತು ಮಗುವಿನೊಂದಿಗೆ ಬಲೆಯ ಮುಂದೆ ಬಂದಿತು. ಆಗ ಆ ಗಂಡು ಜಿಂಕೆಯು "ಪ್ರಿಯ ಪತ್ನಿಯೇ, ನಾವು ಈ ಮರಿಯನ್ನು ಇಲ್ಲೇ ಬಿಟ್ಟು ಪಾರಾಗಿ ಹೋಗೋಣ. ಅಂದರೆ ಮುಂದೆ ಇಂತಹ ಅನೇಕ ಮರಿಗಳು ನಮಗಾಗಬಹುದು" ಎಂದಿತು. ಆದರೆ ಆ ಹರಿಣವು ಒಪ್ಪಲಿಲ್ಲ. ಗಂಡು ಜಿಂಕೆಯು ಬಲೆಯಿಂದ ತಪ್ಪಿಸಿಕೊಂಡು ಹೋಯಿತು. ಹೆಣ್ಣು ಚಿಗರಿ

ಮತ್ತು ಅದರ ಮರಿ ಮಾತ್ರ ಸಿಕ್ಕಿ ಬೀಳುವ ಪ್ರಸಂಗ ಬಂದಿತು. ಆಗ ಅದು ಪರಮಾತ್ಮನನ್ನು ಪ್ರಾರ್ಥಿಸಿತು. ಅದರ ಪ್ರಾರ್ಥನೆಯನ್ನು ಕೇಳಿದನೋ ಏನೋ! ಕೂಡಲೇ ಬಿರುಗಾಳಿ ಬೀಸಿತು. ಮಳೆ ಬಂದಿತು. ಅಗ್ನಿಯು ನಂದಿತು. ನಾಯಿಗಳು ಬೇರೆ ಕಡೆ ಧಾವಿಸಿದುವು. ಚಿಗರಿಯು ತನ್ನ ಮಗುವಿನೊಂದಿಗೆ ತಪ್ಪಿಸಿಕೊಂಡು ಹೋಯಿತು. ಅದು ಬದುಕಿ ಬಂದ ಮೇಲೆ ಗಂಡು ಜಿಂಕೆಯು ಅದರ ಸಮೀಪಬಂತು. ಆಗ ಹೆಣ್ಣು ಜಿಂಕೆಯು "ಪ್ರಾಣದಾಸೆಯಿಂದ ನಮ್ಮನ್ನು ತೊರೆದು ನೀನು ಓಡಿಹೋದೆ! ಈಗ ಮತ್ತೆ ಬಂದು ಮೋರೆ ತೋರಿಸಲು ನಿನಗೆ ನಾಚಿಕೆಯಾಗುವುದಿಲ್ಲವೇ?" ಎಂದು ಹೀಯ್ಯಾಳಿಸಿತು. ಅದನ್ನು ಕೇಳಿ ಆ ಗಂಡು ಜಿಂಕೆಯು ಸ್ತ್ರೀಯರು ದುರಾಚಾರಿಗಳೆಂದು ನಿಂದಿಸಿ "ನಿನ್ನ ಮಾತನ್ನು ಕೇಳುತ್ತಿದ್ದರೆ ನನ್ನ ಪ್ರಾಣಕ್ಕೂ ಗಂಡಾಂತರ ಬರುತ್ತಿತ್ತು. ನಿನ್ನಂತಹ ಸಾವಿರಾರು ಹೆಣ್ಣುಗಳು ನನಗೆ ದೊರಕಿಯಾರು?" ಎಂದು ಹೇಳಿ ತನ್ನ ಮಗನನ್ನು ಕರೆದುಕೊಂಡು ಹೊರಟಿತು. ಆಗ ಆ ಹೆಣ್ಣು ಜಿಂಕೆಯು ಅಳತೊಡಗಿತು. "ಅದನ್ನು ಸಾಕಿಸಲಹಿದವಳು ನಾನು. ಆದರ ಜೀವವುಳಿಸಿದವಳೂ ನಾನೇ. ಆದುದರಿಂದ ಅದನ್ನು ನನಗೆ ಕೊಡು." ಎಂದು ಪ್ರಾರ್ಥಿಸಿತು. ಗಂಡು ಕೇಳಲಿಲ್ಲ. ಹೀಗಾಗಿ ಜಗಳವೇ ಆರಂಭವಾಗಲು ಇಬ್ಬರೂ ರಾಜನ ಆಸ್ಥಾನಕ್ಕೆ ಬಂದರು. ಆಗ ರಾಜನು ಮರಿಯು ಗಂಡಿಗೇ ಸಲ್ಲ ಬೇಕು ಎಂದು ತೀರ್ಮಾನಿಸಿದನು ಹೆಣ್ಣು ಜಿಂಕೆ ವ್ಯಸನದಿಂದ ಸತ್ತುಹೋಯಿತು.

ಈ ಹೆಣ್ಣು ಜಿಂಕೆಯೇ ತನ್ನ ಪುಣ್ಯ ಫಲದಿಂದ ಅದೇ ನಗರದಲ್ಲಿ ಮನುಷ್ಯ ಜನ್ಮ ಪಡೆಯಿತು. ಒಬ್ಬ ಶ್ರಿಮಂತನ ಮನೆಯಲ್ಲಿ ಹೆಣ್ಣು ಹುಟ್ಟಿದಳು. ಅವಳು ಬೆಳೆದು ದೊಡ್ಡವಳಾದ ಮೇಲೆ ತನ್ನ ಗಂಡು ಕುದುರೆಯನ್ನು ರಾಜನ ಅಶ್ವಶಾಲೆಗೆ ಕಳಿಸಿದಳು. ಅದರಿಂದಲೇ ಅಶ್ವಶಾಲೆಯಲ್ಲಿದ್ದ ಅನೇಕ ಹೆಣ್ಣು ಕುದುರೆಗಳಿಗೆ ಸಂತಾನವಾಯಿತು. ಆ ಮೇಲೆ ಅವಳು ಆ ಮರಿಗಳೆನ್ನೆಲ್ಲ ತಂದು ತನ್ನ ಮನೆಯಲ್ಲಿ ಕಟ್ಟಿ ಹಾಕಿದಳು. ಆಗ ಅಶ್ವಶಾಲೆಯ ಅಧಿಕಾರಿಯು ಈ ದೂರನ್ನು ರಾಜನ ವರೆಗೂ ಒಯ್ದನು. ರಾಜನು ಆ ಸ್ತ್ರೀಯನ್ನು ಕರೆಯಿಸಿಕೇಳಲು "ಮಹಾರಾಜ, ಕೆಲವು ವರುಷಗಳ ಹಿಂದೆ ತಮ್ಮ ದರ್ಬಾರಿಗೆ ನ್ಯಾಯ ತೀರ್ಮಾನಕ್ಕಾಗಿ ಹರಿಣಗಳ ಒಂದು ಜೋಡು

ಬಂದಿತಲ್ಲವೇ? ಆಗ ಆ ಹರಿಣದ ಮಗು ಗಂಡಿಗೆ ಸೇರಿದುದು ಎಂದು ತೀರ್ಮಾನ ಕೊಟ್ಟಿದ್ದಿರಿ. ಅದೇ ನಿರ್ಣಯವು ಈ ಕುದುರೆಗೂ ಅನ್ವಯಿಸುತ್ತದೆ. ನನ್ನ ಈ ಗಂಡು ಕುದುರೆಯಿಂದಲೇ ಅಶ್ವಶಾಲೆಯಲ್ಲಿ ಸಂತಾನವಾಗಿದೆ. ಆದುದರಿಂದ ಆ ಮರಿಗಳೆಲ್ಲ ನನ್ನ ಈ ಗಂಡು ಕುದುರೆಗೇ ಸಲ್ಲಬೇಕ" ಎಂದಳು. ರಾಜನು ಉಪಾಯವಿಲ್ಲದೇ ಒಪ್ಪಿಕೊಂಡನು.

ಆದರೆ ರಾಜನ ಸಿಟ್ಟು ಮಾತ್ರ ಶಾಂತವಾಗಲಿಲ್ಲ. ಒಂದು ದಿನ ಅವನು ಆ ಶ್ರೀಮಂತನ ಪುತ್ರಿಯನ್ನು ಕರೆದು ನೀನು ಬಹಳ ಬುದ್ಧಿವಂತಳಿರುವಿ ಎಂದುತೋರುತ್ತದೆ. ನನಗೆ ವೃಷಭದ ಹಾಲು ತಂದುಕೊಡು. ಇಲ್ಲದಿದ್ದರೆ ನಿನ್ನ ಪ್ರಾಣ ಉಳಿಯಲಿಕ್ಕಿಲ್ಲ"ಎಂದನು.ಅವಳು ಒಪ್ಪಿಕೊಂಡು ಮನೆಗೆ ಬಂದಳು. ಅನೇಕದಿನಗಳ ವರೆಗೆ ಚಿಂತೆಯಿಂದಲೇ ಕಾಲಕಳೆದಳು. ಆ ಮೇಲೆ ಒಂದು ಯೋಗ್ಯ ಯೋಚನೆ ಹೊಳೆಯಿತು. ಒಂದು ದಿನ ರಾಜನು ನದೀಸ್ನಾನಕ್ಕೆ ತೆರಳಿದಾಗ ಅವನಿಗೆ ಕಾಣಿಸುವಂತೆ ಒಂದು ಕೆಂಪುಬಟ್ಟೆಯನ್ನು ಒಗೆಯುತ್ತಾ ನಿಂತಳು. ರಾಜನು ಕುತೂಹಲಭರಿತನಾಗಿ "ಈ ಕೆಂಪು ಬಟ್ಟೆಗಳ ಮೂಟೆ ಎಲ್ಲಿಂದ? ಇವು ಯಾರವು?" ಎಂದು ಕೇಳಿದನು. ಆಗ ಅವಳು "ಮಹಾರಾಜ, ನನ್ನ ತಂದೆಯು ರಜಸ್ವಲೆಯಾಗಿ ಇಂದಿಗೆ ೪ ದಿನಗಳಾದುವು. ಮಾಸಿದ ಅವನ ಬಟ್ಟೆಗಳನ್ನು ಒಗೆಯುತಿದ್ದೇನೆ" ಎಂದಳು. ರಾಜನು ನಕ್ಕು "ಗಂಡಸರು ರಜಸ್ವಲೆಯರಾಗುವುದುಂಟೇ?" ಎಂದು ಪ್ರಶ್ನಿಸಿದನು. ಆಗ ಅವಳು, "ಮಹಾರಾಜ, ವೃಷಭವು ಹಾಲು ಕೊಡುವದುಂಟೇ?" ಎಂದು ಕೇಳಿದಳು. ಆಗ ಅರಸನ ಮೋರೆ ಸಣ್ಣದಾಯಿತು

ಮತ್ತೊಂದು ದಿನ ಅವನು ಅವಳನ್ನು ರಾಜಸಭೆಗೆ ಕರೆಸಿ "ಆಕಾಶದ ಕಡೆ ತಳಗಟ್ಟು, ನೆಲದ ಕಡೆ ಚಪ್ಪರ ಇರುವಂತ ಒಂದು ಮನೆಯನ್ನು ರಚಿಸಿ ತೋರಿಸು. ಅದಕ್ಕೆ ಬೇಕಾಗುವ ಸಹಾಯ ದ್ರವ್ಯವನ್ನೆಲ್ಲ ನೀನು ಕೋಶಾಧಿಕಾರಿಯಿಂದ ತೆಗೆದುಕೋ," ಎಂದನು. ಅವಳು ಒಪ್ಪಿಕೊಂಡಳು. ಮತ್ತು ಮರುದಿನ ಆಳುಗಳಿಗೆ ಕಾಳುಬೇಕೆಂದು ಧಾನ್ಯ ಅಧಿಕಾರಿಯ ಬಳಿಗೆ ತೆರಳಿದಳು. ಅವನು ಧಾನ್ಯವನ್ನು ಸುರಿಯಲು ಅವಳು ಸೇರನ್ನು ತಲೆ ಕೆಳಗಾಗಿ ಹಿಡಿದು ಅಳೆಯಬೇಕೆಂದು ತಿಳಿಸಿದಳು. ಅವನು ಒಪ್ಪಲಿಲ್ಲ. ಅವಳೂ ಕೇಳಲಿಲ್ಲ. ಜಗಳವು ರಾಜನ ವರೆಗೂ ಹೋಯಿತು. ರಾಜನು ಅವಳನ್ನು

ಕರೆಸಿಕೊಂಡು "ನಿನಗೆ ಲೋಕವ್ಯವಹಾರವೇ ಗೊತ್ತಿಲ್ಲ. ಸೇರನ್ನು ತಲೆಕೆಳ ಗಾಗಿ ಹಿಡಿದು ಯಾರಾದರೂ ಅಳೆಯುತ್ತಾರೇನು?" ಎಂದು ಕೇಳಿದನು. ಆಗ ಅವಳು "ಮಹಾರಾಜ, ಆಕಾಶದ ಕಡೆ ನೆಲಗಟ್ಟು ಹಾಕಿ ಮನೆಕಟ್ಟ ಲಿಕ್ಕಾಗುತ್ತದೆಯೇ? ಇದು ಲೋಕ ವ್ಯವಹಾರವೇ?" ಎಂದು ಪ್ರಶ್ನಿಸಿದಳು. ಅವಳ ಪ್ರಶ್ನೆಯಿಂದ ರಾಜನು ಮೆಚ್ಚಿ ಅವಳಿಗೆ ಉಡುಗೊರೆಗಳನ್ನು ಕೊಟ್ಟು ಕಳಿಸಿದನು.

ರಾಜಪುತ್ರನೇ ಆ ಕಥೆಯನ್ನು ಕೇಳಿದಂದಿನಿಂದ ನಾನು ಪುರುಷರನ್ನು ದ್ವೇಷಿಸುತ್ತ ಬಂದಿದ್ದೇನೆ. ನಾನು ಕೇಳುವ ಪ್ರಶ್ನೆಗಳಿಗೆ ಸಮರ್ಪಕ ಉತ್ತ ರಕೊಡುವವನನ್ನು ಮಾತ್ರ ಮದುವೆಯಾಗುವೆನೆಂದು ನಿರ್ಧರಿಸಿದ್ದೇನೆ. ಎಂದು ನುಡಿದಳು. ಅದನ್ನು ಕೇಳಿ ಆ ರಾಜಪುತ್ರನು "ರಾಜಪುತ್ರಿಯೇ, ನೀನು ಪ್ರಾಣಿಗಳ ಉದಾಹರಣೆ ಕೊಟ್ಟು ಪುರುಷರು ದುಷ್ಟರೆಂದು ಹೇಳಿದೆ ಯಲ್ಲ! ಆದರೆ ಅದು ನಿಜವಲ್ಲ. ನಿಜವಾಗಿ ನೋಡಿದರೆ ಸ್ತ್ರೀಯರೇ ಹೆಚ್ಚು ದೋಷಪಾತ್ರರು. ಅದನ್ನು ಪುಷ್ಟೀಕರಿಸುವ ಉದಾಹರಣೆಯನ್ನು ಕೊಡ ಬಲ್ಲೆ ಎಂದು ಹೇಳಿದನು. ಅವಳು ಕೇಳಲು ಇಷ್ಟಪಟ್ಟುದುದರಿಂದ ರಾಜಪು ತ್ರನು ಹೇಳತೊಡಗಿದನು.

---

## ೩೪. ಶೂರಸೇನನ ಕಥೆ

ಪೂರ್ವಕಾಲದಲ್ಲಿ ಕಾಶ್ಮೀರ್ ರಾಜ್ಯದಲ್ಲಿ ರಣಮಲ್ಲನೆಂಬ ಒಬ್ಬ ಅರಸ ನಿದ್ದನು. ಆದರೆ ಅವನಿಗೆ ಮಕ್ಕಳಿರಲಿಲ್ಲ. ಮಕ್ಕಳಾಗಬೇಕೆಂಬ ಬಯಕೆ ಯಿಂದ ಅವನು ಅನೇಕ ಬಡವರಿಗೆ ಅನ್ನದಾನಗಳನ್ನು ಮಾಡಿದನು. ಕೊನೆಗೆ ತನ್ನ ವಿಶ್ವಾಸಕ್ಕೆ ಪಾತ್ರನಾದ ಜ್ಯೋತಿಷ್ಯನೊಬ್ಬನನ್ನು ಕರೆದು ಅವನ ಅಭಿಪ್ರಾಯವನ್ನು ಕೇಳಿದನು. ಆಗ ಆ ಜ್ಯೋತಿಷ್ಯನು "ಮಹಾ ರಾಜ, ನೀನು ನಿನ್ನ ರಾಜ್ಯದಲ್ಲಿ ಎಲ್ಲಕಡೆಗಳಲ್ಲೂ ಅನ್ನ ಛತ್ರಗಳನ್ನು ಕಟ್ಟಿಸಿ ಅನ್ನದಾನ ಮಾಡು. ದೇವರು ಅದರಿಂದ ತೃಪ್ತಿಹೊಂದಿ ಪುತ್ರಸಂತಾನವನ್ನು ಕೊಡದೇ ಇರಲಾರನು" ಎಂದು ನುಡಿದನು. ಅದರಂತೆ ಆ ರಾಜನು

ಮಾಡಲು ಕೆಲವು ವರುಷಗಳು ದಾಟಿದ ಮೇಲೆ ಅವನ ರಾಣಿಯು ಗರ್ಭವತಿಯಾಗಿ ಗಂಡು ಮಗನನ್ನು ಹಡೆದಳು. ಅವನಿಗೆ ಶೂರಸೇನನೆಂದು ಹೆಸರಿಟ್ಟರು.

ಶೂರಸೇನನಿಗೆ ರಾಜ ಪುತ್ರರಿಗೆ ಉಚಿತವಾದ ವಿದ್ಯಾಬುದ್ಧಿಯನ್ನು ಕಲಿಸಿದರು. ಅವನು ದೊಡ್ಡವನಾದ ಬಳಿಕ ಅವನಿಗೆ ವಿವಾಹ ಮಾಡಲೂ ರಾಜನು ಚಿಂತಿಸತೊಡಗಿದನು. ಅದನ್ನು ಕೇಳಿ ಶೂರಸೇನನು ತಂದೆ ಇದ್ದಲ್ಲಿ ಬಂದು ತಾನು ಮದುವೆ ಮಾಡಿಕೊಳ್ಳುವುದಿಲ್ಲವೆಂದು ನುಡಿದನು. ತಂದೆಯು ಆಶ್ಚರ್ಯಪಟ್ಟು ಅದರ ಕಾರಣ ಕೇಳಲು ಅವನು "ಸ್ತ್ರೀಯರು ದುಷ್ಟೆಯರು. ಅವರು ದುಶ್ಶೀಲೆಯರು. ದುರ್ಗುಣಿಗಳು. ಅವರನ್ನು ನಂಬಬಾರದು." ಎಂದು ನುಡಿದನು. ಮಗನ ಮನಸ್ಸನ್ನು ಬದಲಿಸಲು ತಂದೆಯು ಎಷ್ಟು ಯತ್ನಿಸಿದರೂ ಸಾಧ್ಯವಾಗಲಿಲ್ಲ. "ಗೃಹಸ್ಥಾಶ್ರಮಿಯಾಗುವುದು ಒಳ್ಳೇದು. ಹಿಂದಿನ ಋಷಿಗಳೂ ಕೂಡಾ ಮದುವೆ ಮಾಡಿಕೊಂಡೇ ತಪಸ್ಸನ್ನಾಚರಿಸುತ್ತಿದ್ದರು. ವಿಶ್ವಾಮಿತ್ರ ಋಷಿಯು ಕೂಡಾ ಸ್ತ್ರೀ ವ್ಯಾಮೋಹಿತನಾದ. ಒಂದು ವೇಳೆ ನೀನು ಈಗ ಸಕಾಲದಲ್ಲಿ ಮದುವೆಮಾಡಿಕೊಳ್ಳದಿದ್ದರೆ ಮುಂದೆ ದುರ್ಮಾರ್ಗಿಯಾಗಲೂಬಹುದು"ಎಂದು ಪರಿಪರಿಯಾಗಿ ಹೇಳಿದನು. ಆಗ ಆ ರಾಜಪುತ್ರನು ಒಪ್ಪದೆ ತಂದೆಗೆ ಇಂತೆಂದನು.

ಪೂರ್ವಕಾಲದಲ್ಲಿ ಒಬ್ಬ ಶಿಲ್ಪಿ ಇದ್ದನು. ಅವನು ಬಹಳ ಚತುರನು ತಜ್ಞನು. ಆದರಿಂದ ಅವನ ಕೀರ್ತಿ ನಾಲ್ಕು ಕಡೆಗಳಲ್ಲೂ ಹಬ್ಬಿದ್ದಿತು. ಅವನು ಚಿಕ್ಕಂದಿನಲ್ಲೇ ವಿವಾಹವಾಗಿದ್ದನು. ಅವನ ಹೆಂಡತಿಯು ಅನುಪಮ ಸುಂದರಿಯಾಗಿದ್ದಳು. ಆದರೆ ಅವಳ ಸೌಂದರ್ಯವನ್ನು ಕಂಡ ಗಂಡನಿಗೇ ಅವಳ ಮೇಲೆ ಸಂಶಯ ಹುಟ್ಟಿತು. ಇವಳು ಗುಟ್ಟಾಗಿ ಪರಪುರುಷರನ್ನು ಮೋಹಿಸಬಹುದು ಎಂದು ತಿಳಿದುಕೊಂಡನು. ಇಲ್ಲದೇ ಇದ್ದರೆ ದಾರಿದ್ರ್ಯಕ್ಕೊಳಗಾಗಿರುವುದರಿಂದ ದ್ರವ್ಯವಿತ್ತರೆ ಪರಪುರುಷರಿಗೆ ಒಲಿಯಬಹುದು ಎಂದು ತಿಳಿದುಕೊಂಡನು. ಅಂತಹ ಗಂಡಾಂತರವು ಬಾರದಂತೆ ಅವನು ಅರಣ್ಯದಲ್ಲಿ ಒಂದು ಮನೆಯನ್ನು ನಿರ್ಮಿಸಿ ಅಲ್ಲಿ ಅವಳನ್ನು ಇಟ್ಟು ತಾನು ಕೆಲಸದಲ್ಲಿ ಉದ್ಯುಕ್ತನಾಗಿದ್ದನು. ದಿನಂಪ್ರತಿ ಮುಂಜಾನೆದ್ದು ಆವನು ಆ ಕಾಡಿನಿಂದ ಊರಿಗೆ ಬಂದು ಕೆಲಸ ಮಾಡುತ್ತಿದ್ದನು. ಸಂಜೆಯ ಹೊತ್ತಿಗೆ

ಹಿಂತಿರುಗುತ್ತಿದ್ದನು. ಹೀಗೆ ಅನೇಕ ವಾರಗಳು ಉರುಳಿದವು.

ಗಂಡನು ಹೊರಟು ಹೋದ ಮೇಲೆ ಅವಳಿಗೆ ಬೇಸರವಾಗುತ್ತಿತ್ತು. ಅವಳು ಮನೆಯಿಂದ ಹೊರಬಿದ್ದು ಅಲ್ಲಲ್ಲಿ ತಿರುಗುತ್ತಿದ್ದಳು. ಒಂದು ಸಲ ಅವಳು ಕಾಡಿನಲ್ಲಿ ಅಲೆಯುತ್ತಿದ್ದಾಗ ಬೇಟೆಗೆ ಬಂದಿದ್ದ ಒಬ್ಬ ರಾಜ ಪುತ್ರನ ದೃಷ್ಟಿ ಅವಳ ಮೇಲೆ ಬಿತ್ತು. ಅವಳು ಅವನನ್ನು ಕರೆದುಕೊಂಡು ತನ್ನ ಮನೆಗೆ ಬಂದಳು. ಅಲ್ಲಿ ಬಹಳ ಹೊತ್ತಿನವರೆಗೆ ಅವರು ಮಾತ ನಾಡುತ್ತ ಕುಳಿತರು ಹಾಗೆಯೇ ಅವರೊಳಗೆ ಸಲಿಗೆ ಹೆಚ್ಚಾಯಿತು. ದಿನಂಪ್ರತಿ ಆ ರಾಜನು ಆ ಕಾಡಿಗೆ ತೆರಳಿ ಅವಳನ್ನು ಭೆಟ್ಟಿಯಾಗತೊಡಗಿ ದನು. ಅವನು ಬಂದ ಕೂಡಲೇ ಅವಳು ಬಾಗಿಲುಗಳನ್ನು ಮುಚ್ಚಿಕೊಂಡು ರತ್ಯಾಸಕ್ತಳಾಗುತ್ತಿದ್ದಳು. ಹೀಗೆ ಕೆಲವು ದಿವಸಗಳು ಕಳೆದ ಮೇಲೆ ಅವಳ ಪತಿಗೆ ಯಾಕೋ ಏನೋ ಸ್ವಲ್ಪ ಸಂಶಯವು ಬಂದಿತು. ಒಂದು ದಿನ ಅವನು ಪೇಟೆಗೆ ತೆರಳದೆ ಮನೆಯ ದೂರದಲ್ಲಿದ್ದ ಒಂದು ಮರವೇರಿ ಅದರಲ್ಲಿ ಅಡಗಿ ಕುಳಿತನು. ಅಷ್ಟರಲ್ಲಿ ಆ ರಾಜನು ಆ ಮನೆಗೆ ಬಂದನು. ಅವಳು ಬಾಗಿಲು ಕೂಡಾ ಹಾಕಿಕೊಂಡಳು. ಶಿಲ್ಪಿಯು ರೇಗಿ ಕೆಳಗಿಳಿಯಬೇಕೆಂದು ಯತ್ನಿಸುತ್ತಿದ್ದಾಗ ಬೇರೆ ಯಾರೋ ಆ ದಾರಿಯಾಗಿ ಬಂದು ಆ ಮರದ ಬುಡದಲ್ಲಿ ಕುಳಿತನು. ಅವನೊಬ್ಬ ಸನ್ಯಾಸಿ. ಅವನು ತನ್ನ ಜಡೆಯಿಂದ ಒಂದು ಬಿಲ್ವಫಲವನ್ನು ತೆಗೆದು ಅದರೊಳಗಿಂದ ಸ್ತ್ರೀಯೊಬ್ಬಳನ್ನು ರಚಿಸಿ ದನು. ಅವಳನ್ನು ಅಲ್ಲೇ ಬಿಟ್ಟು ನೀರು ತರಲು ಹೋದನು. ಅವನು ಅತ್ತ ತೆರಳಿದ ಕೂಡಲೇ ಅವಳು ತನ್ನ ಜಡೆಯಿಂದ ಒಂದು ವಸ್ತುವನ್ನು ತೆಗೆದು ಒಬ್ಬ ಪುರುಷನನ್ನು ನಿರ್ಮಿಸಿದಳು ಮತ್ತು ಅವನೊಡನೆ ಸಂಭೋಗ ನಿರತ ಳಾದಳು. ಸನ್ಯಾಸಿಯು ಬರುವದರೊಳಗೆ ಮತ್ತೆ ಅವನನ್ನು ಮಾಯಾ ಮಾಡಿ ತನ್ನ ತುರುಬಿನೊಳಗೆ ಸಿಕ್ಕಿಸಿಕೊಂಡಳು. ಅವನು ಬಂದಮೇಲೆ ಅವಳೊಡನೆ ಸರಸವಾಡುತ್ತ ತಾನೂ ರತ್ಯಾಸಕ್ತನಾದನು. ಆಮೇಲೆ ಪುನಃ ಅವಳನ್ನು ಬಿಲ್ವಪತ್ರಿಯೊಳಗೆ ಹಾಕಿ ಜಡೆಯಲ್ಲಿಟ್ಟುಕೊಂಡನು.

ಅಷ್ಟರಲ್ಲಿ ಶಿಲ್ಪಿಯು ಮರದಿಂದ ಇಳಿದು ಆ ಸನ್ಯಾಸಿಗೆ ನಮುಸ್ಕಾರ ಮಾಡಿ ತನ್ನ ಮನೆಗೆ ಭೋಜನಕ್ಕೆ ಬರಬೇಕೆಂದು ಆಮಂತ್ರಿಸಿದನು. ಮನೆಗೆ ತೆರಳಿ ಬಾಗಿಲು ತಟ್ಟಿದನು. ಒಳಗೆ ಅವಳ ಉಪಪತಿ ಇದ್ದುದರಿಂದ ಅವನ

ಹೆಂಡತಿ ಗಾಬರಿಯಾದಳು. ಮಂಚದ ಕೆಳಗೆ ಅವನನ್ನು ಮಲಗಿಸಿ ಬಾಗಿಲು ತೆರೆದಳು. ಶಿಲ್ಪಿಯು ಒಳಗೆ ತೆರಳಿದವನು ಯಾವ ಉದ್ವೇಗವನ್ನೂ ತೋರಿಸಲಿಲ್ಲ. ಸನ್ಯಾಸಿಯನ್ನು ಒಂದೆಡೆ ಕುಳ್ಳಿರಿಸಿ, ಆರು ಜನರಿಗೆ ಅಡಿಗೆ ಮಾಡಬೇಕೆಂದು ತನ್ನ ಹೆಂಡತಿಗೆ ತಿಳಿಸಿದನು. . ಅವಳು ಅದರಂತೆ ತಯಾರಿಸಿದ ಮೇಲೆ ಶಿಲ್ಪಿಯು ಆ ಸನ್ಯಾಸಿಯೊಡನೆ ಊಟಕ್ಕೆ ಕುಳಿತನು. ಆಮೇಲೆ ಅವನು ತನ್ನ ಹೆಂಡತಿಯನ್ನು ಕರೆದು "ನಿನ್ನ ಉಪಪತಿಯನ್ನೂ ಕರೆ. ಅವನಿಗೂ ಹಸಿವಾಗಿರಬಹುದು" ಎಂದನು. ಅವಳು ಕರೆಯಲು ಅವನು ಮಂಚದ ಬುಡದಿಂದ ಎದ್ದು ಬಂದು ಎಲೆಯ ಮೇಲೆ ಕುಳಿತನು. ಆಮೇಲೆ ಆ ಶಿಲ್ಪಿಯು ಸನ್ಯಾಸಿಯ ಕಡೆಗೆ ಹೊರಳಿ "ನಿನ್ನ ಸ್ತ್ರೀಯನ್ನು ನಿರ್ಮಾಣ ಮಾಡು. ಅವಳೂ ಊಟ ಮಾಡಲಿ" ಎಂದನು. ಅವನು ಜಡೆಯಿಂದ ಬಿಲ್ವಪತ್ರೆ ತೆಗೆದು ಅವನ ಸ್ತ್ರೀಯನ್ನು ರಚಿಸಿದನು. ಅಮೇಲೆ ಅ ಶಿಲ್ಪಿಯು ಆ ಸ್ತ್ರೀಯನ್ನು ಉದ್ದೇಶಿಸಿ "ನಿನ್ನ ಉಪಪತಿಯನ್ನೂ ನಿರ್ಮಾಣ ಮಾಡು. ಅವನೂ ಊಟ ಮಾಡಲಿ" ಎಂದನು. ಆಗ ಅವಳು ಜಡೆಯಿಂದ ಒಂದು ವಸ್ತುವನ್ನು ತೆಗೆದು ತನ್ನ ಉಪಪತಿಯನ್ನು ನಿರ್ಮಿಸಿದಳು. ಊಟವಾದ ಮೇಲೆ ಆ ಸನ್ಯಾಸಿಯು ಎಲ್ಲರನ್ನೂ ತೊರೆದು ಕಾಡಿಗೆ ಹೊರಟುಹೋದನು. ಶಿಲ್ಪಿಯೂ ತನ್ನ ಹೆಂಡತಿಯನ್ನು ತೊರೆದನು".

ಮಹಾರಾಜ, ಅದರಂತೆ ಸ್ತ್ರೀಯರ ಶೀಲವಿದೆ. ನಾನು ಮದುವೆ ಮಾಡಿಕೊಳ್ಳುವದಿಲ್ಲ ಎಂದನು. ಅದರಂತೆ ರಾಜಪುತ್ರಿಯೇ ಸ್ತ್ರೀಯರ ಚರಿತ್ರೆ ಎಂದು ಪ್ರತಾಪಸೇನನು ಕಲಾವತಿಗೆ ಹೇಳಿದನು. ಆಗ ಕಲಾವತಿಯು ಅದಕ್ಕೊಪ್ಪದೆ ಪುರುಷರು ಕೆಟ್ಟವರೆಂದು ಹೇಳಿ ಆ ಬಗ್ಗೆ ತಾನೊಂದು ಉದಾಹರಣೆಯನ್ನು ಕೊಡುವದಾಗಿ ನುಡಿದಳು.

---

## ೩೫. ಮನೋರಮೆಯ ಕಥೆ

ಪ್ರಾಚೀನ ಕಾಲದಲ್ಲಿ ವಿಕ್ರಮಪುರ ಎಂಬ ನಗರದಲ್ಲಿ ರಾಜಾರಾಮನೆಂಬ ಒಬ್ಬ ಧನಿಕನಿದ್ದನು. ಅವನಿಗೆ ಪುತ್ರಸಂತಾನವೇ ಇರಲಿಲ್ಲ. ಆದರೆ

ಮನೋರಮೆ ಎಂಬ ಮಗಳಿದ್ದಳು. ಅವಳು ಅತ್ಯಂತ ಲಾವಣ್ಯವತಿಯೂ ಸುಶೀಲಳೂ ಧರ್ಮ ನಿರತಳೂ ಆಗಿದ್ದಳು. ಅವಳು ವಯಸ್ಸಿಗೆ ಬಂದ ಕೂಡಲೇ ಅವಳ ತಂದೆಯು ಅವಳಿಗೆ ಯೋಗ್ಯನಾದ ಒಬ್ಬ ವರನನ್ನು ಹುಡುಕ್ಕಿ ವಿವಾಹ ಕಾರ್ಯ ನೆರವೇರಿಸಿಕೊಟ್ಟನು. ಗಂಡಹೆಂಡತಿ ಸುಖ ದಿಂದಲೇ ಇರುತಿದ್ದರು. ಕಾಲಕ್ರಮೇಣ ಅವರಿಗೆ ಬಹಳ ಬಡತನ ಬಂದಿತು. ಮನೆಯಲ್ಲಿ ಜೀವನ ನಿರ್ವಾಹವೂ ಕಠಿನವಾಗಿ ಪರಿಣಮಿಸಿತು. ಆಗ ಆ ಮನೋರಮೆಯ ಪತಿಯು ದೇಶಾಂತರ ತೆರಳಿ ಧನ ಸಂಪಾದನೆ ಮಾಡಿ ಕೊಂಡು ಬರುವುದಾಗಿ ನುಡಿದನು. ಮತ್ತು ತನ್ನ ತಮ್ಮನನ್ನು ಮನೆಯಲ್ಲಿ ಇರಿಸಿ ಹೆಂಡತಿಯನ್ನು ಸಂತೈಸಿ ಹೊರಟು ಹೋದನು.

ಇತ್ತ ಮನೋರಮೆಯು ಗೃಹಕೃತ್ಯದಲ್ಲೇ ತಲ್ಲೀನಳಾಗಿ ಸದಾ ಪತಿಯ ಆಗಮನವನ್ನೇ ನಿರೀಕ್ಷಿಸುತ್ತಾ ವಾಸಿಸುತಿದ್ದಳು. ಬಹಳ ಕಾಲ ದಾಟಿ ಹೋದರೂ ಅವಳ ಗಂಡನು ಮರಳಲಿಲ್ಲ. ಅವಳ ರೂಪಲಾವಣ್ಯ ವನ್ನು ಕಂಡ ಮೈದುನನೇ ಅವಳನ್ನು ಮೋಹಿಸತೊಡಗಿದನು. "ಅವನು ವಿದೇಶಕ್ಕೆ ತೆರಳಿದವನು ಜೀವದಿಂದಿದ್ದಾನೋ ಇಲ್ಲವೋ ? ನೀನೂ ನಾನೂ ರಹಸ್ಯವಾಗಿ ಪ್ರೇಮ ಮಾಡೋಣ" ಎಂದು ಅವನು ಹೇಳತೊಡಗಿದನು. ಆದರೆ ಮನೋರಮೆಗೆ ಅವನ ಪ್ರೇಮಾಲಾಪ ಎಳ್ಳಷ್ಟೂ ಇಷ್ಟವಾಗಲಿಲ್ಲ. "ಗುಪ್ತವಾಗಿ ಮಾಡಿದರೆ ಅದು ದೇವರಿಗೆ ಗೊತ್ತಾಗದೇ ಇರುತ್ತದೆಯೇ ? ಇಂತಹ ಅವಿಚಾರದ ಮಾತುಗಳನ್ನು ನನ್ನೊಂದಿಗೆ ಆಡುವುದು ಉಚಿತವಲ್ಲ" ಎಂದು ಹೇಳಿದಳು. ಆದರೂ ಅವನು ಕೇಳಲಿಲ್ಲ. ಹೇಗಾದರೂ ಮಾಡಿ ಅವಳನ್ನು ವಶಪಡಿಸಿಕೊಳ್ಳಬೇಕೆಂದು ಯತ್ನಿಸಿದನು. ಆದರೆ ಅದು ಸಾಧ್ಯ ವಾಗಲಿಲ್ಲ. ಆಗ ಅವನಿಗೆ ಸಿಟ್ಟು ಬಂದಿತು. ಅವಳಿಗೆ ಬುದ್ಧಿಗಲಿಸಬೇಕೆಂದು ಅವನು ನಿಶ್ಚಯಿಸಿ ತನ್ನ ಕೆಲವು ಗೆಳೆಯರೊಡನೆ ದುಷ್ಟ ತಂತ್ರ ಹೂಡಿದನು. ಅವಳು ಒಬ್ಬಳೇ ಇದ್ದ ಸಂದರ್ಭ ನೋಡಿ ಒಬ್ಬನನ್ನು ಮನೆಯೊಳಗೆ ಕಳಿಸಿ ದನು. ಆ ಮೇಲೆ ಎರಡು ಮೂರು ಜನರೊಂದಿಗೆ ಹೊರಗೆ ಬಂದು ಗುಲ್ಲೆಬ್ಬಿ ಸಿದನು. ಅಕ್ಕಪಕ್ಕದ ಜನರು ಬರಲು "ನನ್ನ ಅಣ್ಣನ ಹೆಂಡತಿಯು ಯಾರೋ ಒಬ್ಬ ಉಪಪತಿಯನ್ನು ಕರೆದುಕೊಂಡಿರುವಳು" ಎಂದು ಹೇಳಿ ದನು. ಅವರೆಲ್ಲರೂ ಒಳಗೆ ಬಂದಾಗ ಒಳಗಿದ್ದವನು ಬೇರೊಂದು ದಾರಿ

ಯಿಂದ ಅವರೆಲ್ಲರಿಗೂ ಕಾಣುವಂತೆಯೇ ಓಡಿ ಹೋದನು. ಆಗ ಅಲ್ಲಿ ಕೂಡಿದವರೆಲ್ಲರೂ ಅವಳು ದುರಾಚಾರತನ ನಡೆಸಿರುವಳೆಂದು ಅವಳನ್ನು ಪರಿಪರಿಯಾಗಿ ನಿಂದಿಸಿದರು. ದೂರು ಆ ಊರಿನ ರಾಜನ ವರೆಗೂ ಹೋಯಿತು. ಅವಳನ್ನು ಕುತ್ತಿಗೆಯ ವರೆಗೆ ಹೂಳಿಡಬೇಕೆಂದು ರಾಜನು ಆಜ್ಞಾಪಿಸಿದನು.

ಮಧ್ಯರಾತ್ರಿ ಮನೋರಮೆಯನ್ನು ಹುಗಿದಿದ್ದ ಮಾರ್ಗವಾಗಿ ಒಬ್ಬ ಕಳ್ಳನು ಹೋಗುತಿದ್ದನು. ಆಗ ನರಳುವ ಧ್ವನಿಕೇಳಿ ಅವಳ ಸಮೀಪ ಬಂದನು. ಅಲ್ಲಿ ಬಂದು ನೋಡಲು ರುಂಡ ಮಾತ್ರ ಕಂಡಿತು. ಕಷ್ಟದಿಂದ ಮನೋರ ಮೆಯು ತನ್ನ ಅವಸ್ಥೆಯನ್ನು ತಿಳಿಸಿದಳು. ಆಗ ಆ ಕಳ್ಳನು ಅವಳನ್ನು ಮೇಲ ಕ್ಕೆತ್ತಿ ತನ್ನ ಮನೆಗೆ ಕರೆದುಕೊಂಡು ಹೋಗಿ ಅವಳನ್ನು ಚೆನ್ನಾಗಿ ನಡೆಸಿ ಕೊಂಡು ಬರುವಂತೆ ತನ್ನ ಹೆಂಡತಿಗೆ ಹೇಳಿದನು. ಎಲ್ಲರೂ ಅವಳನ್ನು ಗೌರ ವದಿಂದ ನಡೆಸಿಕೊಂಡು ಬಂದರು. ಆದರೆ ಆ ಕಳ್ಳನ ಮನೆಯಲ್ಲಿದ್ದ ಆಳು ಮಗನೊಬ್ಬನು ಮನೋರಮೆಯ ಸೌಂದರ್ಯ ಕಂಡು ಮೋಹಿತನಾದನು. ಮತ್ತು ಆವಳನ್ನು ಕಂಡು ಪ್ರೇಮ ಚೇಷ್ಟೆಗಳನ್ನು ಮಾಡಲಾರಂಭಿಸಿದನು. ಅವಳು ಎಷ್ಟು ಪರಿಯಾಗಿ ತಡೆದರೂ ಅವನು ಕೇಳಲಿಲ್ಲ. ಬಲಾತ್ಕಾರ ಮಾಡಿ ದರೂ ಅವಳು ಬಗ್ಗಲಿಲ್ಲ. ಆಗ ಅವನು ರೇಗಿ ಕಳ್ಳನ ಮಗನನ್ನು ತಾನೇ ಕೊಂದು ಮನೋರಮೆಯ ಮೇಲೆ ಆರೋಪ ಹೊರಿಸಿದನು. ಕಳ್ಳನು ಅದನ್ನು ನಂಬದಿದ್ದರೂ ಆ ಸ್ತ್ರೀಗೆ ನೂರು ವರಹಗಳನ್ನು ಕೊಟ್ಟು ತನ್ನ ಮನೆಯನ್ನು ಬಿಟ್ಟು ಹೋಗಬೇಕೆಂದು ತಿಳಿಸಿದನು. ಅದರಂತೆ ಮನೋರಮೆಯು ಅಲ್ಲಿಂದ ಹೊರಟು ನೆರೆ ಊರಿನಲ್ಲಿ ವಾಸಿಸತೊಡಗಿದಳು.

ಒಂದು ದಿನ ಕೆಲವು ಸಿಪಾಯಿಗಳು ಒಬ್ಬನ ಕೈಗಳಿಗೆ ಬೇಡಿ ತೊಡಿಸಿ ಆ ಹಳ್ಳಿಯ ಮೂಲಕ ಕರೆದೊಯ್ಯುತ್ತಿದ್ದರು. ಮನೋರಮೆಯು ಅದನ್ನು ಕಂಡು ಅವನು ಮಾಡಿದ ಅಪರಾಧ ಯಾವುದು ಎಂದು ಕೇಳಿದರು. ಅವನು ತೆಗೆದುಕೊಂಡಿದ್ದ ಸಾಲವನ್ನು ಕೊಡದೇ ಇದ್ದುದರಿಂದ ಅವನನ್ನು ಬಂಧಿಸಿ ಒಯ್ಯುತ್ತಿದ್ದೇವೆಂದು ಅವರು ಹೇಳಿದರು. ಆಗ ಮನೋರಮೆಯು ತನಗೆ ಕಳ್ಳರು ಕೊಟ್ಟದ್ದ ಹಣವನ್ನು ತಂದು ಅವರಿಗೆ ಕೊಟ್ಟು, ಅವನನ್ನು ಬಿಡಿಸಿದಳು. ಅವಳು ಹೊರಟು ಹೋದ ಮೇಲೆ ಅವಳು ತನ್ನ ಹೆಂಡತಿ

ಎಂದು ಅವನು ಆ ಸಿಪಾಯಿಗಳಿಗೆ ಹೇಳಿ ಅವಳ ಬೆನ್ನ ಹಿಂದೆಯೇ ಬಂದನು. ಅವಳನ್ನು ಕಂಡ ಕೂಡಲೇ ಅವಳಿಗೆ ನಮಸ್ಕರಿಸಿ ಅವಳು ಮಾಡಿದ ಉಪಕಾರಕ್ಕಾಗಿ ಕೃತಜ್ಞತೆಯನ್ನರ್ಪಿಸಿದನು. ಅವರಿಬ್ಬರ ಾ ಮಾತನಾಡುತ್ತ ಹೋಗುತ್ತಿದ್ದಾಗ ನಿರ್ಜನವಾದ ಸ್ಥಾನಕ್ಕೆ ಬಂದರು. ಅಲ್ಲಿ ಅವನು ಯಾರೂ ಇಲ್ಲದಿದ್ದುದನ್ನು ಕಂಡು "ಮನೋಹರಿಯೇ, ನೀನು ನನ್ನ ಪತ್ನಿಯಾಗು. ನನ್ನ ಮನೆಗೆ ಬಾ'' ಎಂದು ಹೇಳಿ ಅವಳನ್ನು ಹಿಡಿದನು. ಅವಳು ಬಿಡಿಸಿಕೊಳ್ಳಲು ಯತ್ನಿಸಿದಾಗ ಬಿಡದೆ ಅವಳನ್ನು ನೆಲದ ಮೇಲೆ ಕೆಡವಿ ಅವಳ ಸೀರೆಯನ್ನು ಬಿಚ್ಚಿ ಬಲಾತ್ಕರಿಸಲು ಯತ್ನಿಸಿದನು. ಅವಳು ಗಟ್ಟಿಯಾಗಿ ರೋದಿಸತೊಡಗಿದಳು. ಅಷ್ಟರಲ್ಲಿ ಪೊದೆಗಳ ಎಡೆಯಿಂದ ಒಂದು ಹುಲಿಯು ಗರ್ಜಿಸುತ್ತ ಬಂದಿತು. ಆಗ ಅವನು ಹೆದರಿ ಪ್ರಾಣ ಭಯದಿಂದ ಓಡತೊಡಗಿದನು. ಅವಳು ಹುಲಿಯ ಇದಿರು ಹೋದರೂ ಹುಲಿಯು ಅವಳ ಮೇಲೆ ಹಾರದೆ ಬೇರೆ ಕಡೆ ಸರಿದುಹೋಯ್ತು. ಅವಳು ಅದರ ಬೆನ್ನ ಹಿಂದೆ ಓಡುತ್ತ ಸಮುದ್ರದ ಕಾಡಿಗೆ ಬಂದಳು. ಅಷ್ಟರಲ್ಲಿ ಅವನೂ ಅಲ್ಲಿ ಬಂದನು. ಪುನಃ ಆ ಮನೋರಮೆಯನ್ನು ಕಂಡು "ನನ್ನ ಅದೃಷ್ಟ ಚನ್ನಾಗಿದೆ. ಇಲ್ಲದಿದ್ದರೆ ನಾನು ನೀನು ಮತ್ತೆ ಭೆಟ್ಟಿಯಾಗುತ್ತಿದ್ದಿಲ್ಲ. ದೇವರು ನಮ್ಮಿಬ್ಬರ ಸಮಾಗಮವನ್ನೇ ಇಚ್ಛಿಸಿ ಈ ರೀತಿ ಪರಸ್ಪರ ಭೆಟ್ಟಿ ಮಾಡಿಸಿದನು. ಅದನ್ನು ತಿಳಿದು ಇನ್ನಾದರೂ ನನ್ನ ಮನೋಭಿಲಾಷೆಯನ್ನು ಪೂರ್ಣಗೊಳಿಸು'' ಎಂದು ಹೇಳಿದನು. ಮನೋರಮೆಯು ಆಗ ಕೂಡಾ ಅವನನ್ನು ಪ್ರೇಮಿಸಲು ನಿರಾಕರಿಸಿದಳು. ಅದರಿಂದ ಅವನು ರೇಗಿ ಸಮುದ್ರ ದಂಡೆಯಲ್ಲಿದ್ದ ಬೆಸ್ತರನ್ನು ಕರೆದು ತನ್ನ ಹೆಂಡತಿಯನ್ನು ವಿಕ್ರಯಿಸುವದಾಗಿ ನುಡಿದನು. ಮನೋರಮೆಯ ರೂಪ-ಲಾವಣ್ಯವನ್ನು ನೋಡಿದ ಒಬ್ಬ ದೋಣಿಯವನು ಅವಳನ್ನು ಕೊಂಡುಕೊಳ್ಳಲೊಪ್ಪಿ ಹಣವನ್ನು ಕೊಟ್ಟನು. ಅವಳನ್ನು ದೋಣಿಗೆ ಬರುವಂತೆ ಹೇಳಿದನು. ಅವಳು ಕೇಳಲಿಲ್ಲ. ಆಗ ಅವನು ಅವಳನ್ನು ಎತ್ತಿಕೊಂಡು ಹೋಗಿ ದೋಣಿಯಲ್ಲಿ ಕುಳ್ಳಿರಿಸಿ ದೋಣಿಯನ್ನು ಸಮುದ್ರದಲ್ಲಿ ಹಾಯ್ಸಿದನು. ಕತ್ತಲಾದ ಮೇಲೆ ಆ ದೋಣಿಯಲ್ಲಿದ್ದ ಹಣ್ಣು-ಹಂಪಲಗಳನ್ನು ಅವಳಿಗೆ ತಿನ್ನಲು ಕೊಟ್ಟು ತಾನೂ ತಿಂದನು. ಆಮೇಲೆ ಅವಳ ಮೇಲೆ ಆ ದೋಣಿಯವನಿಗೆ ಆಸೆ

ಯಾಯಿತು. ಅವಳ ಹತ್ತಿರ ಬಂದು ಪ್ರೇಮಚೇಷ್ಟೆ ಮಾಡಲಾರಂಭಿಸಿದನು. ಅವಳು ಹಿಂದೆ ಸರಿಯಲು ಬಲಾತ್ಕಾರ ನಡೆಸಲಾರಂಭಿಸಿದನು. ಅಷ್ಟರಲ್ಲಿ ದೊಡ್ಡ ಬಿರುಗಾಳಿ ಬೀಸಿತು. ತೆರೆಗಳು ಉಕ್ಕಿದವು. ಅವುಗಳ ಹೊಡೆತಕ್ಕೆ ದೋಣಿ ತಲೆಕೆಳಗಾಯಿತು. ಬೆಸ್ತರವನು ಒಂದು ಕಡೆ ಹೋದನು. ಮನೋರಮೆಯು ಒಂದೆಡೆ ದಂಡೆ ಸೇರಿದಳು.

ಆಗ ಆ ದೇಶದ ರಾಣಿಯು ತನ್ನ ಸಖೀ ಜನರೊಂದಿಗೆ ಸಮುದ್ರ ದಂಡೆಗೆ ವಿಹಾರಕ್ಕೆ ಬಂದಿದ್ದಳು. ದಂಡೆಯಲ್ಲಿ ಬಿದ್ದಿದ್ದ ಮನೋರಮೆಯನ್ನು ಕಂಡು ದಯೆಯಿಂದ ಅವಳಿಗೆ ಬೇರೆ ಬಟ್ಟೆಗಳನ್ನು ಕೊಟ್ಟು ಅವಳನ್ನು ತನ್ನೊಂದಿಗೆ ಕರೆದುಕೊಂಡು ಹೋದಳು. ಮನೋರಮೆಯ ರೂಪ ಮತ್ತು ಶೀಲಗಳನ್ನು ಕಂಡು ರಾಣಿಗೆ ಅವಳ ಮೇಲೆ ಬಹಳ ಅಚ್ಚುಮೆಚ್ಚು ಉಂಟಾಯಿತು. ಅವಳನ್ನು ತನ್ನ ಮಗಳಂತೆಯೇ ಸಾಕಿ ಸಲಹಿದಳು.

ಆ ರಾಣಿಯು ತೀರಿಕೊಂಡ ಮೇಲೆ ಮನೋರಮೆಯನ್ನೇ ಅರಸಿಯನ್ನಾಗಿ ಆರಿಸಿದರು. ಅವಳು ಆಮೇಲೆ ಪ್ರಜೆಗಳನ್ನು ಪ್ರೀತಿಯಿಂದ ನಡೆಸಿಕೊಳ್ಳಲು ತೊಡಗಿದಳು. ಬಡಬಗ್ಗರಿಗೆ ದಾನಧರ್ಮಗಳನ್ನು ಮಾಡಿದಳು. ಯಾವಾಗಲೂ ದೈವಚಿಂತನೆಯಲ್ಲಿ ಕಾಲಕಳೆಯುತ್ತಿದ್ದಳು. ದೇವರು ಅವಳ ಭಕ್ತಿಗೆ ಮೆಚ್ಚಿ ವರಪ್ರಸಾದ ನೀಡಿದನೋ ಎಂಬಂತೆ ಅವಳ ದರ್ಶನ ಮಾತ್ರದಿಂದ ರೋಗಿಗಳ ರೋಗಗಳು ಗುಣವಾಗತೊಡಗಿದುವು. ಕುರುಡರಿಗೆ ದೃಷ್ಟಿ ಬರತೊಡಗಿತು. ಇದರಿಂದ ಅವಳ ಕೀರ್ತಿ ನಾನಾ ಕಡೆಗೆ ಹಬ್ಬಿತು. ಅವಳ ಮೈದುನನು ತಾನು ಮಾಡಿದ್ದ ಪಾಪಕ್ಕೆ ಕುರುಡನಾಗಿ ಹೋಗಿದ್ದ. ಆದುದರಿಂದ ಅವಳು ತನ್ನ ಅಣ್ಣನ ಹೆಂಡತಿಯೆಂದು ತಿಳಿಯದೆ ಅವಳನ್ನು ಕಾಣಲು ಬಂದ. ಕಳ್ಳನ ಸೇವಕನೂ ಯಜಮಾನನೊಡನೆ ಅವಳ ಆಶ್ರಯ ಅಪೇಕ್ಷಿಸಿ ಬಂದನು. ಅವಳನ್ನು ನಾನಾಪರಿಯಾಗಿ ಪೀಡಿಸಿ ಬೆಸ್ತರಿಗೆ ವಿಕ್ರಯಿಸಿದ್ದ ಕಾಮುಕನೂ ಅರ್ಧಾಂಗ ವಾಯುಗೊಳಗಾದುದರಿಂದ ಅವನೂ ಅವಳ ದರ್ಶನಾಪೇಕ್ಷೆಯಿಂದ ಹೊರಟನು. ಅದೇ ಕಾಲಕ್ಕೆ ಅವಳ ಪತಿಯು ವಿದೇಶದಿಂದ ತನ್ನ ಮನೆಗೆ ಮರಳಿದನು. ಮನೆಯಲ್ಲಿ ಸತಿಯನ್ನು ಕಾಣದೆ ಚಿಂತಾತುರನಾಗಿ ಮನೋರಮೆಯ ರಾಜ್ಯಕ್ಕೆ ಬಂದು ಅವಳ ಆಶ್ರಯದಲ್ಲಾದರೂ ಇರಬೇಕೆಂದು ಅವನೂ ಹೊರಟು ಬಂದನು.

ಅವರೆಲ್ಲರೂ ರಾಣಿಯ ಸಭೆಗೆ ಬಂದರು. ಮನೋರಮೆ ಅವರೆಲ್ಲರ ಗುರುತು ಹತ್ತಿತು. ಆದರೆ ಅವರಿಗೆ ಗುರುತಾಗಲಿಲ್ಲ. ತನ್ನ ಮೈದುನನು ಅವಳಿಗೆ ನಮಸ್ಕರಿಸಿ, "ದೇವೀ, ನನ್ನ ಮೇಲೆ ದಯೆದೋರು. ನನಗೆ ದೃಷ್ಟಿ ಕೊಡು" ಎಂದು ಪ್ರಾರ್ಥಿಸಿದನು. ಆಗ ಅವಳು "ನೀನು ಪುಣ್ಯ ಜೀವಿಯಲ್ಲ. ಯಾವ ಸ್ತ್ರೀಯ ಮೇಲಾದರೂ ಬಲಾತ್ಕಾರ ನಡೆಸಿದ್ದೆಯೋ ಹೇಗೆ ? ನಿನ್ನ ಅಣ್ಣನ ಪತ್ನಿಯನ್ನು ಮೋಹಿಸಿ ಅವಳು ದುರಾಚಾರಕ್ಕೆ ಒಪ್ಪದೇ ಇರಲು ಅನ್ಯರ ಮೇಲೆ ಅಪವಾದ ಹೊರಿಸಲಿಲ್ಲವೇ ?" ಎಂದು ಕೇಳಿದಳು. ಆಗ ಅವನು ಭಯಭೀತನಾಗಿ ಇವಳಿಗೆ ಭೂತ ವರ್ತಮಾನ ಹಾಗೂ ಭವಿಷ್ಯತ್ತುಗಳೆಲ್ಲ ತಿಳಿದಿದೆಯೆಂದು ನಂಬಿ ಸತ್ಯವನ್ನು ಹೇಳಿದನು. ಆಗ ಅಲ್ಲೇ ಇದ್ದ ಅವನ ಅಣ್ಣನು ರೇಗಿ ತಮ್ಮನನ್ನು ಕೊಲ್ಲಲ್ಲು ಕತ್ತಿ ಎತ್ತಿದನು. ಆದರೆ ರಾಣಿಯ ಸಿಪಾಯಿಗಳು ತಡೆದರು. ಆ ಮೇಲೆ ಕಳ್ಳನ ಸೇವಕನೂ ತಾನು ಮಾಡಿದ ಕೊಲೆಯನ್ನು ಹೇಳಿ ತನ್ನ ತಪ್ಪನ್ನು ಒಪ್ಪಿಕೊಂಡನು. ಅದನ್ನು ಕೇಳಿ ಅವನ ಯಜಮಾನನಿಗೆ ಸಿಟ್ಟು ಬಂದಿತು. ಸೇವಕನ ಮೇಲೆ ಬಿದ್ದು ಅವನನ್ನು ಒದೆಯತೊಡಗಿದನು. ಆಗಲೂ ಸಿಪಾಯಿಗಳು ಬಂದು ಬಿಡಿಸಿದರು. ಆ ಮೇಲೆ ಮನೋರಮೆಯಿಂದ ನೂರು ವರಹಗಳನ್ನು ಪಡೆದ ಉಪಕಾರಕ್ಕೆ ಅವಳನ್ನೇ ಕಾಮಿಸಿ, ತನ್ನ ಆಶೆ ಕೈಗೂಡದೇ ಇರಲು ಅವಳನ್ನು ಬೆಸ್ತರಿಗೆ ವಿಕ್ರಯಿಸಿದ್ದ ದುಷ್ಟನೂ ತನ್ನ ಕಥೆಯನ್ನು ಹೇಳಿದನು. ಆಗ ಅವಳು ಎಲ್ಲರ ಅಪರಾಧವನ್ನು ಕ್ಷಮಿಸಿ ಅನನ್ಯ ಭಕ್ತಿಯಿಂದ ದೇವರನ್ನು ಪ್ರಾರ್ಥಿಸಲು ಅವರೆಲ್ಲರ ರೋಗಗಳೂ ಗುಣವಾದುವು. ಅವರೆಲ್ಲರಿಗೂ ಬುದ್ಧಿವಾದ ಹೇಳಿ ಯೋಗ್ಯ ದ್ರವ್ಯಗಳನ್ನು ಕೊಟ್ಟು ಕಳಿಸಿದಳು. ಆ ಮೇಲೆ ತನ್ನ ಪತಿಯನ್ನು ಏಕಾಂತ ಸ್ಥಳಕ್ಕೆ ಕರೆಸಿಕೊಂಡು ಎಲ್ಲ ಸಂಗತಿಯನ್ನು ನಿವೇದಿಸಿದಳು. ಮನೋರಮೆಯು ಅನುಭವಿಸಿದ ಕಷ್ಟಗಳನ್ನೆಲ್ಲ ಕೇಳಿ ಅವನಿಗೆ ಬಹಳ ದುಃಖವಾಯಿತು. ಆದರೆ ಅವಳ ಗುಣಶೀಲಗಳನ್ನು ನೆನಸಿಕೊಂಡು ಅವನು ಸಂತೋಷಪಟ್ಟನು.

ರಾಜಪುತ್ರ, ಮನೋರಮೆಯು ಅಷ್ಟು ಉತ್ತಮ ಸ್ತ್ರೀಯಾಗಿದ್ದರೂ ಕೂಡಾ ಅವಳಿಗೆ ಪುರುಷರು ಯಾವ ಯಾವ ಕಷ್ಟಗಳನ್ನು ಕೊಟ್ಟರು ! ಅದನ್ನು ನೆನೆದು ನೆನಸಿ ನಾನೂ ಈ ಪುರುಷರು ದುಷ್ಟರೆಂದು ನಂಬಿದ್ದೇನೆ.

ಮದುವೆಯಾಗುವ ಇಚ್ಛೆ ನನಗಿಲ್ಲ. ಅದಕ್ಕಾಗಿ ಈ ಪ್ರಶ್ನೆಗಳನ್ನು ಕೇಳುವ ಪಣತೊಟ್ಟಿದ್ದೇನೆ" ಎಂದು ಕಲಾವತಿಯು ಹೇಳಿದಳು. ಅವನ್ನು ಕೇಳಿ ಪ್ರತಾಪಸೇನನು "ರಾಜಪುತ್ರಿ, ಈ ರೀತಿ ಆತನು ಅಭಿಪ್ರಾಯಪಡುವುದು ಸರಿಯಲ್ಲ. ಈ ಕೈಯ್ಯ ಐದು ಬೆರಳುಗಳು ಒಂದೇ ಸಮನಾಗಿಲ್ಲ. ಅದರಂತೆ ಲೋಕದ ಸ್ತ್ರೀ ಪುರುಷರಾದರೂ ಸಮಶೀಲ ಸಂಪನ್ನರಲ್ಲ." ಎಂದು ಹೇಳಿ ಸ್ತ್ರೀಯರ ಕರ್ಮದ ಒಂದು ಉದಾಹರಣೆಯನ್ನು ಹೇಳತೊಡಗಿದನು.

——

## ೩೬. ಲತಾದೇವಿಯು ಕಥೆ

ಪೂರ್ವಕಾಲದಲ್ಲಿ ಅಶ್ವಪುರವೆಂಬ ನಗರದಲ್ಲಿ ಮಹಾಬಾಹು ಎಂಬೊಬ್ಬ ರಾಜನಿದ್ದನು. ಅವನಿಗೆ ಮಹಾಬಲನೆಂಬ ಒಬ್ಬ ಮಗನಿದ್ದನು. ಈ ರಾಜಪುತ್ರನಿಗೆ ಬೇಟೆಯೆಂದರೆ ಇಷ್ಟ. ಒಂದು ದಿನ ಇವನು ಕಾಡಿಗೆ ಬೇಟೆಗೆ ಹೋಗಿರಲು ಬಿಸಿಲಿಗೆ ಬಹಳ ಬಾಯಾರಿದನು. ನೀರನ್ನು ಹುಡುಕುತ್ತ ತೆರಳಲು ಕಾಡಿನ ಮಧ್ಯದಲ್ಲಿ ಒಂದು ಕೊಳ ಕಾಣಿಸಿತು. ಅದರ ಬಳಿಯಲ್ಲೇ ಒಂದು ಮರದಡಿ ಒಬ್ಬ ಯತಿಯು ಧ್ಯಾನ ಮಗ್ನನಾಗಿ ಕುಳಿತಿದ್ದನು. ಮಹಾಬಲನು ಯತಿಯನ್ನು ಕಂಡ ಕೂಡಲೇ ಅವನಿಗೆ ನಮಸ್ಕರಿಸಿದನು. ಆದರೆ ಬಹಳ ಹೊತ್ತಾದರೂ ಆ ಯತಿಯು ಕಣ್ಣು ತೆರೆಯಲೇ ಇಲ್ಲ. ಅಷ್ಟರಲ್ಲಿ ಅವನು ಸಾಕಿದ್ದ ಗಿಳಿಯು "ಸ್ವಾಮಿ, ಆಶ್ರಮಕ್ಕೆ ಒಬ್ಬ ರಾಜಪುತ್ರನು ಬಂದಿರುವನು. ಅತಿಥಿಯನ್ನು ಸ್ವಾಗತಿಸಿ ಅವನಿಗೆ ಶೀತೋದಕವನ್ನು ಕೊಡಿರಿ" ಎಂದು ಹೇಳಿತು. ಗಿಳಿಯ ಮಾತುಗಳನ್ನು ಕೇಳಿ ಅವನು ಕಣ್ತೆರೆದು ರಾಜಪುತ್ರನನ್ನು ಆಶೀರ್ವದಿಸಿ ಅವನನ್ನು ಸನ್ಮಾನಿಸಿದನು. ವಿಶ್ರಾಂತಿ ತೆಗೆದುಕೊಂಡ ಮೇಲೆ ಆ ರಾಜಪುತ್ರನು ಯತಿಯನ್ನುದ್ದೇಶಿಸಿ "ಮಹಾಸ್ವಾಮಿ, ಈ ಗಿಳಿಯನ್ನು ನನಗೆ ಕೊಡಬೇಕು" ಎಂದು ಕೇಳಿದನು. ಅದನ್ನು ಕೇಳಿ ಯತಿಗೆ ಸ್ವಲ್ಪ ಸಿಟ್ಟು ಬಂದಿತು. "ರಾಜಪುತ್ರ, ನನಗೆ ಈ ಗಿಳಿಯೇ ಮಿತ್ರ. ಅದನ್ನು ಕಳೆದುಕೊಂಡರೆ ಯಾರೊಡನೆ ಮಾತನಾಡಲಿ?" ಎಂದು ಹೇಳಿ ಕೊಡಲು ನಿರಾಕರಿಸಿದನು. ಆಗ ಆ ಗಿಳಿಯು

"ಮಹಾಸ್ವಾಮಿಾ, ಈ ರಾಜಪುತ್ರನು ಕೇಳಿದಂತೆ ನನ್ನನ್ನು ಕೊಟ್ಟುಬಿಡಿರಿ. ಇಲ್ಲದಿದ್ದರೆ ಇವನು ಬಲಾತ್ಕಾರದಿಂದಲಾದರೂ ತೆಗೆದುಕೊಂಡು ಹೋಗದೇ ಬಿಡುವುದಿಲ್ಲ" ಎಂದು ಅಂದಿತು. ಯತಿಯು ನಿರುಪಾಯನಾಗಿ ಆ ಗಿಳಿಯನ್ನು ಕೊಟ್ಟು ಬಿಟ್ಟನು. ರಾಜಪುತ್ರನು ಅದರ ಬದಲು ರತ್ನ ಖಚಿತವಾದ ತನ್ನ ಖಡ್ಗವನ್ನು ಆ ಯತಿಗೆ ಅರ್ಪಿಸಿ ಬಂದನು.

ಗಿಳಿಯನ್ನು ಮಹಾಬಲನು ತನ್ನ ರಾಣಿಗೆ ತಂದು ಒಪ್ಪಿಸಿದನು. ಅದಳು ಯಾವಾಗಲೂ ಅದರೊಡನೆ ಸರಸ ಮಾತುಕತೆ ಆಡತೊಡಗಿದಳು. ಒಂದು ದಿನ ಮಹಾಬಲನು ತನ್ನ ರಾಣಿಯೊಂದಿಗೆ ವಿನೋದ ಸಂಭಾಷಣೆ ಮಾಡುತಿದ್ದನು. ಆಗ ಅದನ ರಾಣಿಯು ಕನ್ನಡಿಯಲ್ಲಿ ತನ್ನ ಮೋರೆಯನ್ನು ನೋಡಿಕೊಳ್ಳುತ್ತ ತನ್ನಷ್ಟು ರೂಪವತಿಯು ಇನ್ನಾವ ರಾಜಪುತ್ರಿಯೂ ಇಲ್ಲವೆಂದು ಹೇಳಿದಳು. ಅದನ್ನು ಕೇಳಿದ ಕೂಡಲೇ ಅಂತಃಪುರದಲ್ಲಿದ್ದ ಆ ಗಿಳಿಯು "ದೇವೀ, ಪ್ರಪಂಚದಲ್ಲಿ ನಿನ್ನಷ್ಟು ಸುಂದರಿಯಾದ ರಾಜತನುಜೆಯಿಲ್ಲವೆಂದು ಬಿಂಕ ತೋರಿಸಬೇಡ ಮಹಾರಾಜ, ಆದಿತ್ಯವರ್ಮನ ಮಗಳ ಮುಂದೆ ನೀನು ಕುರೂಪಿಯೇ ಸರಿ" ಎಂದಿತು. ಅದನ್ನು ಕೇಳಿ ರಾಣಿ ಅಸೂಯೆಯಿಂದ ಕುದಿದಳು. ಆದರೆ ರಾಜಪುತ್ರನಿಗೆ ಮಾತ್ರ ಆದಿತ್ಯವರ್ಮನ ಮಗಳ ಮೇಲೆ ಮೋಹವಾಯಿತು. ಅವಳನ್ನು ಮದುವೆ ಮಾಡಿಕೊಳ್ಳಬೇಕೆಂದು ನಿರ್ಧರಿಸಿದನು. ಮತ್ತು ತನ್ನ ಮನೋಭಿಲಾಷೆಯನ್ನು ಅರಸನಿಗೆ ತಿಳಿಸಿದನು. ಅರಸನು ಎಷ್ಟು ಪರಿಯಾಗಿ ಹೇಳಿದರೂ ಅವನು ಕೇಳಲಿಲ್ಲ. ಮದುವೆಯಾಗಬೇಕೆಂಬೇ ಅವನು ಹಠ ಹಿಡಿದನು. ಆದುದರಿಂದ ಮಹಾಬಾಹು ರಾಜನು ಉಪಾಯವಿಲ್ಲದೆ ತನ್ನ ಮಂತ್ರಿಯೊಬ್ಬನನ್ನು ಕರೆದು ಆದಿತ್ಯವರ್ಮನ ರಾಜ್ಯಕ್ಕೆ ತೆರಳಿ ಅವನ ಪುತ್ರಿಯ ಭಾವಚಿತ್ರ ತಂದುಕೊಡಬೇಕೆಂದು ಆಜ್ಞಾಪಿಸಿದನು.

ಆ ಮಂತ್ರಿಯು ಆದಿತ್ಯವರ್ಮನ ನಗರಕ್ಕೆ ಬಂದು ದೊಡ್ಡದಾದ ಒಂದು ಅಂಗಡಿ ತೆರೆದನು. ಅಲ್ಲಿ ಅತಿ ಅಮೂಲ್ಯವಾದ ಹಾಗೂ ಆ ರಾಜ್ಯದಲ್ಲಿ ಇಲ್ಲದ ಪೀತಾಂಬರ ಮತ್ತು ಇನ್ನಿತರ ವಸ್ತುಗಳನ್ನು ಮಾರಲಿಕ್ಕೆ ಇಟ್ಟನು. ದೊಡ್ಡ ಸರದಾರರೂ ಸೇನಾನಾಯಕರೂ ಮಂತ್ರಿಗಳೂ ಆ ಅಂಗಡಿಗೆ ಬಂದು ಅಮೂಲ್ಯವಾದ ವಸ್ತುಗಳನ್ನು ಕೊಳ್ಳಲು ತೊಡಗಿದರು. ಅದರ

ಸುದ್ದಿ ಅರಮನೆಗೂ ಮುಟ್ಟಿತು. ಅಂತಹ ಭವ್ಯವಾದ ಅಂಗಡಿಯನ್ನು ನೋಡಲು ರಾಜಪುತ್ರಿಯೂ ಬಯಸಿದಳು. ಮತ್ತು ತನ್ನ ಸಖೀ ಜನ ರೊಂದಿಗೆ ಅವಳು ಒಮ್ಮೆ ಆ ಅಂಗಡಿಯನ್ನು ಸಂದರ್ಶಿಸಿದಳು. ಆಗ ಆ ಮಂತ್ರಿಯು ಅವಳಿಗೆ ಗೊತ್ತಾಗದಂತೆ ಅವಳ ಭಾವಚಿತ್ರವನ್ನು ತೆಗೆಸಿದನು. ರಾಜಪುತ್ರಿಯ ದೃಷ್ಟಿ ಅಲ್ಲಿದ್ದ ಒಂದು ಅಮೂಲ್ಯ ಹೂಜೆಯ ಮೇಲೆ ಬಿದ್ದಿತು. ಆ ಹೂಜೆ ಬಂಗಾರದಿಂದ ನಿರ್ಮಿತವಾದದ್ದು. ಅಲ್ಲಲ್ಲಿ ರತ್ನಗಳನ್ನೂ ಜೋಡಿಸಿದ್ದರು. ಅದನ್ನು ಅವಳು ತೆಗೆದುಕೊಂಡು ಹೋದಳು.

ಇತ್ತ ಸಚಿವನು ಮಹಾಬಾಹುವಿನ ರಾಜ್ಯಕ್ಕೆ ಮರಳಿ ಬಂದು ತಾನು ತಂದಿದ್ದ ಆದಿತ್ಯವರ್ಮನ ಮಗಳ ಭಾವಚಿತ್ರವನ್ನು ಒಪ್ಪಿಸಿದನು. ರಾಜತನು ಜೆಯ ಅಪ್ರತಿಮ ರೂಪ ಲಾವಣ್ಯವನ್ನು ಕಂಡು ಎಲ್ಲರೂ ವಿಸ್ಮಿತರಾದರು. ಅವಳನ್ನೇ ತಾನು ಮದುವೆಯಾಗಬೇಕೆಂದು ಮಹಾಬಲನು ಹಠತೊಟ್ಟನು. ಆದರೆ ಮದುವೆ ಅಷ್ಟು ಸುಲಭವಾಗಿರಲಿಲ್ಲ. ಆ ರಾಜಪುತ್ರಿ ಕೂಡಾ ಒಂದು ಪಣ ತೊಟ್ಟಿದ್ದಳು. ತನ್ನರಮನೆಯ ಮುಂದಿರುವ ಕೊಳವನ್ನು ತನ್ನ ಸಂಪತ್ತಿನಿಂದ ಮುಚ್ಚಬಲ್ಲ ರಾಜಪುತ್ರನನ್ನು ಮಾತ್ರ ತಾನು ಮದುವೆಯಾ ಗುವೆನೆಂದು ಅವಳು ನಿರ್ಧರಿಸಿದ್ದಳು. ಹೀಗಾಗಿ ಕನ್ಯಾಪೇಕ್ಷಿಗಳು ಅವಳ ಮಾತೆತ್ತಲು ಹೆದರುತಿದ್ದರು. ಕೆಲವರು ತಮ್ಮ ದೈವಪರೀಕ್ಷೆ ಮಾಡಿ ಸೋತು, ಸೆರೆಮನೆ ಪಾಲಾಗಿದ್ದರು. ಆದುದರಿಂದ ಈ ಲತಾ ದೇವಿ ದುರ್ಲ ಭಳೆಂದು ಮಂತ್ರಿ ಎಚ್ಚರಿಸಿದನು. ಆದರೆ ರಾಜಪುತ್ರನು ಅದಕ್ಕೆ ಕಿವಿಗೊಡ ಲಿಲ್ಲ. ತಾನೇ ತೆರಳಿ ಅವಳನ್ನು ಒಲಿಸಿಕೊಂಡು ಬರುವೆನೆಂದು ಹೊರಟನು.

ಮಹಾಬಲನು ಕುದುರೆಯೇರಿ ಹೊರಟು ಹೋದನು. ದಿನವಿಡೀ ಪ್ರಯಾಣ ಮಾಡಿ ಸಂಜೆ ಒಂದು ಊರು ಸೇರಿದನು. ಅಲ್ಲಿ ವಿಶ್ರಾಂತಿ ತೆಗೆ ದುಕೊಳ್ಳಲು ಒಂದು ಮನೆಯನ್ನು ಹುಡುಕುತ್ತಾ ಹೋದಾಗ ಒಂದು ಆಶ್ರಮ ಬಂತು. ಅಲ್ಲೊಬ್ಬ ವೃದ್ಧನಾದ ಯತಿಯು ಧ್ಯಾನಮಗ್ನನಾಗಿ ದ್ದನು. ಮಹಾಬಲನು ಅವನಿಗೆ ನಮಸ್ಕಾರ ಮಾಡಲು ಅವನು ಕಣ್ದೆರೆದು ಆಶೀರ್ವದಿಸಿ ಮೃದು ಮಧುರ ಮಾತುಗಳಿಂದ ಅವನನ್ನು ಸ್ವಾಗತಿಸಿದನು. ರಾಜಪುತ್ರನು ತಾನು ಪ್ರಯಾಣ ಮಾಡಲು ಹೊರಟ ಕಾರಣವನ್ನು ಆ ಯತಿಗೆ ತಿಳಿಸಲು ಅವನು ತನ್ನ ಮಂತ್ರ ಬಲದಿಂದ ತನ್ನ ಪಾದರಕ್ಷೆಗಳನ್ನೂ

ಕೆಲವು ಮಾತ್ರೆಗಳನ್ನೂ ಕೊಟ್ಟನು. ಆ ಪಾದರಕ್ಷೆಗಳನ್ನು ಹಾಕಿಕೊಂಡ ಕೂಡಲೇ ಆಕಾಶ ಮಾರ್ಗವಾಗಿ ಸಂಚರಿಸಬಹುದಾಗಿತ್ತು. ಮಾತ್ರೆಗಳನ್ನು ಬಾಯಿಯೊಳಗೆ ಇಟ್ಟುಕೊಂಡ ಕೂಡಲೇ ಅದೃಶ್ಯರಾಗುತ್ತಿದ್ದರು. ರಾಜ ಪುತ್ರನು ಅತಿ ಸಂತೋಷದಿಂದ ಅವುಗಳನ್ನು ಪಡೆದುಕೊಂಡನು. ಕುದುರೆ ಯನ್ನು ಅಲ್ಲೇ ಬಿಟ್ಟು ಮರುದಿನ ಮುಂಜಾನೆ ಆ ಪಾದರಕ್ಷೆಗಳ ಸಹಾಯ ದಿಂದ ನಭೋ ಮಾರ್ಗವಾಗಿ ಆಧಿತ್ಯವರ್ಮನ ರಾಜ್ಯಕ್ಕೆ ಹೋದನು.

ಒಂದು ರಾತ್ರಿ ಮಹಾಬಲನು ಆ ಲತಾದೇವಿಯ ಅಂತಃಪುರಕ್ಕೆ ಪ್ರವೇಶಿಸಿದನು. ಅವಳು ಅವನನ್ನು ನೋಡಿ ಗಾಬರಿಯಿಂದ ಶಂಖವನ್ನೂ ದಿದಳು. ಕೂಡಲೇ ಸಿಪಾಯಿಗಳು ಓಡಿ ಬಂದರು. ಅಷ್ಟರಲ್ಲಿ ಅವನು ಅಲ್ಲಿಂದ ಪಾರಾಗಿ ಹೋದನು. ರಾಜಪುತ್ರಿಯು ಸ್ವಪ್ನದಲ್ಲಿ ಏನೋ ಕಂಡು ಕಳವಳ ಪಟ್ಟು ಕೂಗಿಕೊಂಡಳೆಂದು ಅರಮನೆಯಲ್ಲಿದ್ದವರೆಲ್ಲರೂ ಭಾವಿಸಿ ದರು. ಆದರೆ ಮರುದಿನ ಕೂಡ ಮಹಾಬಲನು ರಾತ್ರಿ ಕಾಲದಲ್ಲಿ ಲತಾ ದೇವಿಯ ಏಕಾಂತ ಕೋಣೆಗೆ ಪ್ರವೇಶಿಸಿ, "ನಾನು ದೇವದೂತನು. ನಿನ್ನೆ ರಾತ್ರಿ ನಿನ್ನ ಕೋಣೆಗೆ ಬಂದಿದ್ದೆ. ನೀನು ಹೆದರಿ ಶಂಖಧ್ವನಿ ಮಾಡಿದೆ. ನಾನು ನಿನ್ನ ರೂಪಕ್ಕೆ ಮನಸೋತಿದ್ದೇನೆ. ನನ್ನನ್ನು ಮದುವೆಯಾಗಲು ಒಪ್ಪಿಕೋ. ಇದಕ್ಕೆ ಉತ್ತರ ಬರೆ'' ಎಂಬ ಒಂದು ಪತ್ರವನ್ನು ಬರೆದು ಅವಳ ಹಾಸಿಗೆಯಲ್ಲಿಟ್ಟು ಹೋದನು. ರಾಜಪುತ್ರಿಯು ನಿದ್ದೆಯಿಂದ ಎಚ್ಚತ್ತ ಕೂಡಲೇ ಆ ಪತ್ರವನ್ನು ಕಂಡು ಓದಿ ತನ್ನ ತಂದೆಗೆ ಕಳಿಸಿದಳು. ಆದರೆ ಅವನು ದೇವದೂತನಿರಲಿಕ್ಕಿಲ್ಲ; ಮನುಷ್ಯನೇ ಇರಬೇಕೆಂದು ಆಧಿತ್ಯವರ್ಮನು ಅರ್ಥಮಾಡಿಕೊಂಡನು. ಅವನನ್ನು ಪತ್ತೆ ಹಚ್ಚುವ ಉದ್ದೇಶದಿಂದ "ನಿನ್ನನ್ನು ಮದುವೆಯಾಗಲು ಸಿದ್ಧಳಿದ್ದೇನೆ. ನನ್ನ ತಂದೆಯೂ ಒಪ್ಪಿದು ವನು. ನಾಳೆ ರಾಜಸಭೆಗೆ ಬಾ" ಎಂದು ಅವಳು ಉತ್ತರ ಬರೆವಂತೆ ಮಗ ಳಿಗೆ ಅವನು ತಿಳಿಸಿದನು. ಅದರಂತೆ ಅವಳು ಬರೆದಿಟ್ಟುದುವನ್ನು ಮಹಾ ಬಲನು ಓದಿಕೊಂಡು ನಂಬಿ ಮರುದಿನ ರಾಜೋಚಿತವಾದ ವೇಷಭೂಷಣ ಗಳಿಂದ ರಾಜಸಭೆಗೆ ತೆರಳಿದನು. ಆಧಿತ್ಯವರ್ಮನು ಅವನನ್ನು ಇದಿರ್ಗೊಂಡು ಉಚಿತ ಆಸನದಲ್ಲಿ ಕುಳ್ಳಿರಿಸಿ ಅವನ ಕಥೆಯನ್ನೆಲ್ಲ ಕೇಳಿಕೊಂಡನು. ಆ ಮೇಲೆ ಮಹಾಬಾಹುವಿನ ಮಗನೆಂದೂ ಮನುಷ್ಯನೆಂದೂ ತಿಳಿದುಕೊಂಡ

ಮೇಲೆ ಅವನನ್ನು ಸೆರೆಹಿಡಿದು ಶೂಲಕ್ಕೇರಿಸಲು ಆಜ್ಞಾಪಿಸಿದನು.

ಆದರೆ ಸಿಪಾಯಿಗಳು ಶೂಲಕ್ಕೇರಿಸಲು ರಾಜಸಭೆಯಿಂದ ಹೊರಗೆ ಕರೆದುಕೊಂಡು ಹೋದ ಕೂಡಲೇ ಮಹಾಬಲನು ಆಕಾಶಕ್ಕೆ ಜಿಗಿದನು. ಅವರ ಕೈಗೆ ಸಿಗಲಿಲ್ಲ. ಆ ಮೇಲೆ ಲತಾದೇವಿಯನ್ನು ರಕ್ಷಿಸಲು ರಾಜನು ಸುತ್ತಲೂ ಪಹರೆಯವರನ್ನು ನೇಮಿಸಿದನು. ಕಿಟಿಕಿ ಬಾಗಿಲುಗಳನ್ನು ತೆರೆಯಲಿಲ್ಲ. ಹೀಗಾಗಿ ರಾಜಪುತ್ರನಿಗೆ ಪ್ರವೇಶಿಸಲು ಸಾಧ್ಯವಾಗಲಿಲ್ಲ. ಕೆಲವು ದಿವಸಗಳ ವರೆಗೂ ಅವನು ಬಾರದಿದ್ದುದನ್ನು ಕಂಡು ಪಹರೆಯವರು ಉದಾಸೀನರಾದರು. ಆ ಮೇಲೊಂದು ದಿನ ರಾಜಪುತ್ರನು ಬಾಯಿಯೊಳಗೆ ಮಾತ್ರೆಯನ್ನು ಇಟ್ಟುಕೊಂಡು ಲತಾದೇವಿಯ ಅಂತಃಪುರಕ್ಕೆ ಪ್ರವೇಶಿಸಿದನು. ಅವಳು ನಿದ್ದೆ ಹೋದುದನ್ನು ಕಂಡು ಅವಳನ್ನು ಎತ್ತಿಕೊಂಡು ಆಕಾಶಮಾರ್ಗವಾಗಿ ಹಾರಿಹೋದನು. ತನ್ನ ರಾಜ್ಯಕ್ಕೆ ಬಂದ ಮೇಲೆ ಅವಳನ್ನು ಉದ್ಯಾನವನದೊಳಗೆ ನಿಲ್ಲಿಸಿ ತಾನು ತಂದೆಯಿದ್ದಲ್ಲಿ ಬಂದು ಎಲ್ಲ ಸಮಾಚಾರವನ್ನು ತಿಳಿಸಿದನು. ಮನಃಪೂರ್ವಕವಾಗಿ ಒಲ್ಲದ ಆ ರಮಣಿಯನ್ನು ಮದುವೆ ಮಾಡಿಕೊಳ್ಳುವುದರಲ್ಲಿ ಅರ್ಥವಿಲ್ಲವೆಂದು ಸಚಿವನು ಹೇಳಿದರೂ ರಾಜಪುತ್ರನು ಅದಕ್ಕೊಪ್ಪಲಿಲ್ಲ. ಅವಳೊಂದಿಗೆ ವಿವಾಹ ಮಾಡಿಕೊಂಡನು.

ಹೀಗೆ ಸ್ವಲ್ಪ ಕಾಲ ಕಳೆಯಿತು. ಲತಾದೇವಿಯು ಮನಸ್ಸಿನೊಳಗೆ ತನ್ನ ಪತಿಯನ್ನು ದ್ವೇಷಿಸುತ್ತಿದ್ದಳು. ಆದರೆ ಹೊರಗೆ ತೋರಿಸುತಿದ್ದಿಲ್ಲ. ಸಂದರ್ಭ ಬಂದಾಗ ಸೇಡು ತೀರಿಸಿಕೊಳ್ಳಲೂ ಅವಳು ಯೋಚಿಸುತಿದ್ದಳು. ಆದರೆ ಅದರ ಸುಳಿವು ಕೂಡಾ ಯಾರಿಗೂ ತಿಳಿಯದಂತೆ ಎಚ್ಚರ ವಹಿಸಿದ್ದಳು. ಪ್ರಿಯ ವಚನಗಳಿಂದಲೂ ಪ್ರೇಮ ಚೇಷ್ಟೆಗಳಿಂದಲೂ ತನ್ನ ಪತಿಯ ಪಾದುಕೆಯ ರಹಸ್ಯವನ್ನು ಅರಿತುಕೊಂಡಳು. ಗಂಡನೊಡನೆ ಒಮ್ಮೆ ಆ ಪಾದುಕೆಗಳನ್ನು ತೆಗೆದುಕೊಂಡು ಆಕಾಶಕ್ಕೆ ನೆಗೆದು ಮತ್ತೆ ಅವನಿಗೆ ಕೊಟ್ಟಳು. ಇದರಿಂದ ಅವಳ ಮೇಲೆ ಅವನಿಗೆ ವಿಶ್ವಾಸವೂ ಹುಟ್ಟಿತು. ಪಾದುಕೆಯನ್ನು ಅವನು ಭದ್ರವಾಗಿಟ್ಟುಕೊಳ್ಳಲಿಲ್ಲ. ಆ ಮೇಲೆ ಒಂದು ದಿನ ಲತಾದೇವಿಯು ಸಮಯ ಸಾಧಿಸಿ ತನ್ನ ಮಾವ ಹಾಗೂ ಪತಿಯನ್ನು ಇರಿದು ಕೊಂದು ಆ ಪಾದುಕೆಗಳನ್ನು ಹಾಕಿಕೊಂಡು ಗಗನಮಾರ್ಗವಾಗಿ

ತನ್ನ ರಾಜ್ಯಕ್ಕೆ ಬಂದಳು. ಮತ್ತು ಮಹಾಬಲನು ಮಾಡಿದ ದುಷ್ಕರ್ಮವ ನ್ನೆಲ್ಲ ತಿಳಿಸಿ ರೋಧಿಸಿದಳು.

ಆದಿತ್ಯವರ್ಮನು ರೇಗಿ ಕೂಡಲೇ ದಂಡೆತ್ತಿ ಬಂದನು. ಇತ್ತ ಮಹಾ ಬಾಹುವಿಗೆ ಬೇರೆ ಪುತ್ರ ಸಂತಾನ ಇಲ್ಲದೇ ಇದ್ದುದರಿಂದ ಮಂತ್ರಿಯೇ ರಾಜ್ಯ ಸೂತ್ರವನ್ನು ಕೈಯಲ್ಲಿ ಹಿಡಿದು ಆಳತೊಡಗಿದನು. ಆದಿತ್ಯವರ್ಮನ ಸೇನೆ ದಂಡೆತ್ತಿ ಬಂದುದರಿಂದ ಹಿಂಜರಿಯದೆ ಅದನ್ನು ಇದಿರಿಸಿದನು. ಯುದ್ಧದಲ್ಲಿ ಆದಿತ್ಯವರ್ಮನು ಪತನಾದನು. ಲತಾದೇವಿಯೂ ಸೆರೆಸಿಕ್ಕಳು. ಅವಳನ್ನು ಶೂಲಕ್ಕೇರಿಸಿದರು. ಪದ್ಮಾಪತಿಯೇ, ಸ್ತ್ರೀಯರಿಂದಲೇ ಇಂತಹ ಆಪತ್ತು. ವಿಪತ್ತುಗಳು ಬರುತ್ತವೆ. ಅವರು ದುರ್ಬುದ್ಧಿಯವರಾದರೆ ವಿನಾ ಶವು ನಿಶ್ಚಯ'' ಎಂದನು. ಅದನ್ನು ಕೇಳಿ ಕಲಾವತಿಯು ಒಪ್ಪದೆ, "ಪುರು ಷರು ಬಲಾತ್ಕಾರ, ಹಿಂಸೆ, ಅಥವಾ ಇನ್ನಿತರ ಕಷ್ಟಕೊಟ್ಟಾಗಲೇ ಸ್ತ್ರೀಯರು ಸೇಡು ತೀರಿಸಿಕೊಳ್ಳುತ್ತಾರೆ. ಪುರುಷರೇ ಅದಕ್ಕೆ ಕಾರಣ. ಅಂತಹ ಒಂದು ಉದಾಹರಣೆ ನನಗೆ ಗೊತ್ತಿದೆ'' ಎಂದು ನುಡಿದಳು. ಪ್ರತಾಪಸೇನನು ಅದನ್ನು ಕೇಳಬಯಸಿದುದರಿಂದ ಕಲಾವತಿಯು ಹೇಳತೊಡಗಿದಳು ಎಂದು ಮೋಹನದಾಸನು ಮೋಹಿನಿಗೆ ಹೇಳಲಾರಂಭಿಸಿದನು.

---

## ೩೭ ಸುಶೀಲೆಯ ಕಥೆ

ಪೂರ್ವಕಾಲದಲ್ಲಿ ಕಾಶೀ ಪಟ್ಟಣದಲ್ಲಿ ಜಯವೀರನೆಂಬ ಒಬ್ಬ ಅರಸ ನಿದ್ದನು. ಅವನ ಮಂತ್ರಿಗೆ ಸುಶೀಲೆ ಎಂಬ ಮಗಳಿದ್ದಳು. ಅವಳು ಅತ್ಯಂತ ಸುಂದರಿ. ಅರಮನೆಯಲ್ಲೂ ಅಂತಹ ಲಾವಣ್ಯವತಿಯರು ಇರಲಿಲ್ಲ. ಆದುದ ರಿಂದ ಅವಳ ಸೌಂದರ್ಯದ ಸುದ್ದಿ ರಾಜನಿಗೂ ಮುಟ್ಟಿತು. ಅವನು ಒಂದು ದಿನ ವೇಷ ಪಲ್ಲಟ ಮಾಡಿಕೊಂಡು ಹೋಗಿ ಅವಳನ್ನು ನೋಡಿ ಬಂದನು. ಅವಳನ್ನು ಕಂಡ ಮೇಲೆ ಮೋಹವುಂಟಾಯಿತು. ಅವಳನ್ನು ಮದುವೆಯಾ ಗಲೂ ಇಚ್ಛಿಸಿದನು. ಮತ್ತು ತನ್ನ ಮನೋಭಿಲಾಷೆಯನ್ನು ಮಂತ್ರಿಗೂ ತಿಳಿಸಿದನು. ಮಂತ್ರಿಯು ಮನೆಗೆ ಬಂದು ರಾಜನ ಇಚ್ಛೆಯನ್ನು ತನ್ನ ಮಗ

ಳಿಗೆ ತಿಳಿಸಿದನು. ಆಗ ಅವಳು "ತಂದೆಯೇ, ಈ ರಾಜರನ್ನು ನಂಬಬಾರದು. ನಾಳೆ ಮತ್ತೊಬ್ಬಳು ಸುಂದರಿಯನ್ನು ಕಂಡರೆ ಅವಳ ಮೇಲೂ ಆವರಿಗೆ ಮೋಹವಾಗುತ್ತದೆ. ಮೊದಲಿನವರನ್ನು ಬಿಟ್ಟು ಬಿಡುವರು" ಎಂದಳು. ಆದರೆ ತಾವು ಒಪ್ಪದಿದ್ದರೆ ರಾಜನು ಬಲಾತ್ಕಾರದಿಂದಲಾದರೂ ತನ್ನ ಆಶೆಯನ್ನು ಈಡೇರಿಸಿಕೊಳ್ಳದೇ ಇರಲಾರನೆಂದು ಅವರು ತಿಳಿದು ಆ ರಾಜ್ಯವನ್ನು ತೊರೆದು ಹೋಗಲು ನಿರ್ಧರಿಸಿದರು. ಮತ್ತು ಅಂದೇ ರಾತ್ರಿ ಮಂತ್ರಿಯು ಸುಶೀಲೆಯೊಂದಿಗೆ ಹೊರಟು ಹೋದನು.

ಬೆಳಗಾದ ಮೇಲೆ ಅವರು ಹೊರಟು ಹೋದ ಸುದ್ದಿ ಅರಮನೆಗೆ ಮುಟ್ಟಿತು. ಆಗ ಅರಸನು ಕುದುರೆ ಸವಾರರನ್ನು ಕೊಟ್ಟು ಕಳಿಸಿದನು. ಅವರು ಬೆನ್ನಟ್ಟಿ ಹೋಗಿ ತಂದೆ ಮಗಳನ್ನು ಹಿಡಿದು ತಂದು ರಾಜನಮುಂದೆ ನಿಲ್ಲಿಸಿದರು. ರಾಜನು ಮಂತ್ರಿಯ ಶಿರಚ್ಛೇದನ ಮಾಡಿಸಿದನು. ಮತ್ತು ಸುಶೀಲೆಯನ್ನು ತನ್ನರಮನೆಯಲ್ಲೇ ಇಟ್ಟುಕೊಂಡನು. ಮದುವೆಯ ಸಿದ್ಧತೆಗಳೆಲ್ಲ ಆರಂಭವಾದುವು. ಅಷ್ಟರಲ್ಲಿ ವೈರಿಗಳು ರಾಜ್ಯದ ಮೇಲೆ ದಂಡೆತ್ತಿ ಬಂದುದರಿಂದ ಜಯವೀರನು ಹೊಸ ಮಂತ್ರಿಯನ್ನು ನೇಮಿಸಿ ತಾನು ಯುದ್ಧಕ್ಕೆ ಹೊರಟನು. ಅವನು ರಣರಂಗಕ್ಕೆ ಹೋದಾಗ, ಅರಮನೆಯಲ್ಲಿದ್ದ ಮಂತ್ರಿ ಸುಶೀಲೆಯನ್ನು ಕಂಡು ಅವಳ ರೂಪಾತಿಶಯಕ್ಕೆ ಮರುಳಾದನು. ಮತ್ತು ತನ್ನ ಮನೋಭಿಲಾಷೆಯನ್ನು ಈಡೇರಿಸಬೇಕೆಂದು ಅವಳಿಗೊಂದು ಪತ್ರ ಬರೆದನು. ಆದರೆ ಅವಳು ಅದಕ್ಕೊಪ್ಪದೆ "ನೀನು ನನ್ನ ತಂದೆಯ ಸಮಾನ. ಇಂಥ ದುರ್ವಿಚಾರವು ನಿನಗೆ ಹೇಳಿದುದಲ್ಲ" ಎಂದು ಉತ್ತರ ಬರೆದುಕೊಟ್ಟಳು. ಅದನ್ನೋದಿಕೊಂಡ ಮಂತ್ರಿ ತುಂಬಾ ಅಧೀರನಾದನು. ಯುದ್ಧದಿಂದ ಹಿಂತಿರುಗಿದ ರಾಜನಿಗೆ ಸುಶೀಲೆಯು ತನ್ನ ಪತ್ರವನ್ನು ತೋರಿಸಿದರೆ ತನ್ನ ಜೀವಕ್ಕೆ ಗಂಡಾಂತರವಿದೆಯೆಂದು ಅವನು ಊಹಿಸಿದನು. ಮತ್ತು ಜಯವೀರನು ಬರುತ್ತಿರುವನೆಂದು ಕೇಳಿ ಊರ ಹೊರಗೇ ತೆರಳಿ ಅವನನ್ನು ಇದಿರ್ಗೊಂಡನು. ಆಗ ಸುಶೀಲೆಯ ಮಾತನ್ನು ಪ್ರಸ್ತಾಪಿಸಿ, ಅವಳು ಸೇವಕನೊಬ್ಬನೊಡನೆ ಅನೀತಿ ಸಂಬಂಧವನ್ನಿಟ್ಟುಕೊಂಡಿರುವಳೆಂದು ಕಿವಿಯೂದಿದನು. ಅದನ್ನು ಕೇಳಿದ ರಾಜನು ಕೋಪದಿಂದ ಅವಳ ಶಿರಚ್ಛೇದನ ಮಾಡಲು ಆಜ್ಞಾಪಿಸಿದನು. ಆದರೆ ರಾಜಮಾತೆಯು ಅದನ್ನು

ತಡೆಹಿಡಿದಳು. ಸುಶೀಲೆಯು ನಿಜವಾಗಿಯೂ ಸುಶೀಲಳು ಎಂಬ ಭಾವನೆ ಅವಳಲ್ಲಿತ್ತು. ಆದುದರಿಂದ ಅವಳನ್ನು ಕೊಲ್ಲದೆ ಕಾಡಿನಲ್ಲಿ ಬಿಟ್ಟು ಬರಬೇಕೆಂದು ಮಗನಿಗೆ ತಿಳಿಸಿದಳು. ರಾಜನು ಅದಕ್ಕೊಪ್ಪಿ ಒಬ್ಬ ಸೇವಕನನ್ನು ಕರೆದು ಸುಶೀಲೆಯನ್ನು ನಡು ಕಾಡಿನಲ್ಲಿ ಬಿಟ್ಟು ಬರಲು ಆಜ್ಞಾಪಿಸಿದನು.

ಕಾಡಿನಲ್ಲಿ ಬಿಡಲು ಅವಳನ್ನು ಕರೆದುಕೊಂಡು ಹೊರಟ ಸೇವಕನು ಸ್ತ್ರೀ ವ್ಯಾಮೋಹಿ. ಸುಶೀಲೆಯ ಅಂಗ ಸೌಂದರ್ಯವನ್ನು ಕಂಡ ಅವನೂ ಕಾಮಾತುರನಾದನು. ದಾರಿಯುದ್ದಕ್ಕೂ ಅವಳ ರೂಪ ಲಾವಣ್ಯವನ್ನು ವರ್ಣಿಸುತ್ತ ನಡೆದನು. ಕಾಡಿಗೆ ಪ್ರವೇಶಿಸಿದ ಕೂಡಲೇ ಅವಳ ಮೇಲೆ ಬಲಾತ್ಕಾರ ನಡೆಸಲು ಯತ್ನಿಸಿದನು. ಸುಶೀಲೆಯು ಧೈರ್ಯವನ್ನು ಬಿಡದೇ "ನಾಲ್ಕು ದಿನಗಳ ವರೆಗೆ ನಾನು ವ್ರತಸ್ಥಳಿರುವೆನು. ಆ ಮೇಲೆ ನಾನೇ ನಿನ್ನ ವಶಳಾಗುತ್ತೇನೆ. ನನಗೂ ಯಾರೂ ದಿಕ್ಕಿಲ್ಲ. ನಾವಿಬ್ಬರೂ ಬೇರೆ ದೇಶಕ್ಕೆ ತೆರಳಿ ಸುಖದಿಂದ ಇರೋಣ'' ಎಂದು ನುಡಿದಳು. ಅವಳ ಮಾತಿಗೆ ಸೇವಕನು ಮರುಳಾದನು. ಮೂರು ನಾಲ್ಕು ದಿನಗಳ ಮೇಲೆ ಅವರು ಒಂದು ನದೀ ದಂಡೆಗೆ ಬಂದರು. ಅಗ ಸುಶೀಲೆಯು ಸ್ನಾನ ಮಾಡುವ ನೆವದಿಂದ ನದಿಯಲ್ಲಿಳಿದು ಅದನ್ನು ದಾಟಿಹೋಗಲೆತ್ನಿಸಿದಳು. ಅದು ಆ ಸೇವಕನಿಗೆ ಗೊತ್ತಾದ ಕೂಡಲೇ ಅವನೂ ನದಿಗಿಳಿದು ಅವಳ ಬೆಂಬತ್ತಿ ಬಂದನು. ಆದರೆ ಅವನು ಆಳವಾದ ನೀರಿನಲ್ಲಿ ಮುಳುಗಿಹೋದನು. ಸುಶೀಲೆಯು ಮಾತ್ರ ತನ್ನ ಪುಣ್ಯವಶದಿಂದ ನದಿಯ ಆಚೆ ದಂಡೆ ಸೇರಿದಳು.

ಸುಶೀಲೆಯು ಊರಿಗೆ ತೆರಳಲು ಹೆದರಿ ಕಾಡು ಮಾರ್ಗವನ್ನೇ ಹಿಡಿದಳು. ಕಾಡಿನಲ್ಲಿ ಗೆಡ್ಡೆಗೆಣಸುಗಳನ್ನು ತಿಂದು ಜೀವಿಸಲಾರಂಭಿಸಿದಳು. ಒಂದು ದಿನ ಆ ಊರಿನ ರಾಜನು ಆ ಕಾಡಿಗೆ ಬೇಟೆಗೆ ಬಂದಿದ್ದನು. ಆಗ ಅವನ ಗುಂಪಿನವರು ಅವಳನ್ನು ಕಂಡು ರಾಜನಿಗೆ ತಿಳಿಸಿದರು. ಅವನು ಬಂದು ಅವಳ ರೂಪಕ್ಕೆ ಮುಗ್ಧನಾಗಿ ತನ್ನ ರಮನೆಗೆ ಬರಬೇಕೆಂದು ವಿನಂತಿಸಿದನು. ಅವಳನ್ನು ಬಹಳ ಮಾನ ಮರ್ಯಾದೆಯಿಂದ ನಡೆಸಿಕೊಂಡನು. ಸೇವೆಗಾಗಿ ಸುಂದರಿಯರಾದ ದಾಸಿಯರನ್ನು ನೇಮಿಸಿದನು. ಅಂದವಾದ ಬಟ್ಟೆ ಬರೆ ಮತ್ತು ಚಿನ್ನಾಭರಣಗಳನ್ನು ಕೊಟ್ಟನು. ಈರೀತಿ ಅವಳ ಮನಸ್ಸನ್ನು ಗೆದ್ದುಕೊಂಡು ಅವಳನ್ನು ಮದುವೆಮಾಡಿಕೊಳ್ಳುವ ಇಚ್ಛೆ ಅವನಿಗೆ.

ಮತ್ತು ತನ್ನ ಮನೋಗತವನ್ನು ದಾಸೀ ಜನರ ಮೂಲಕ ಕೂಡಾ ಅವಳಿಗೆ ತಿಳಿಯಪಡಿಸಿದನು. ಸುಶೀಲೆಯು ಮಾತ್ರ ಅದಕ್ಕೆ ಉತ್ತರವನ್ನೇ ಕೊಡಲಿಲ್ಲ.

ಸುಶೀಲೆಯು ಮೌನ ಧರಿಸಿದುದನ್ನು ಕಂಡು ಅವಳು ತನಗೆ ಅನುಕೂಲಳಿರುವಳೆಂದೇ ರಾಜನು ಗ್ರಹಿಸಿದನು. ಒಂದು ದಿನ ರಾತ್ರಿ ಅವಳ ಅರಮನೆಗೆ ಬರುವುದಾಗಿ ದಾಸಿಯ ಕೂಡ ಹೇಳಿ ಕಳಿಸಿದನು. ಅದರಂತೆ ರಾತ್ರಿ ಅವನು ಕುದುರೆ ಮೂಲಕ ಹೊರಟು ಬರುತ್ತಿದ್ದಾಗ ಕುದುರೆಯು ಎಡವಿದುದರಿಂದ ಅವನು ಬಿದ್ದನು. ಮತ್ತು ಅವನ ಎಡಗಾಲು ಮುರಿಯಿತು. ಅದು ಗುಣವಾಗಲು ಸ್ವಲ್ಪ ಕಾಲ ಹಿಡಿಯಿತು. ಆ ಮೇಲೆ ಪುನಃ ಅವನು ಒಂದು ರಾತ್ರಿ ಆನೆಯ ಮೇಲೆ ಬಂದನು. ಆದಿನ ಒಂದು ಹುಲಿಯು ರಸ್ತೆಯಲ್ಲಿ ಅತ್ತಿತ್ತ ಓಡಿದುದರಿಂದ ಆನೆಯು [illegible] ಕಕ್ಕಾವಿಕ್ಕಿಯಾಯಿತು. ಆಗಲೂ ಅರಸನು ಬಿದ್ದುದರಿಂದ ಅವನಿಗೆ ಬಹಳ ನೋವಾಯಿತು. ಮೂರನೇಸಲ ಅವನು ಸುಶೀಲೆಯ ಮನೆಗೆ ಬಂದಾಗ ಮನೆಯ ಒಂದು ತೊಲೆಯು ಮುರಿದು ಬಿದ್ದು ಅವನ ಇಚ್ಛೆಗೆ ಅಡ್ಡಿಯಾಯಿತು. ಮೂರು ಸಲವೂ ಈ ರೀತಿ ಅನಾನುಕೂಲ ಘಟನೆಗಳು ನಡೆದುದನ್ನು ಕಂಡು ಆ ರಾಜನ ಮನಸ್ಸಿನಲ್ಲಿ ಸ್ವಲ್ಪ ವಿವೇಕ ಉದಯಿಸಿತು. ಇವಳು ಯಾರೋ ಪುಣ್ಯವಂತಳಿರಬೇಕು. ಅದರಿಂದಲೇ ಇಂತಹ ವಿಘ್ನಗಳು ಸಂಭವಿಸಿದುವು ಎಂದು ಊಹಿಸಿ ಅವಳ ಮೇಲಿನ ವ್ಯಾಮೋಹವನ್ನು ತ್ಯಜಿಸಿದನು. ಮತ್ತು ಅವಳ ಊರು ಸ್ಥಳವನ್ನು ಹೇಳಿದರೆ ಅಂಗರಕ್ಷಕರೊಂದಿಗೆ ಕಳಿಸಿಕೊಡುವುದಾಗಿ ನುಡಿದನು. ಆಗ ಸುಶೀಲೆಯು ಕಾಶೀ ಪಟ್ಟಣದ ಜಯವೀರನನ್ನು ಕರೆಯಿಸಬೇಕೆಂದು ವಿನಂತಿಸಿದಳು.

ಜಯವೀರನು ಬಂದ ಮೇಲೆ ಆವನ ಮಂತ್ರಿಯು ತನ್ನ ಮೇಲೆ ವ್ಯಾಮೋಹಪಟ್ಟು ಬರೆದಿದ್ದ ಪತ್ರವನ್ನು ಅವನಿಗೆ ಒಪ್ಪಿಸಿ ಅಲ್ಲಿ ವರೆಗೆ ನಡೆದ ವೃತ್ತಾಂತವನ್ನೆಲ್ಲ ತಿಳಿಸಿದಳು. ಜಯವೀರನು ಕೂಡಲೇ ಗುಪ್ತಚಾರರ ಮೂಲಕ ತನ್ನ ಸೇನಾಪತಿಗೆ ಒಂದು ಸಂದೇಶವನ್ನು ಕಳಿಸಿದನು. ಮತ್ತು ಅದು ಮುಟ್ಟಿದ ಕೂಡಲೇ ಸೇನಾಪತಿಯು ಮಂತ್ರಿಯನ್ನು ಸೆರೆಹಿಡಿದು ತಲೆ ಹೊಡೆಸಿದನು. ಆ ಮೇಲೆ ಜಯವೀರನು ಸುಶೀಲೆಯನ್ನು ತನ್ನೊಂದಿಗೆ ಕರೆದು ಕೊಂಡು ಬಂದು ವೈಭವದಿಂದ ಮದುವೆಯಾದನು.

ಕಲಾವತಿಯು ಹೇಳಿದ ಈ ಕತೆಯನ್ನು ಪ್ರತಾಪಸೇನನು ಕೇಳಿ ರಾಜಪುತ್ರಿಯೇ, ದುಷ್ಟರಾದ ಪುರುಷರ ಬಗ್ಗೆ ನೀನು ಹೇಳಿದೆ. ಆದರೆ ಲೋಕದಲ್ಲಿ ಎಲ್ಲ ಬಗೆಯ ಜನರಿದ್ದಾರೆ. ನಿನ್ನಂತೆ ಅನುಚಿತವಾದ ಪಣವನ್ನಿಟ್ಟ ರಾಜಪುತ್ರಿಯೋರ್ವಳ ಕಥೆ ನನಗೆ ಗೊತ್ತಿದೆ'' ಎಂದನು. ಅದನ್ನು ಕಲಾವತಿಯು ಕೇಳಲು ಬಯುಸಿದುದರಿಂದ ಅವನು ಹೇಳತೊಡಗಿದನು.

## ೩೮. ಭಾರತದ ರಾಜಪುತ್ರಿಯ ಕಥೆ

ಪ್ರಾಚೀನ ಕಾಲದಲ್ಲಿ ಪರ್ಶಿಯಾ ದೇಶದಲ್ಲಿ ಕಮಾಲನೆಂಬ ಒಬ್ಬ ರಾಜನಿದ್ದನು. ಅವನು ಸದ್ಗುಣ ಸಂಪನ್ನನು. ಬಡಬಗ್ಗರ ಮೇಲೆ ಅವನಿಗೆ ಅಮಿತ ಪ್ರೀತಿ. ಬಡವರಿಗೆ ವಿಶೇಷ ಅನ್ನದಾನಗಳನ್ನೂ ಮಾಡುತಿದ್ದನು. ಪ್ರಜೆಗಳನ್ನು ದಯೆಯಿಂದ ನಡೆಸಿಕೊಳ್ಳುತ್ತಿದ್ದನು. ಹೀಗಿರುತ್ತಿರಲು ನೆರೆಯ ರಾಜನಾದ ಅಹ್ಮದನು ದಂಡೆತ್ತಿ ಬಂದನು. ಅದರಿಂದ ಕಮಾಲನು ತುಂಬ ಚಿಂತೆಗೊಳಗಾದನು. ಯುದ್ಧ ಮಾಡಿದರೆ ತನ್ನ ಸೈನಿಕರೂ ಪ್ರಾಣ ಕಳೆದುಕೊಳ್ಳುವರಲ್ಲ ಎಂದವನು ದುಃಖಪಟ್ಟು ವೇಷ ಪಲ್ಲಟಿಸಿಕೊಂಡು ರಾತ್ರಿ ಅರಮನೆಯಿಂದ ಹೊರಬಿದ್ದು ಒಂದು ಕಾಡಿಗೆ ತೆರಳಿದನು. ಅಲ್ಲಿ ಪರ್ವತದಲ್ಲಿದ್ದ ಒಂದು ಗುಹೆಯನ್ನು ಪ್ರವೇಶಿಸಿ ಅಲ್ಲೇ ಇರತೊಡಗಿದನು. ಅದು ಯಾರಿಗೂ ಗೊತ್ತಾಗಲಿಲ್ಲ.

ಅಹ್ಮದನು ಪರ್ಶಿಯಾ ದೇಶವನ್ನು ಪ್ರವೇಶಿಸಿ ರಾಜ್ಯವನ್ನು ವಶಪಡಿಸಿಕೊಂಡನು. ಕೋಟೆಕೊತ್ತಲ, ದೇಶಕೋಶಗಳೆಲ್ಲ ಅವನ ಅಧೀನವಾದುವು. ಆದರೆ ಕಮಾಲ ರಾಜನ ಸುಳಿವಿಲ್ಲ. ಪ್ರಾಯಶಃ ಅವನು ಪಾರಾಗಿ ಹೋಗಿರುವನೆಂದು ಅಹ್ಮದನು ಊಹಿಸಿದನು. ಅವನು ಜೀವಂತನಿದ್ದರೆ ಮತ್ತೆ ಸೈನ್ಯ ಸಂಗ್ರಹಿಸಿ ಅಥವಾ ನೆರೆ ರಾಜರ ಆಶ್ರಯ ಪಡೆದು ದಾಳಿ ಮಾಡಬಹುದೆಂದೂ ಅವನು ಸಂದೇಹಪಟ್ಟನು. ಆದುದರಿಂದ ಹೇಗಾದರೂ ಮಾಡಿ ಕಮಾಲನನ್ನು ಹಿಡಿಯಲು ಅವನ ಆತುರ. ಆದುದರಿಂದ ಓಡಿ ಹೋದ ಅರಸನನ್ನು ತಂದು ಹಿಡಿದುಕೊಟ್ಟವರಿಗೆ ಹತ್ತು ಸಾವಿರ ವರಹಗಳನ್ನು ಕೊಡುವುದಾಗಿ ಡಂಗುರ ಹೊಡೆಸಿದನು. ಧನದ ಲೋಭದಿಂದ ಆನೇ

ಕರು ಅವನನ್ನು ಹುಡುಕಲು ಯತ್ನಿಸಿದರು. ಹೀಗಿರುತ್ತಿರಲು ಒಂದು ದಿನ ವೃದ್ಧರಾದ ದಂಪತಿಗಳಿಬ್ಬರು ಒಂದು ಕಾಡಿಗೆ ಕಟ್ಟಿಗೆ ಕಡಿಯಲು ತೆರಳಿ ದರು. ಅವರೊಂದು ಕಡೆ ಕಡಿಯುತ್ತಿದ್ದ ಶಬ್ದ ಕೇಳಿ ಕಮಾಲನು ಅಲ್ಲಿಗೆ ಬಂದನು. ಅವರು ವೃದ್ಧರೆಂದು ತಿಳಿದು ಅಲ್ಲೇ ಅಡಗಿ ಕುಳಿತು ಅವರು ಆಡುತಿದ್ದ ಮಾತನ್ನು ಆಲಿಸತೊಡಗಿದನು. ಆ ಮುದುಕನ ಹೆಂಡತಿಯು "ಎಲ್ಲಾದರೂ ಕಮಾಲನು ನಮ್ಮ ಇದಿರಾದರೆ ಅವನನ್ನು ಅಹ್ಮದನಿಗೆ ಒಪ್ಪಿ ಸುತಿದ್ದೆವು. ಐದು ಸಾವಿರ ವರಹಗಳಾದರೂ ಸಿಗುತಿತ್ತು. ಈ ಕಷ್ಟವೆಲ್ಲ ತಪ್ಪುತಿತ್ತು. ದುಡಿದು ದುಡಿದು ನನಗೆ ಸಾಕಾಯಿತು" ಎಂದು ಗೊಣಗಿ ದಳು. ಹೆಂಡತಿ ಆಡಿದ ಮಾತು ಕೇಳಿ ಆ ಮುದುಕನಿಗೆ ಸಿಟ್ಟು ಬಂದಿತು. "ನಮ್ಮನ್ನು ಇಷ್ಟರವರೆಗೆ ಕಾಪಾಡಿದ ರಾಜನ ಬಗ್ಗೆ ಈ ರೀತಿ ಮಾತನಾ ಡಬೇಡ. ಜನರು ಏನೆಂದಾರು? ದೇವರೂ ಮೆಚ್ಚಲಿಕ್ಕಿಲ್ಲ" ಎಂದು ಗದರಿ ಸಿದನು. ಆ ಮುದುಕನ ಮಾತು ಕೇಳಿದ ಕಮಾಲನು ಅವನ ಇದಿರು ಬಂದು "ನಾನೇ ಕಮಾಲನು. ನನ್ನನ್ನು ಹಿಡಿದು ಅಹ್ಮದರಾಜನಿಗೆ ಒಪ್ಪಿ ಸಿರಿ. ನಿಮ್ಮ ಬಡತನವಾದರೂ ಪರಿಹಾರವಾಗಲಿ" ಎಂದು ನುಡಿದನು. ಆದರೆ ಆ ಮುದುಕನು ಮಾತ್ರ ಒಪ್ಪಲಿಲ್ಲ. ಅಷ್ಟರಲ್ಲಿ ಅಲ್ಲಿಗೆ ಬೇರೆ ಕೆಲ ವರು ಬಂದರು. ಕಮಾಲನನ್ನು ಗುರುತಿಸಿದ ಕೂಡಲೇ ಅವರು ಅವನನ್ನು ಹಿಡಿದು ರಾಜನಿದ್ದಲ್ಲಿ ಕರೆದುಕೊಂಡು ಹೋದರು. ಕಮಾಲನನ್ನು ಹಿಡಿದ ವರು ತಾನು ನಾನೆಂದು ಅವರು ವಾದಿಸುತ್ತ ನನಗೆ ತನಗೆ ಐದು ಸಾವಿರ ವರಹಗಳನ್ನು ಕೊಡಬೇಕೆಂದು ಬೇಡಿದರು. ಆಗ ಕಮಾಲನು "ಮಹಾರಾಜ, ನನ್ನನ್ನು ಹಿಡಿದವನು ಆ ಕಟ್ಟಿಗೆ ಕಡಿವ ಆ ಮುದುಕನು. ಅವನಿಗೆ ಆ ಹಣ ವನ್ನು ಕೊಟ್ಟು ಅವನ ಬಡತನವನ್ನು ಪರಿಹರಿಸಿರಿ. ಆ ಮೇಲೆ ನನಗೆ ದೇಹಾಂತ ಶಿಕ್ಷೆ ವಿಧಿಸಿದರೂ ಚಿಂತಿಲ್ಲ" ಎಂದನು. ಕಮಾಲನ ಈ ಮಾತು ಕೇಳಿ ಅಹ್ಮದನು ಆಶ್ಚರ್ಯಪಟ್ಟನು. ಪ್ರಜೆಗಳ ಪ್ರಾಣಹಿಂಸೆ ಮಾಡಲು ಬಯ ಸದೆ ರಾಜ್ಯ ಬಿಟ್ಟು ಕಾಡಿಗೆ ಹೋದನೆಂದು ತಿಳಿದ ಮೇಲೆ ಅಹ್ಮದನ ಮೋರೆ ಸಣ್ಣದಾಯಿತು. ಅವನು ಸಿಂಹಾಸನದಿಂದ ಇಳಿದು ಕಮಾಲನಿಗೆ ಅವನ ರಾಜ್ಯವನ್ನು ಕೊಟ್ಟು ತನ್ನ ದೇಶಕ್ಕೆ ಪ್ರಯಾಣ ಬೆಳಸಿದನು.

ಅಹ್ಮದನು ತನ್ನ ದೇಶಕ್ಕೆ ತೆರಳಿದ ಮೇಲೆ ಬಡಬಗ್ಗರಿಗೆ ಅನ್ನದಾನ,

ವಸ್ತ್ರದಾನ, ಹಾಗೂ ನಾಣ್ಯಗಳ ದಾನ ಕೊಡಲು ಆರಂಭಿಸಿದನು. ಸಾವಿರಾರು ಜನರು ದಿನಂಪ್ರತಿ ಬಂದು ದಾನ-ಧರ್ಮಗಳನ್ನು ಪಡೆಯುತಿದ್ದರು. ಒಂದು ದಿನ ಒಬ್ಬ ಫಕೀರನು ಭಿಕ್ಷೆ ಬೇಡಲು ಬಂದನು. ಎಷ್ಟು ಭಿಕ್ಷೆ ಕೊಟ್ಟಡೂ ಅವನಿಗೆ ತೃಪ್ತಿಯಿದ್ದಿಲ್ಲ. ಮತ್ತೆ ಮತ್ತೆ ಭಿಕ್ಷೆಗಾಗಿ ಬರುತಿದ್ದನು. ಅದನ್ನು ಕಂಡು ಸಿಪಾಯಿಗಳು ಅವನನ್ನು ರಾಜನ ಮುಂದೆ ತಂದು ನಿಲ್ಲಿಸಿದರು. ಅಹ್ಮದನು ಆ ಫಕೀರನನ್ನುದ್ದೇಶಿಸಿ "ಸಾಮಿೂ, ತಾವು ಪ್ರಾಪಂಚಿಕ ವಿಷಯಗಳನ್ನೆಲ್ಲ ತೊರೆದು ಸನ್ಯಾಸ ಸ್ವೀಕರಿಸಿರುವಿರಿ. ದೈವ ಚಿಂತನೆಯಲ್ಲೇ ಕಾಲ ಕಳೆಯುತ್ತಿರುವಿರಿ. ಜೀವಾಧಾರಕ್ಕಾಗಿ ಅಲ್ಪಸ್ವಲ್ಪ ಉಂಡು ತಿಂದರೆ ಸಾಕು. ಹಾಗಿರುವಾಗ ಎಷ್ಟು ದಾನಕೊಟ್ಟರೂ ತೃಪ್ತಿಯಾಗದೆ ಲೋಭಕ್ಕೊಳಗಾಗಿ ಮತ್ತೆ ಮತ್ತೆ ಭಿಕ್ಷೆ ಕೇಳುತ್ತಿರುವಿರಂತೆ. ಇದರರ್ಥವೇನು" ಎಂದು ಕೇಳಿದನು. ಆಗ ಆ ಫಕೀರನು "ಮಹಾರಾಜ, ನೀನು ಯಾವುದೇ ಒಂದು ಸ್ವಾರ್ಥ ಬುದ್ಧಿಯಿಂದ ದಾನ ಮಾಡಲು ತೊಡಗಿದಂತೆ ಕಾಣುತ್ತದೆ. ಹಾಗಿದ್ದರೆ ಅಂತಹ ದಾನವನ್ನು ನಾನು ಸ್ವೀಕರಿಸಲಾರೆ. ಪಶ್ಚಿಮ ಭಾರತದ ದೇಶದಲ್ಲಿರುವ ಮಹಾರಾಣಿಯು ಒಂದು ದಿನ ಕೊಡುತ್ತಿರುವ ದಾನವನ್ನು ನಿನ್ನ ಜನ್ಮ ಪರ್ಯಂತರವೂ ಕೊಡಲು ನಿನ್ನಿಂದಾಗದು'' ಎಂದು ಹೇಳಿ ಅವನು ಕೊಟ್ಟ ಭಿಕ್ಷೆಯನ್ನು ತೆಗೆದುಕೊಳ್ಳದೆ ಹೊರಟು ಹೋದನು.

ಆಗ ಅಹ್ಮದನು ತುಂಬಾ ಲಜ್ಜಿತನಾದನು. ಪಶ್ಚಿಮ ಭಾರತದ ಮಹಾರಾಣಿಯ ದರ್ಶನ ಪಡೆಯಬೇಕೆಂದು ನಿರ್ಧರಿಸಿ ಫಕೀರನ ವೇಷ ಧರಿಸಿ ಪ್ರಯಾಣ ಮಾಡಿದನು. ಅಹ್ಮದನು ಭಾರತದ ಗಡಿದಾಟಿ ತೆರಳಿದ ಕೂಡಲೇ ಕಂಡ ಕಂಡವರು ಅವನನ್ನು ನಯವಿನಯದಿಂದ ಮಾತನಾಡಿಸ ತೊಡಗಿದರು. ಊಟಕ್ಕೆ ನಮ್ಮಲ್ಲಿ ಬನ್ನಿ. ನಮ್ಮಲ್ಲಿ ಬನ್ನಿ ಎಂದು ಕೈಹಿಡಿದು ಎಳೆದುಕೊಂಡು ಹೊರಟರು. ಊಟವಾದ ಮೇಲೆ ಅವನಿಗೆ ಚಿನ್ನದ ಗಟ್ಟಿಗಳನ್ನೇ ದಕ್ಷಿಣೆಯಾಗಿ ಕೊಡುತ್ತಿದ್ದರು. ತಮ್ಮ ಮನೆಯಿಂದ ಹೊರಡಲು ಬಿಡುತ್ತಿರಲಿಲ್ಲ. ಆದರೂ ಅಹ್ಮದನು ಅವರೆಲ್ಲರನ್ನು ಸಂತೈಸಿ ಅರಮನೆಗೆ ತೆರಳಿ ತನ್ನ ಪರಿಚಯವನ್ನು ಬಂದ ಕಾರ್ಯವನ್ನು ತಿಳಿಸಿ ರಾಣಿಯ ದರ್ಶನ ಲಾಭವಾಗಬೇಕೆಂದು ತಿಳಿಸಿದನು. ಆದರೆ ಅಧಿಕಾರಿಗಳು ಬಿಡಲಿಲ್ಲ. ರಾಣಿಯು ಎಲ್ಲರಿಗೂ ದರ್ಶನ ಕೊಡುವುದಿಲ್ಲ. ಅಮರಪುರದಲ್ಲಿ ವರುಷಂ

ಪ್ರತಿ ನಡೆಯುತ್ತಿರುವ ಒಂದು ಅದ್ಭುತ ಘಟನೆಯ ಮೂಲವನ್ನು ಕಂಡು ಹಿಡಿದು, ಅದರ ನಿಜ ಅರ್ಥ ತಿಳಿಸುವವನಿಗೆ ಮಾತ್ರ ದರ್ಶನ ಕೊಡುತ್ತೇನೆಂದು ಪಣ ತೊಟ್ಟಿರುವಳು. ಅವನನ್ನೇ ಮದುವೆಯಾಗುವೆನೆಂದೂ ನಿರ್ಧರಿಸಿರುವಳು" ಎಂದು ಆ ಅಧಿಕಾರಿಯು ತಿಳಿಸಿದನು. ಆಗ ಅಹ್ಮದನು "ಆ ಚಮತ್ಕಾರವನ್ನು ಶೋಧಿಸಿ ಬಂದ ಮೇಲೆ ರಾಣಿ ಮದುವೆಯಾಗಲು ನಿರಾಕರಿಸಿದರೆ ಏನು ಮಾಡೋಣ? ಆದುದರಿಂದ ರಾಣಿಯು ಪರದೆಯ ಹಿಂದೆ ಕುಳಿತು ಆ ರೀತಿ ವಚನ ಕೊಡಲಿ" ಎಂದನು. ಅಧಿಕಾರಿಯು ಅದನ್ನು ರಾಣಿಗೆ ತಿಳಿಸಲು ಅವಳು ಪರದೆಯ ಹಿಂದೆ ಕುಳಿತು ಅಹ್ಮದ ಅರಸನೊಡನೆ ಮಾತನಾಡಲು ಒಪ್ಪಿದಳು. ಅಹ್ಮದನು ಅವಳನ್ನು ಕಾಣಲು ಬಂದ ಮೇಲೆ "ಮಹಾರಾಣಿಯವರೇ, ನಿಮ್ಮ ಪಣವೇನು?'' ಎಂದು ಕೇಳಿದನು. ಆಗ ಅವಳು "ಮಹಾರಾಜ! ಅಮರಪುರ ಪಟ್ಟಣದಲ್ಲಿ ಪ್ರತಿಶುಕ್ಲ ಪಕ್ಷದ ಪ್ರತಿಪದೆ ದಿವಸ ಒಬ್ಬನು ಎತ್ತಿನ ಮೇಲೆ ಕುಳಿತುಕೊಂಡು ಬಿಚ್ಚುಗತ್ತಿಯನ್ನು ಝಳಪಿಸುತ್ತಾ ಬರುತ್ತಾನೆ. ಅವನ ಸೇವಕರು ಬಂದು ಒಂದು ಕಂಚಿನ ಸ್ತ್ರೀ ಮೂರ್ತಿಯನ್ನು ತಂದು ನಿಲ್ಲಿಸುತ್ತಾರೆ. ಆಗ ಅವನು ವೃಷಭದಿಂದ ಇಳಿದು ಆ ಮೂರ್ತಿಯನ್ನು ಅಪ್ಪಿಕೊಂಡು ದುಃಖಿಸುತ್ತಾನೆ. ಮತ್ತು ಅಲ್ಲಿಂದ ಕಾಡಿಗೆ ಹೊರಟು ಹೋಗುತ್ತಾನೆ. ಇದರ ಅರ್ಥವೇನು? ಅದನ್ನು ಶೋಧಿಸಿ ಬಂದು ಹೇಳಿದವರನ್ನು ನಾನು ವರಿಸುತ್ತೇನೆ" ಎಂದಳು. ಅಹ್ಮದನು ತಾನು ಆ ಕಾರ್ಯವನ್ನು ಮಾಡುತ್ತೇನೆಂದು ಹೇಳಿ "ನೀವು ಈ ರೀತಿ ವಿಶೇಷ ದಾನ ಧರ್ಮ ಮಾಡುತ್ತಿರುವಿರಲ್ಲ! ನಿಮ್ಮ ರಾಜ್ಯ ಚಿಕ್ಕದು ಸಂಪತ್ತು ಕಡಿಮೆ. ಇದನ ಅರ್ಥವೇನು?" ಎಂದು ಪ್ರಶ್ನಿಸಿದನು. ಮಹಾರಾಣಿಯು ಅದರ ರಹಸ್ಯವನ್ನು ವಿವರಿಸತೊಡಗಿದಳು.

"ಮಹಾರಾಜ, ನಾವು ಏಳು ಜನ ಹೆಣ್ಮಕ್ಕಳು. ನಾನು ಎಲ್ಲರಿಗಿಂತಲೂ ಕಿರಿಯವಳು. ಒಂದುದಿನ ಅರಸನಾದ ನಮ್ಮ ತಂದೆಯು ನಮ್ಮೆಲ್ಲರನ್ನು ಕರೆದು "ನೀವು ಅನುಭವಿಸುತ್ತಿರುವ ಈ ಸುಖ ಸಂಪತ್ತೆಲ್ಲ ಯಾರಿಂದ ದೊರೆಯುತ್ತದೆ?'' ಎಂದು ಪ್ರಶ್ನಿಸಿದನು. ಆಗ ಎಲ್ಲರೂ "ತಂದೆಯೇ, ನಿನ್ನ ದಯೆಯಿಂದಲೇ ನಮಗೆಲ್ಲ ಇದು ದೊರೆಯುತ್ತದೆ" ಎಂದು ನುಡಿದರು ಆದರೆ ನಾನು ಮಾತ್ರ ಆ ಮಾತನ್ನೊಪ್ಪಿಕೊಳ್ಳಲಿಲ್ಲ. ಎಲ್ಲ ದೇವರ ದಯೆ

ಯಿಂದಲೇ ನಡೆಯುತ್ತದೆ” ಎಂದು ನುಡಿದೆ. ನನ್ನ ಉತ್ತರವನ್ನು ಕೇಳಿ ತಂದೆ ಸಿಟ್ಟಾದನು. ನನ್ನನ್ನು ಕಾಡಿನಲ್ಲಿ ಬಿಟ್ಟು ಬರಲು ಆಜ್ಞಾಪಿಸಿದನು. ನಾನು ಕಾಡಿನಲ್ಲಿ ಅನ್ನವಿಲ್ಲದೆ ಎರಡು ಮೂರು ದಿನಗಳ ವರೆಗೆ ತಿರುಗಾಡಿದೆನು. ಹಾಗೆ ಅಲೆಯುತ್ತಿದ್ದಾಗ ಒಬ್ಬ ವೃದ್ಧನಾದ ಫಕೀರನು ನನ್ನ ಕಣ್ಣಿಗೆ ಕಾಣಿಸಿದ. ಅವನಿಗೆ ನಮಸ್ಕಾರ ಮಾಡಲು ಅವನು ನನನ್ನು ಆಶೀರ್ವದಿಸಿ ಮಾತನಾಡಿಸಿದನು. ನನ್ನ ದುರವಸ್ಥೆಯನ್ನು ನಾನು ತೋಡಿಕೊಳ್ಳಲು ಅವನು ಸಹಾನುಭೂತಿ ತೋರಿ, ತಾನು ಕಾಪಾಡಿಕೊಂಡು ಬರುವುದಾಗಿ ನುಡಿದನು.

ಆ ಕಾಡಿನಲ್ಲೇ ನಾವಿಬ್ಬರೂ ಸೇರಿ ಮಣ್ಣನ್ನು ಅಗೆದು, ಗೋಡೆಯನ್ನಿಟ್ಟು ಒಂದು ಸಣ್ಣ ಗುಡಿಸಲನ್ನು ಕಟ್ಟಲು ತೊಡಗಿದೆವು. ಒಂದು ದಿನ ನಾನು ಮಣ್ಣನ್ನು ತೆಗೆಯುತ್ತಿದ್ದಾಗ ಒಂದು ದೊಡ್ಡ ಕಲ್ಲು ಕಂಡಿತು. ಅದನ್ನು ಎತ್ತಿದಾಗ ಒಳಗೆ ಇಳಿವ ಸೋಪಾನಗಳು ಕಾಣಿಸಿದುವು. ನಾನು ಇಳಿದು ನೋಡಲು ಅಪಾರವಾದ ಮುತ್ತು ರತ್ನಗಳಿಂದ ತುಂಬಿದ್ದ ಒಂದು ದೊಡ್ಡ ಕೋಣೆಯೇ ಇತ್ತು. ನಾನು ಕೆಲವು ಮುತ್ತು ರತ್ನಗಳನ್ನು ತೆಗೆದುಕೊಂಡು ಬಂದು ಪುನಃ ಅದರ ಬಾಯಿ ಮುಚ್ಚಿಕೊಂಡೆ. ಭಿಕ್ಷೆ ತೆಗೆದುಕೊಂಡು ಮುದುಕನು ಮನೆಗೆ ಬಂದ ಮೇಲೆ ಕೂಡಾ ಆ ನಿಧಿಯ ಸಮಾಚಾರವನ್ನು ನಾನು ಹೇಳಲಿಲ್ಲ. ಮರುದಿನ ಅವನು ತೆರಳಿದಾಗ ಅವನಿಗೆ ಬಡಗಿಯವರನ್ನೂ ಮನೆ ಕಟ್ಟುವವರನ್ನೂ ಕರೆದುಕೊಂಡು ಬರಲು ಹೇಳಿದೆ. ದೇವರು ದಯೆದೋರಿ ಬೇಗನೇ ಅಪಾರವಾದ ಸಂಪತ್ತನ್ನು ಕೊಡುವುದಾಗಿ ತಿಳಿಸಿದೆನು. ಫಕೀರನು ಆಶ್ಚರ್ಯಚಕಿತನಾದರೂ ಅವರೆಲ್ಲರನ್ನೂ ಕರೆದು ತಂದನು. ನಾನು ಅವರಿಗೆ ಮುತ್ತು ರತ್ನಗಳನ್ನೇ ಕೂಲಿಯಾಗಿ ಕೊಟ್ಟೆನು. ಅದನ್ನು ಕೇಳಿ ಸಾವಿರಾರು ಕೂಲಿಕಾರರು ಬಂದರು. ಅವರೆಲ್ಲರ ಸಹಾಯದಿಂದ ದೊಡ್ಡ ಅರಮನೆಯನ್ನೂ ಕೋಟೆ ಕೊತ್ತಲಗಳನ್ನೂ ಕಟ್ಟಿಸಿದೆನು. ಸಾವಿರಾರು ನಾಗರಿಕರು ಬಂದು ಸಣ್ಣ ಸಣ್ಣ ಮನೆಗಳನ್ನು ಕಟ್ಟಿಕೊಂಡು ವಾಸಿಸತೊಡಗಿದರು. ಶ್ರೀಮಂತರೂ ವ್ಯಾಪಾರಿಗಳೂ ಬಂದು ವಾಸಿಸತೊಡಗಿದರು. ಈ ವಾರ್ತೆ ನನ್ನ ತಂದೆಯ ಕಿವಿಗೂ ಮುಟ್ಟಿತು. ತನ್ನ ಆಸ್ಥಾನಕ್ಕೆ ಬರಬೇಕೆಂದು ಅವನು ಹೇಳಿ ಕಳಿಸಿದನು ಆದರೆ ಅವನೇ ಬರುವುದು.

ಉಚಿತವೆಂದು ನಾನು ಸವಾರರ ಮೂಲಕ ಹೇಳಿ ಕಳಿಸಿದೆ. ಅವನೂ ಬಂದನು. ನಾನು ಅವನನ್ನು ಸ್ವಾಗತಿಸಿ, ನನ್ನ ಸಂಪತ್ತಿನ ವಿವರವನ್ನೆಲ್ಲ ಹೇಳಿ ದೇವರ ದಯೆಯಿಂದಲೇ ಇದೆಲ್ಲವೂ ದೊರಕಿದೆಯೆಂದು ನುಡಿದೆನು. ಮತ್ತು ತಂದೆಗೆ ಅಮೂಲ್ಯವಾದ ಮುತ್ತು ರತ್ನಗಳನ್ನು ಉಡುಗೊರೆಯಾಗಿ ಅರ್ಪಿಸಿದೆನು. ಕೆಲವು ವರುಷಗಳ ಮೇಲೆ ಅವನು ತೀರಿಕೊಂಡನು. ಮತ್ತು ಅವನಾನಂತರ ನಾನೇ ರಾಣಿಯಾಗಬೇಕೆಂದು ಮೃತ್ಯುಪತ್ರ ಬರೆದಿಟ್ಟಿದ್ದನು. ಅದರಂತೆ ನಾನು ರಾಜ್ಯಸೂತ್ರ ಹಿಡಿದು ಆಳುತಿದ್ದೇನೆ ದೇವರಿಂದ ದೊರೆತ ಅಮೂಲ್ಯ ಸಂಪತ್ತನ್ನೆಲ್ಲ ಬಡಬಗ್ಗರಿಗೆ ದಾನ ಮಾಡುತಿದ್ದೇನೆ. ನನ್ನನ್ನು ಮದುವೆ ಮಾಡಿಕೊಳ್ಳಲು ಅನೇಕರು ಬಯಸಿ ಬಂದರು. ಆದರೆ ನನ್ನ ಪಣವನ್ನು ಒಬ್ಬರೂ ಈಡೇರಿಸಲಿಲ್ಲ. ನೀನು ಸಾಧಿಸಿ ಬಂದರೆ ನಿನ್ನನ್ನೇ ಮದುವೆಯಾಗುತ್ತೇನೆ.''

ರಾಣಿಯ ಕಥೆ ಕೇಳಿ ಅಹ್ಮದನು ಅಮರಪುರ ನಗರಾಭಿಮುಖವಾಗಿ ಹೊರಟನು. ಆ ನಗರಕ್ಕೆ ಬಂದು ಒಂದು ಧರ್ಮಛತ್ರದಲ್ಲಿ ಉಳಿದನು. ಶುಕ್ಲಪಕ್ಷದ ಪ್ರತಿಪದೆಯ ದಿನ ನಡೆಯುವ ಅದ್ಭುತ ಘಟನೆಯ ವಿವರಗಳನ್ನೆಲ್ಲ ಕೇಳಿಕೊಂಡನು. ಆ ಮೇಲೆ ಅದನ್ನು ನೋಡಲು ಕಾತುರನಾಗಿದ್ದನು. ಹೀಗಿರುತ್ತಿರಲು ಆ ದಿನ ಬಂತು. ಜನರು ಜಾತ್ರೆಯಂತೆ ಸೇರಿದ್ದರು. ಅಷ್ಟರಲ್ಲಿ ಶ್ವೇತಾಶ್ವವನ್ನೇರಿದ ರಾಜಕುಮಾರನೊಬ್ಬನು ಖಡ್ಗವನ್ನು ಝಳಪಿಸುತ್ತ ಬಂದನು. ಮತ್ತು ಅವನ ಸಂಗಡಿಗರು ತಂದಿದ್ದ ಸ್ತ್ರೀಮೂರ್ತಿಯನ್ನು ಕಂಡಕೂಡಲೇ ಆಲಿಂಗಿಸಿ ಅಳತೊಡಗಿದನು. ಆ ಮೇಲೆ ಅವನು ಜನಸಮುದಾಯವನ್ನು ಬಿಟ್ಟು ಕಾಡಿಗೆ ಹೊರಟನು ಅಹ್ಮದನು ಆ ಸಂದರ್ಭ ಸಾಧಿಸಿ ತಾನೂ ಅವನ ಬೆನ್ನ ಹಿಂದೆಯೇ ಹೋದನು. ಜನರು ಅವನನ್ನು ಹೋಗಗೊಡಲಿಲ್ಲ. ಇದನ್ನು ಕಂಡ ಅಹ್ಮದನು ಮುಂದಿನ ಸಲ ಆ ರಾಜಪುತ್ರನು ತೆರಳುತಿದ್ದ ರಸ್ತೆಯಲ್ಲಿ ಒಂದೆಡೆ ಅಡಗಿ ಕುಳಿತನು. ರಾಜಪುತ್ರನು ಕುದುರೆಯನ್ನೇರಿ ತೆರಳುತಿದ್ದಾಗ ಅಡ್ಡ ಬಂದನು. ಆಗ ಅವನನ್ನು ಕೊಲ್ಲಲು ರಾಜಪುತ್ರನು ಕತ್ತಿಯೆತ್ತಲು ಅಹ್ಮದನು ಅವನಿಗೆ ನಮಸ್ಕರಿಸಲು ರಾಜಪುತ್ರನು ದಯೆದೋರಿ ತನ್ನ ದಾರಿ ಹಿಡಿದು ಹೋದನು. ರಾಜಪುತ್ರನು ಕಾಡಿನಲ್ಲಿದ್ದ ಒಂದು ಗುಡ್ಡಕ್ಕೆ ತೆರಳಿದನು. ಅದಕ್ಕೊಂದು

ಸುರಂಗ ತೋಡಿದ್ದರು ಆ ಸುರಂಗಕ್ಕೆ ಕಬ್ಬಿಣದ ಬಾಗಿಲು. ಅಹಮ್ಮದನು ಕೂಡಾ ಆ ರಾಜಪುತ್ರನ ಬೆನ್ನ ಹಿಂದೆಯೇ ತೆರಳಿ ಆ ಸುರಂಗದೊಳಗೆ ಪ್ರವೇಶಿಸಿದನು ಒಳಗೆ ಒಂದು ದೊಡ್ಡ ಅರಮನೆಯಿತ್ತು. ಅಹ್ಮದನು ಅಲ್ಲಿಗೆ ತೆರಳಿದ ಮೇಲೆ ಆ ರಾಜ ಕುಮಾರನನ್ನು ಕಂಡು ತನ್ನ ಗುರುತು ಪರಿಚಯ ಹಾಗೂ ತಾನು ಬಂದ ಉದ್ದೇಶವನ್ನೆಲ್ಲ ವಿವರಿಸಿದನು. ಆಗ ಆ ರಾಜಪುತ್ರನು ತನ್ನ ಕಥೆಯನ್ನು ಹೇಳತೊಡಗಿದನು.

"ಮಹಾರಾಜ, ನಾನು ಈ ನಗರದ ರಾಜಪುತ್ರನು. ನಾನು ಯೌವನಕ್ಕೆ ಕಾಲಿಟ್ಟ ಮೇಲೆ ಒಂದು ದಿನ ಈ ಕಾಡಿಗೆ ಬೇಟೆಗಾಗಿ ಬಂದಿದ್ದೆ. ಆಗ ಅತ್ಯಂತ ಲಾವಣ್ಯವತಿಯಾದ ಸ್ತ್ರೀಯೊಬ್ಬಳನ್ನು ಕಂಡೆ. ಅವಳ ಮೇಲೆ ಮೋಹವೂ ಆಯಿತು. ಅವಳೂ ನನ್ನ ಮೇಲೆ ಅನುರಾಗ ತೋರಿದಳು. ಇಬ್ಬರೂ ಗಾಂಧರ್ವ ಪದ್ಧತಿಯಿಂದ ಮದುವೆಯಾದೆವು. ಆದರೆ ಸ್ವಲ್ಪ ಕಾಲವಾದ ಮೇಲೆ ಅದೃಶ್ಯಳಾದಳು. ಎಲ್ಲೆಲ್ಲಿ ಚಾರರನ್ನು ಕಳಿಸಿದರೂ ಅವಳ ಪತ್ತೆಯಾಗಲಿಲ್ಲ. ಅವಳೆಲ್ಲಿ ಹೋದಳೋ ತಿಳಿಯಲಿಲ್ಲ. ಅಂದಿನಿಂದ ನಾನು ಇದೇ ಕಾಡಿನಲ್ಲಿದ್ದೇನೆ. ಅವಳ ದರ್ಶನಾಪೇಕ್ಷೆಯಿಂದ ಇಲ್ಲೇ ಅರಮನೆ ಕಟ್ಟಿಸಿ ವಾಸಿಸುತಿದ್ದೇನೆ. ಶುಕ್ಲ ಪಕ್ಷದ ಪ್ರತಿಪದೆಯ ದಿವಸ ಈ ಊರಲ್ಲಿ ಜಾತ್ರೆ ಸೇರುತ್ತದೆ. ಆಗ ನಾನು ನನ್ನ ದೇವಿಯ ಮೂರ್ತಿಯನ್ನು ಮೆರಸುತ್ತೇನೆ ಮತ್ತು ನಾನೂ ಅಶ್ವಾರೂಢನಾಗಿ ಅಲ್ಲಿ ತೆರಳುತ್ತೇನೆ. ಎಲ್ಲಾದರೂ ಯಾರಾದರೂ ಅಂತಹ ಸ್ತ್ರೀಯನ್ನು ಕಂಡರೆ ನನಗೆ ತಿಳಿಸಬೇಕೆಂದು ಜನತೆಗೆ ತಿಳಿಸುವದೇ ನನ್ನ ಉದ್ದೇಶವಾಗಿದೆ. ಆದರೆ ಇಷ್ಟರವರೆಗೂ ತಿಳಿಯಲಿಲ್ಲವಲ್ಲ. ನೀನಾದರೂ ನನ್ನನ್ನು ಈ ದುಃಖದಿಂದ ಬಿಡಿಸು"

ಅದನ್ನು ಕೇಳಿ ಅಹ್ಮದನು ತುಂಬಾ ದುಃಖಿತನಾದನು. ಆ ದೇವಿಯ ಮೂರ್ತಿಯನ್ನು ನೋಡಿ ಅಂತಹ ನಾರೀಮಣಿಯನ್ನು ಹುಡುಕುವದಕ್ಕಾಗಿ ದೇಶ ದೇಶಗಳನ್ನೆಲ್ಲ ಅಲೆದನು. ಆದರೆ ಎಲ್ಲಿಯೂ ಅಂತಹ ಸ್ತ್ರೀ ಅವನ ಕಣ್ಣಿಗೆ ಗೋಚರಿಸಲಿಲ್ಲ. ಇದನ್ನು ನೋಡಿ ಅಹ್ಮದನು ನಿರಾಶೆಯಿಂದ ಒಂದು ಕಾಡಿಗೆ ತೆರಳಿ ಆತ್ಮ ಹತ್ಯವನ್ನು ಮಾಡಿಕೊಳ್ಳಲೆತ್ನಿಸಿದನು. ಆದರೆ ಅಷ್ಟರಲ್ಲಿ ಅಲ್ಲಿದ್ದ ಒಬ್ಬ ಸನ್ಯಾಸಿಯು ಅವನನ್ನು ಕಂಡು ಓಡಿ ಬಂದು ಬಿಡಿಸಿದನು. ಅಹ್ಮದನನ್ನು ನನ್ನ ಪರ್ಣಕುಟಿಗೆ ಕರೆದುಕೊಂಡು ಹೋಗಿ

ಉಪಚರಿಸಿದನು. ಈ ಸನ್ಯಾಸಿ ಮಂತ್ರ ತಂತ್ರಗಳನ್ನೆಲ್ಲ ಬಲ್ಲವನು. ಯೋಗಿ. ಜ್ಞಾನಿ. ಅಹ್ಮದನ ಕಥೆಕೇಳಿ ವ್ಯಸನ ಪಟ್ಟು ತನ್ನ ದಿವ್ಯ ದೃಷ್ಟಿಯಿಂದ ನೋಡಲು ಅವಳು ದೇವಾಂಗನೆಯೆಂದು ಅವನಿಗೆ ತಿಳಿಯಿತು. ಅವಳಿರುವ ಸ್ಥಳವನ್ನು ಆ ಸನ್ಯಾಸಿಯು ಹೇಳಲು ಅಹ್ಮದನು ಅಲ್ಲಿಗೆ ಬಂದು ರಾಜ ಪುತ್ರನ ಶೋಕವನ್ನು ನಿವೇದಿಸಿದನು. ಅವಳು ಅನುತಾಪಪಟ್ಟು ಅಹ್ಮದ ನೊಂದಿಗೆ ಹೊರಟು ಬಂದಳು. ರಾಜ ಪುತ್ರನು ತನ್ನ ಕಳೆದ ಹೆಂಡತಿಯನ್ನು ಕಂಡು ಅತ್ಯಾನಂದ ಭರಿತನಾದನು. ಅಹ್ಮದನಿಗೆ ಅಪಾರ ಮುತ್ತು ರತ್ನ ವಜ್ರ ವೈಢೂರ್ಯಗಳನ್ನು ಉಡುಗೊರೆಯಾಗಿ ಕೊಟ್ಟನು. ಅಹ್ಮದನು ಅಲ್ಲಿಂದ ಬಂದು ಅಮರಪುರದ ಚಮತ್ಕಾರದ ಕಥೆಯನ್ನು ರಾಣಿಗೆ ತಿಳಿಸಿದನು. ಅವಳೂ ಅವನನ್ನು ಲಗ್ನವಾದಳು.

ರಾಜಪುತ್ರಿಯೇ, ಪಶ್ಚಿಮ ಭಾರತದ ರಾಜಪುತ್ರಿಯು ಅಂತಹ ಪಣ ವನ್ನು ತೊಟ್ಟಿದ್ದರೂ ಅದನ್ನು ಈಡೇರಿಸಲು ಬಲ್ಲ ಒಬ್ಬ ಧೀರೋದಾತ್ತ ಮನುಷ್ಯನು ಹುಟ್ಟಿದ್ದನು. ಅದರಂತೆ ನೀನು ತೊಟ್ಟ ಪಣವನ್ನು ನಾನು ಪೂರ್ಣ ಮಾಡದೇ ಇರಲಾರೆ. ಅದರಿಂದ ನಿನಗೆ ಕೀರ್ತಿಲಭಿಸದು. ಅಂತಹ ಪಣವನ್ನು ತೊಡುವುದೂ ಉಚಿತವಲ್ಲ. ಏಕೆಂದರೆ ಅದರಿಂದ ಅನಂತ ಕಷ್ಟ ಗಳು ಒದಗುತ್ತವೆ.'' ಎಂದು ಹೇಳಿದನು. ಆಗ ಕಲಾವತಿಯು "ರಾಜಪುತ್ರ ಪುರುಷರು ಬಹಳ ಘಾತಕಿಗಳು. ಕಚದೇವಯಾನಿ ಕಥೆ ನಿನಗೆ ಗೊತ್ತಿ ದೆಯೇ ?'' ಎಂದು ಕೇಳಿದಳು. ಪ್ರತಾಪಸೇನನು ತನಗೆ ತಿಳಿದಿಲ್ಲವೆಂದು ಹೇಳಲು ಕಲಾವತಿಯು ಅದನ್ನು ಹೇಳತೊಡಗಿದಳು.

## ೩೯. ಕಚ ಮತ್ತು ದೇವಯಾನಿ

ಪ್ರಾಚೀನ ಕಾಲದಲ್ಲಿ ದೇವಾಸುರರೊಳಗೆ ಭೀಕರ ಯುದ್ಧವು ಸಂಭವಿ ಸಿತು. ಬೃಹಸ್ಪತಿ ದೇವತೆಗಳ ಗುರು. ಶುಕ್ರಾಚಾರ್ಯರು ಅಸುರರ ರಾಜ ಗುರು. ಇಬ್ಬರೂ ಪ್ರವೀಣರು. ಇಬ್ಬರೂ ಮಂತ್ರ, ತಂತ್ರ, ಮಾಯ, ಮದ್ದುಗಳನ್ನು ಬಲ್ಲವರು. ದೇವತೆಗಳು ಯುದ್ಧದಲ್ಲಿ ಮಡಿದಾಗ ಬೃಹಸ್ಪ ತಾಚಾರ್ಯರು ಅಮೃತವನ್ನು ಚಿಮುಕಿಸಿ ಅವರನ್ನು ಬದುಕಿಸುತಿದ್ದರು.

ಅಸುರರು ಸತ್ತಾಗ ಸಂಜೀವಿನಿಯಿಂದ ಶುಕ್ರಾಚಾರ್ಯರು ಅವರನ್ನು ಜೀವಂತ
ಮಾಡುತಿದ್ದರು. ಆದರೆ ಅಮೃತಕ್ಕಿಂತಲೂ ಸಂಜೀವಿನಿಯು ಹೆಚ್ಚು ಸುಲಭ
ವಿದ್ಯೆಯಾಗಿದ್ದಿತು. ಆದುದರಿಂದ ಬೃಹಸ್ಪತ್ಯಾಚಾರ್ಯರು ತನ್ನ ಮಗನಾದ
ಕಚನನ್ನು ಕರೆದು ಶುಕ್ರಾಚಾರ್ಯರಲ್ಲಿ ತೆರಳಿ ಅವರ ಶಿಷ್ಯತ್ವ ಸಂಪಾದಿಸಿ,
ಆ ಸಂಜೀವಿನಿ ವಿದ್ಯೆಯನ್ನು ಕಲಿತುಕೊಂಡು ಬರಬೇಕೆಂದು ಉಪದೇಶಿಸಿ
ದರು. ಅದರಂತೆ ಕಚನು ಶುಕ್ರಾಚಾರ್ಯರಲ್ಲಿ ಬಂದನು. ಆದರೆ ಇದರ
ಲ್ಲೇನೋ ಕುಹಕವಿದೆಯೆಂದು ಶುಕ್ರಾಚಾರ್ಯರು ಮನಗಂಡು " ದೇವಾಸುರ
ರೊಳಗೆ ಪರಸ್ಪರ ಮೈತ್ರಿ ಇಲ್ಲ. ಹೀಗಿರುವಾಗ ನೀನು ಇಲ್ಲಿ ಬಂದು ಶಿಷ್ಯನ
ನನ್ನಾಗಿ ಸ್ವೀಕರಿಸಬೇಕೆಂದು ಕೇಳುತಿದ್ದಿಯಲ್ಲಾ! ಇದರರ್ಥವೇನು ?''
ಎಂದು ಪ್ರಶ್ನಿಸಿದರು. "ಆಗ ಕಚನು ಮಹಾ ಸ್ವಾಮಿ, ನಾನು ವಿದ್ಯಾರ್ಥಿ.
ನನಗೆ ಯುದ್ಧದಲ್ಲಿ ಯಾವ ಆಸಕ್ತಿಯೂ ಇಲ್ಲ" ಎಂದು ನುಡಿದನು.
ಶುಕ್ರಾಚಾರ್ಯರು ಮೆಚ್ಚಿ ಅವನನ್ನು ಶಿಷ್ಯನನ್ನಾಗಿ ಮಾಡಿಕೊಂಡರು.
ಕಾಲಕ್ರಮೇಣ ಶುಕ್ರಾಚಾರ್ಯರ ಮಗಳಾದ ದೇವಯಾನಿಗೆ ಕಚನ ಮೇಲೆ
ಮೋಹವಾಯಿತು. ತನ್ನ ತಂದೆಗೆ ಇದನ್ನು ಅವಳು ತಿಳಿಸಿ ಅವನನ್ನೇ
ಮದುವೆಯಾಗುವುದಾಗಿಯೂ ತಿಳಿಸಿದಳು.

ಇತ್ತ ಅಸುರರು ಮಾತ್ರ ಕಚನನ್ನು ಪ್ರೀತಿಸಲಿಲ್ಲ. ತಮ್ಮ ವೈರಿ
ಯೆಂದೇ ಅವರು ಅವನನ್ನು ಪರಿಗಣಿಸುತ್ತಿದ್ದರು. ತಮ್ಮ ಗುಪ್ತವಿದ್ಯೆ
ಯನ್ನು ಅರಿತುಕೊಳ್ಳಲು ಬಂದವನೆಂದೇ ಅವರ ಸಂಶಯ. ಆದುದರಿಂದ
ಒಂದು ದಿನ ಕಚನು ಶುಕ್ರಾಚಾರ್ಯರ ಗೋವುಗಳನ್ನು ಮೇಯಿಸಲು
ತೆರಳಿದಾಗ ದೈತ್ಯರು ಬಂದು ಅವನನ್ನು ಕೊಂದೊಗೆದರು. ಸಂಜೆ
ಗೋಧೂಳಿ ಸಮಯಕ್ಕೆ ಗೋವುಗಳೊಂದಿಗೆ ಕಚನು ಬಾರದೇ ಇದ್ದುದನ್ನು
ಕಂಡು ದೇವಯಾನಿಯು ಗಾಬರಿಯಾದಳು. ತಂದೆಗೆ ಬಂದು ತಿಳಿಸಲು
ಅವನು ದಿವ್ಯದೃಷ್ಟಿಯಿಂದ ನೋಡಿದನು. ಕಚನನ್ನು ಕೊಂದಿರುವರೆಂದು
ಅವನು ಅರಿತು ಸಂಜೀವಿನಿಯಿಂದ ಅವನನ್ನು ಬದುಕಿಸಿ ಕರೆದು ತಂದನು.
ಇನ್ನೊಂದು ಸಲ ದೈತ್ಯರು ಅವನನ್ನು ಕೊಂದು ಸುಟ್ಟು ಅವನ ಚಿತಾಭಸ್ಮ
ವನ್ನು ಶುಕ್ರಾಚಾರ್ಯರ ಮದ್ಯದಲ್ಲಿ ಕಲಿಸಿ ಕುಡಿಯಲು ಅವನಿಗೆ ಕೊಟ್ಟರು.
ದೇವಯಾನಿಯು ಕಚನನ್ನು ಬದುಕಿಸಬೇಕೆಂದು ಬೇಡಿಕೊಂಡಳು. ಆಗ

ಶುಕ್ರಾಚಾರ್ಯರು "ಕಚನೇ ಎಲ್ಲಿದ್ದಿ?" ಎಂದು ಕೇಳಲು ಅವರ ಹೊಟ್ಟೆಯೊಳಗಿಂದಲೇ ಅವನು ಉತ್ತರ ಕೊಟ್ಟನು. ಆಗ ಶುಕ್ರಾಚಾರ್ಯರ "ಮಗಳೇ, ಕಚನನ್ನು ಹೊರಗೆ ಕರೆದರೆ ನಾನು ಬದುಕುವಂತಿಲ್ಲ. ನಿನಗೆ ನಾನು ಬೇಕೋ? ಕಚನು ಬೇಕೋ?" ಎಂದು ಪ್ರಶ್ನಿಸಲು ದೇವಯಾನಿಯು "ತಂದೆಯೇ, ನನಗೆ ಇಬ್ಬರೂ ಬೇಕು. ನೀವು ಸಂಜೀವಿನಿ ವಿದ್ಯೆಯನ್ನು ಅವನಿಗೆ ಉಪದೇಶಿಸಿರಿ. ಆ ಮೇಲೆ ಅವನನ್ನು ಹೊರಗೆ ಕರೆಯಿರಿ: ಅವನು ಹೊರಗೆ ಬಂದ ಮೇಲೆ ಅದೇ ವಿದ್ಯೆಯಿಂದ ನಿಮ್ಮನ್ನು ಬದುಕಿಸುತ್ತಾನೆ" ಎಂದಳು. ಅದರಂತೆಯೇ ಆಯಿತು.

ಆ ಮೇಲೆ ಕೆಲವು ಸಮಯದ ಮೇಲೆ ಕಚನು ತನ್ನ ದೇಶಕ್ಕೆ ಹೊರಟು ಹೋಗುವುದಾಗಿ ನುಡಿದನು, ಆಗ ದೇವಯಾನಿಯು ಅವನನ್ನು ತಡೆದು ತನಗೆ ಅವನ ಮೇಲೆ ಮೋಹವಾಗಿರುವುದರಿಂದ ತನ್ನನ್ನು ಅವನು ವರಿಸಬೇಕೆಂದು ಪ್ರಾರ್ಥಿಸಿದಳು. ಆದರೆ ಕಚನು ಅದಕ್ಕೊಪ್ಪಲಿಲ್ಲ, ಗುರುಪುತ್ರಿಯು ತನ್ನ ತಂಗಿ ಸಮಾನ ಎಂದನು. ಅದನ್ನು ಕೇಳಿ ದೇವಯಾನಿಯು ರೇಗಿ "ನಿನ್ನ ವಿದ್ಯೆಯು ನಿನಗೆ ಫಲಿಸದೇ ಹೋಗಲಿ" ಎಂದು ಶಾಪಕೊಟ್ಟಳು. "ನೀನು ಬ್ರಾಹ್ಮಣ ಕನ್ಯೆಯಾಗಿದ್ದರೂ ಕ್ಷತ್ರಿಯನನ್ನು ನೀನು ವರಿಸುವಂತಾಗಲಿ" ಎಂದು ಕಚನು ಅವಳಿಗೆ ಪ್ರತಿಶಾಪಕೊಟ್ಟು ಹೊರಟು ಹೋದನು. ದೇವಯಾನಿಯು ದುಃಖಿತಳಾದಳು. ದೈತ್ಯ ಅರಸನ ಪುತ್ರಿಯಾದ ಶರ್ಮಿಷ್ಠೆಯೊಡನೆ ಜಲವಿಹಾರಕ್ಕೆ ಹೋದಳು. ಜಲವಿಹಾರಕ್ಕೆ ಇಳಿದಾಗ ಅವರು ತಂತಮ್ಮ ಬಟ್ಟೆಗಳನ್ನು ಸರೋವರದ ದಂಡೆಯ ಮೇಲಿಟ್ಟಿದ್ದರು. ಅಷ್ಟರಲ್ಲಿ ಇಂದ್ರರಾಜನು ಬರುತ್ತಿರುವ ಸುದ್ದಿ ಕೇಳಿ ಇಬ್ಬರೂ ದಂಡೆಗೆ ಬಂದು ಸೀರೆಗಳನ್ನು ಸುತ್ತಿಕೊಳ್ಳಲಾರಂಭಿಸಿದರು. ಆದರೆ ದುರ್ದೈವದಿಂದ ದೇವಯಾನಿಯ ಬಟ್ಟೆ ಬರೆಗಳನ್ನು ಶರ್ಮಿಷ್ಠೆಯು ಧರಿಸಿಕೊಂಡಳು. ಇದನ್ನು ಕಂಡು ದೇವಯಾನಿಯು ಶರ್ಮಿಷ್ಠೆಯನ್ನು ಹೀಗಳೆದಳು. ಶರ್ಮಿಷ್ಠೆಯು ರೇಗಿ ತನ್ನ ಸಖೀ ಜನರನ್ನು ಕರೆದು ದೇವಯಾನಿಯನ್ನು ಹೊಡೆದು ಆ ಸರೋವರಕ್ಕೆ ದೂಡಿ ಹೊರಟು ಹೋದಳು. ಅಷ್ಟರಲ್ಲಿ ಯಯಾತಿ ರಾಜನು ಆ ಸರೋವರಕ್ಕೆ ಬಂದನು. ಕೆರೆಯಲ್ಲಿ ಬಿದ್ದಿರುವ ಸ್ತ್ರೀಯನ್ನು ಕಂಡು ಅವಳನ್ನು ಮೇಲೆ ತೆಗೆದನು.

ದೇವಯಾನಿಯು ಅಲ್ಲಿಂದ ಹೊರಟು ತನ್ನ ಸಖಿಯ ಮೂಲಕ ತಂದೆಗೆ ಸಕಲ ವೃತ್ತಾಂತವನ್ನೂ ತಿಳಿಸಿದಳು. ಅವನು ಮಗಳಿದ್ದಲ್ಲಿ ಬಂದು ಅವಳ ದುರವಸ್ಥೆ ಕಂಡು ತುಂಬಾ ರೇಗಿದನು. "ರಾಜಪುತ್ರಿಗೆ ತಕ್ಕ ಶಾಸನ ಮಾಡುತ್ತೇನೆ. ನೀನು ಚಿಂತಿಸಬೇಡ. ನನ್ನ ಮಾತನ್ನು ಅವನು ಕೇಳದಿದ್ದರೆ ದೈತ್ಯ ಕುಲವನ್ನೆಲ್ಲ ನಾಶಮಾಡದೇ ಬಿಡಲಾರೆ" ಎಂದು ಹೇಳಿ ಮಗಳನ್ನು ಸಂತೈಸಿ ತನ್ನ ಮನೆಗೆ ಕರೆದುಕೊಂಡು ಹೋದನು. ಆ ಮೇಲೆ ಅಲ್ಲಿಂದ ರಾಜಸಭೆಗೆ ಬಂದು ರಾಜಪುತ್ರಿಯು ತನ್ನ ಮಗಳಿಗೆ ಹೊಡೆದು ಕೆರೆಗೆ ದೂಡಿದುದನ್ನು ಹೇಳಿ "ಇನ್ನು ನನಗೆ ಅಪ್ಪಣೆ ಕೊಡು. ನಾನು ನನ್ನ ಇಷ್ಟ ಬಂದಲ್ಲಿ ಹೊರಟು ಹೋಗುತ್ತೇನೆ" ಎಂದು ನುಡಿದನು. ಅವನ್ನು ಕೇಳಿ ರಾಜನು ತುಂಬಾ ಗಾಬರಿಯಾದನು. ಆಗ ಆ ರಾಜನು ಶುಕ್ರಾಚಾರ್ಯರ ಕ್ಷಮೆ ಕೇಳಿ ತನ್ನ ಪುತ್ರಿ ಶರ್ಮಿಷ್ಠೆಯನ್ನು ಕರೆದು ದೇವಯಾನಿಯ ಸೇವೆ ಮಾಡುವಂತೆ ಆಜ್ಞಾಪಿಸಿದನು.

ಮತ್ತೊಂದು ಸಲ ದೇವಯಾನಿಯೂ ಶರ್ಮಿಷ್ಠೆಯೂ ಜಲಕ್ರೀಡೆಯನ್ನಾಡುತಿದ್ದಾಗ ಯಯಾತಿ ರಾಜನು ಅಲ್ಲಿಗೆ ಬಂದನು. ಆಗ ತನ್ನನ್ನು ಮದುವೆ ಮಾಡಿಕೊಳ್ಳಬೇಕೆಂದು ದೇವಯಾನಿಯು ಪ್ರಾರ್ಥಿಸಿಕೊಂಡಳು. ಆದರೆ ಶುಕ್ರಾಚಾರ್ಯರನ್ನು ನೆನಸಿ, ಬ್ರಾಹ್ಮಣ ಕನ್ಯೆಯನ್ನು ತಾನು ಮದುವೆ ಮಾಡಿಕೊಂಡರೆ ಅವರು ಬಿಡಲಾರರೆಂದು ಹೆದರಿ ತನ್ನ ಮನೋಗತವನ್ನು ತಿಳಿಸಿದನು. ಆದರೆ ತನ್ನ ತಂದೆಯು ತನ್ನ ಇಚ್ಛೆಯ ವಿರುದ್ಧ ಬರಲಾರನೆಂದು ಅವಳು ಹೇಳಿದುದರಿಂದ ಯಯಾತಿಯು ಶುಕ್ರಾಚಾರ್ಯರನ್ನು ಕಂಡು ಎಲ್ಲ ಸಂಗತಿಯನ್ನೂ ತಿಳಿಸಿದನು. ಶುಕ್ರಾಚಾರ್ಯರು ನಿರುಪಾಯರಾಗಿ ತನ್ನ ಮಗಳನ್ನು ಅವನಿಗೇ ಕೊಟ್ಟು ಮದುವೆ ಮಾಡಿದರು. ಕಾಲಾನುಭಾಗದಲ್ಲಿ ಅವರಿಗೆ ಯದು ಮತ್ತು ತುರ್ವಸು ಎಂಬಿಬ್ಬರು ಮಕ್ಕಳಾದರು.

ಒಂದು ದಿನ ಯಯಾತಿ ರಾಜನು ಬೇಟೆಯಾಡಿ ಬಳಲಿ ಬಂದ ಮೇಲೆ ಶರ್ಮಿಷ್ಠೆಯ ಉದ್ಯಾನವನದ ಬಳಿ ಡೇರೆ ಹೊಡೆದನು. ಅವನು ಅಲ್ಲಿಳಿದುದನ್ನು ಕಂಡು ಶರ್ಮಿಷ್ಠೆಯು ಹೋಗಿ ಅವನನ್ನು ಸ್ವಾಗತಿಸಿ ತನ್ನ ಅರಮನೆಗೆ ಕರೆದುಕೊಂಡು ಬಂದಳು. ಅವಳು ನವಯೌವನ ಭರಿತಳಾದ ಕನ್ಯೆ. ಯಯಾತಿಯನ್ನು ಮೋಹಿಸಿದಳು. ಅವಳ ರೂಪ ಗುಣ ಮೃದುಮಧುರ

ಮಾತುಗಳನ್ನು ಕೇಳಿ ಯಯಾತಿಯೂ ಮೋಹಿತನಾದನು. ಮತ್ತು ರಾತ್ರಿ ಅವಳೊಂದಿಗೇ ರತಿಸುಖದಲ್ಲಿ ಕಳೆದನು ಆ ಮೇಲೆ ಸಂದರ್ಭ ಸಾಧಿಸಿ ಯಾವಾಗಲೂ ರಾತ್ರಿ ಕಾಲದಲ್ಲಿ ಶರ್ಮಿಷ್ಠೆ ಇದ್ದಲ್ಲಿ ಬರುತಿದ್ದನು. ಕಾಲಾನು ಭಾಗದಲ್ಲಿ ಶರ್ಮಿಷ್ಠೆಯೂ ಗರ್ಭಿಣಿಯಾದಳು ಅನು ಮತ್ತು ದ್ರುಹ್ಯುಮತ್ತು ಎಂಬ ಇಬ್ಬರು ಪುತ್ರರನ್ನೂ ಅವಳು ಪಡೆದಳು. ಅವಳಿಗೆ ಪುತ್ರರಾದ ಮಾತು ಕೇಳಿ ದೇವಯಾನಿಯು ಬಂದು "ಪುರುಷ ಸಂಪರ್ಕವಿಲ್ಲದೆ ಹೇಗೆ ನಿನಗೆ ಮಕ್ಕಳಾದುವು?" ಎಂದು ಪ್ರಶ್ನಿಸಲು "ಒಬ್ಬ ಋಷಿಯಿಂದ ಆದವು" ಎಂದು ಅವಳು ಹೇಳಿದಳು. ಆ ಮೇಲೆ ಪುರು ಎಂಬ ಪುತ್ರನೂ ಸಾಧ್ವಿ ಎಂಬ ಮಗಳನ್ನೂ ಶರ್ಮಿಷ್ಠೆಯು ಪಡೆದಳು. ಆಗ ದೇವಯಾನಿಯು ತನ್ನ ಪತಿಯಾದ ಯಯಾತಿಯೊಂದಿಗೇ ಶರ್ಮಿಷ್ಠೆಯು ಅರಮನೆಗೆ ಬಂದಳು. ಆಗ ಆ ಮಕ್ಕಳೆಲ್ಲ ಯಯಾತಿಯಂತೆಯೇ ಅವಳಿಗೆ ಕಾಣಿಸಿದರು. ಆಗ ದೇವ ಯಾನಿಯು ಸಂದೇಹದಿಂದ "ನಿಮ್ಮ ತಂದೆ ಯಾರು?'' ಎಂದು ಕೇಳಲು "ಯಯಾತಿರಾಜ"ನೆಂದೂ ಅವರು ನುಡಿದರು. ಶರ್ಮಿಷ್ಠೆಯೂ ಒಪ್ಪಿ ಕೊಂಡಳು.

ಇದನ್ನು ಕೇಳಿ ದೇವಯಾನಿಯು ಬೇಗಿ ಶುಕ್ರಾಚಾರ್ಯರಿದ್ದಲ್ಲಿ ಬಂದು ದುಃಖಿಸತೊಡಗಿದಳು. ಯಯಾತಿ ರಾಜನೂ ಬಂದು ಶುಕ್ರಾಚಾರ್ಯರಿಗೆ ನಮಸ್ಕರಿಸಿ ತನ್ನ ತಪ್ಪನ್ನು ಮನ್ನಿಸಬೇಕೆಂದು ಬೇಡಿಕೊಂಡನು. ಆದರೂ ಶುಕ್ರಾಚಾರ್ಯರ ಕೋಪವು ಕಡಿಮೆಯಾಗಲಿಲ್ಲ. "ಯಾವಾಗಲೂ ನಿನಗೆ ವೃದ್ಧಾಪ್ಯ ಬರಲಿ'' ಎಂದು ಶಾಪ ಕೊಟ್ಟನು. ಆಗ ಯಯಾತಿಯು ದುಃಖಿಸಿ " ಸ್ವಾಮಿ, ದೇವಯಾನಿಯ ಮೇಲಿನ ಪ್ರೇಮ ಎಳ್ಳಷ್ಟೂ ಕಡಿಮೆ ಯಾಗಿಲ್ಲ '' ಎಂದು ಹೇಳಿ ಪ್ರಾರ್ಥಿಸಲು ಶುಕ್ರಾಚಾರ್ಯರ ಮನಸ್ಸು ಕರ ಗಿತು. "ನಿನ್ನ ಮಕ್ಕಳಲ್ಲಿ ಯಾರಾದರೂ ವೃದ್ಧಾಪ್ಯ ಸ್ವೀಕರಿಸಲು ನೀನು ಅವರ ಯೌವನವನ್ನು ಪಡೆ'' ಎಂದು ಅವರು ಶಾಪಕ್ಕೆ ವಿಮೋಚನೆ ಕೊಟ್ಟರು. ಆಗ ಯಯಾತಿಯು ತನ್ನ ಮಕ್ಕಳನ್ನು ಕರೆದು ತನ್ನ ವೃದ್ಧಾ ಪ್ಯವನ್ನು ಯಾರು ಸ್ವೀಕರಿಸುತ್ತೀರೆಂದು ಪ್ರಶ್ನಿಸಿದನು. ಪುರು ಮಾತ್ರ ಒಪ್ಪಿಕೊಂಡನು. ಉಳಿದವರು ಎಲ್ಲರೂ ನಿರಾಕರಿಸಿದರು. ಆಗ ಯಯಾ ತಿಯು ಉಳಿದವರನ್ನೆಲ್ಲ ಶಪಿಸಿದನು. ಪುರುವಿಗೆ ಪಟ್ಟಕಟ್ಟಿ ತಾನು ದೇವ

ಯಾನಿ ಮತ್ತು ಶರ್ಮಿಷ್ಠೆಯೊಡನೆ ಸುಖದಿಂದ ಕಾಲ ಕಳೆದನು.

ಪ್ರತಾಪಸೇನ, ದೇವಯಾನಿಯು ಕಚನನ್ನು ಅಷ್ಟು ಪ್ರೀತಿಸಿದರೂ ಅವನು ಒಪ್ಪದೆ ದೇವಯಾನಿಗೇ ಶಾಪವನ್ನು ಕೊಟ್ಟನು. ಯಯಾತಿಯಾದರೂ ದೇವಯಾನಿಯನ್ನು ಮೋಸಗೊಳಿಸಿ ಶರ್ಮಿಷ್ಠೆಯೊಡನೆ ಪ್ರೇಮ ಸಂಬಂಧ ಬೆಳೆಸಿದನು. ಪುರುಷರು ಇಷ್ಟು ದುರ್ಮಾರ್ಗಿಗಳಿರುವರು. ಅವರನ್ನು ನಂಬಕೂಡದು. ಆದುದರಿಂದ ನಾನೂ ಮದುವೆಮಾಡಿಕೊಳ್ಳಬಾರದೆಂದು ಪಣತೊಟ್ಟಿರುತ್ತೇನೆ'' ಎಂದು ಕಲಾವತಿಯು ನುಡಿದಳು. ಅದನ್ನು ಕೇಳಿ ಪ್ರತಾಪಸೇನನು "ಸ್ತ್ರೀಯರಿಗಿಂತಲೂ ಪುರುಷರಿಗೇ ಕರುಣೆ ಹೆಚ್ಚು. ಅಂತಹ ಅನೇಕ ಉದಾಹರಣೆಗಳು ನನಗೆ ತಿಳಿದಿವೆ" ಎಂದನು. ಕಲಾವತಿಯು ಅದನ್ನು ಕೇಳಲು ಬಯಸಿದುದರಿಂದ ಪ್ರತಾಪಸೇನನು ಹೇಳತೊಡಗಿದನೆಂದು ಮೋಹನ ದಾಸನು ಮೋಹಿನಿಗೆ ಬೋಧಿಸಿದನು.

## ೪೦. ಅಜಿತಪುತ್ರನ ಕಥೆ

ಪ್ರಾಚೀನ ಕಾಲದಲ್ಲಿ ವಿದರ್ಭ ದೇಶದಲ್ಲಿ ಅಜಿತನೆಂಬ ಒಬ್ಬ ರಾಜನಿದ್ದನು. ಅವನಿಗೆ ಐದು ಜನ ಮಕ್ಕಳಿದ್ದರು. ಅಜಿತನು ಅವರಿಗೆ ಉಚಿತ ಅಭ್ಯಾಸವನ್ನು ಕೊಡಿಸಿದನು. ಅವರು ದೊಡ್ಡವರಾದ ಮೇಲೆ ಅಜಿತನು ಅವರನ್ನು ಕರೆದು ಅವರಿಗೆ ಎರಡೆರಡು ಲಕ್ಷ ರೂಪಾಯಿಗಳನ್ನು ಕೊಟ್ಟು ತಮಗೆ ಯೋಗ್ಯ ಕಂಡ ಉದ್ಯೋಗ ಮಾಡಬೇಕೆಂದು ತಿಳಿಸಿದನು. ಉದ್ಯೋಗದಿಂದ ಯಾರು ಅಧಿಕ ಹಣ ಸಂಪಾದನೆ ಮಾಡುತ್ತಾರೋ ಅವರಿಗೆ ತಾನು ರಾಜ್ಯ ಪಟ್ಟವನ್ನು ಬಿಟ್ಟು ಕೊಡುವುದಾಗಿ ನುಡಿದನು. ಅದಕ್ಕೆ ಅವರೆಲ್ಲರೂ ಒಪ್ಪಿ ಆ ದ್ರವ್ಯವನ್ನು ಪಡೆದು ಹೊರಟರು. ಮೊದಲನೇಯವನು ಅದೇ ರಾಜಧಾನಿಯಲ್ಲಿ ಒಂದು ಅಂಗಡಿ ತೆರೆದನು. ಎರಡನೇಯವನಿಗೆ ಜೂಜು ಮತ್ತು ಮದ್ಯಪಾನದಲ್ಲಿ ಇಷ್ಟ. ಆದುದರಿಂದ ಅವನು ತನ್ನೆಲ್ಲ ಸಂಪತ್ತನ್ನು ಕಳೆದುಕೊಂಡನು. ಮೂರನೇಯವನು ಹಣದಿಂದ ಕೆಲವು ಸೈನಿಕರನ್ನು ಕೂಡಿಸಿ ನೆರೆಹೊರೆಯ ರಾಜರ ಮೇಲೆ ಬಿದ್ದು ಯುದ್ಧದಲ್ಲಿ ಅವರನ್ನೆಲ್ಲ ಸೋಲಿಸಿ ತಾನು ಆ ರಾಜರ ಅಧಿಪತಿಯಾದನು. ನಾಲ್ಕನೆಯವನು ಧರ್ಮ

ಪ್ರವೃತ್ತಿಯವನಾದುದರಿಂದ ಅನ್ನಛತ್ರಗಳನ್ನೂ ಕೆರೆಬಾವಿಗಳನ್ನೂ ಕಡಿಸಿ ಜನರಿಗೆ ಉಪಕಾರ ಮಾಡಿದನು. ಐದನೆಯವನು ಆನೆ, ಕುದುರೆ, ಹಾವು, ಹಕ್ಕಿಗಳನ್ನು ಸಾಕುತ್ತ ಕಾಲಕಳೆಯತೊಡಗಿದನು.

ಹೀಗೆ ಅನೇಕ ವರುಷಗಳು ಕಳೆದ ಮೇಲೆ ಅಜಿತನು ತನ್ನ ಮುಖ್ಯ ಮಂತ್ರಿಯನ್ನು ಕರೆಸಿ, ತನ್ನ ಮಕ್ಕಳಲ್ಲಿ ರಾಜಪಟ್ಟಕ್ಕೆ ಯಾರು ಅರ್ಹರೆಂದು ನುಡಿದನು. ಕುಡುಕನಾದ ಎರಡನೇಯವನನ್ನೂ ಹಾವು ಹಕ್ಕಿಗಳನ್ನು ಸಾಕುತಿದ್ದ ಕನಿಷ್ಠ ಪುತ್ರನನ್ನೂ ತನ್ನ ರಾಜ್ಯದಿಂದ ಹೊರಗಟ್ಟಿದನು. ಆಗ ಆ ಕನಿಷ್ಠ ಪುತ್ರನು ತಾನು ಸಾಕಿದ್ದ ಆನೆ, ಕುದುರೆ, ಹಾವು, ಹಕ್ಕಿ ಮೊದಲಾದವುಗಳೊಂದಿಗೆ ಆ ದೇಶ ತ್ಯಜಿಸಿ ಹೋದನು. ಒಂದು ಅರಣ್ಯಕ್ಕೆ ಹೋಗಿ ಅಲ್ಲಿ ಉಳಿದು ಅವುಗಳನ್ನೆಲ್ಲ ಪೋಷಿಸುತಿದ್ದನು. ಅವನು ಸಾಕಿದ ಪ್ರಾಣಿಗಳಲ್ಲಿ ಒಂದು ದೊಡ್ಡ ಹಾವಿತ್ತು. ಆ ಹಾವು ಪಾತಾಳಲೋಕದ ಆದಿಶೇಷನ ಮಗು. ಅದನ್ನು ಒಬ್ಬ ಗಾರುಡಿಗನು ಹಿಡಿದು ತನ್ನ ಮಂತ್ರ ಶಕ್ತಿಯಿಂದ ಅದನ್ನು ಬಂಧಿಸಿದ್ದನು. ಅದಕ್ಕೆ ನಾನಾ ರೀತಿಯಾಗಿ ಚಿತ್ರ ಹಿಂಸೆ ಕೊಟ್ಟಿದ್ದನು. ರಾಜಪುತ್ರನು ಆ ಗಾರುಡಿಗನಿಂದ ಅದನ್ನು ತೆಗೆದು ಕೊಂಡು ಪ್ರೀತಿಯಿಂದ ಸಾಕಿದ್ದನು. ಅದರಿಂದ ಆ ಹಾವು ಅವನ ಮೇಲೆ ಬಹಳ ಪ್ರಸನ್ನವಾಯಿತು. ಅದು ಒಂದು ದಿನ ಪಾತಾಳಕ್ಕೆ ತೆರಳಿ ಅಲ್ಲಿಂದ ಒಂದು ಅದ್ಭುತವಾದ ಮಣಿಯನ್ನು ತಂದು ಈ ರಾಜಪುತ್ರನಿಗೊಪ್ಪಿಸಿತು. ಅವನ್ನು ಹಿಡಿದು ಯಾವುದಾದರೊಂದು ವಸ್ತುವನ್ನು ಅಪೇಕ್ಷಿಸಿದರೆ ಸರಿ, ಅದು ನೆರವೇರುತಿತ್ತು. ರಾಜಪುತ್ರನು ಅತ್ಯಂತ ಸಂತೋಷಪಟ್ಟು ಆ ಮಣಿ ಯನ್ನು ಸ್ವೀಕರಿಸಿದನು. ಮತ್ತು ಪ್ರೀತಿಯಿಂದ ಆ ಹಾವನ್ನು ಬಿಟ್ಟು ತನ್ನ ಇಷ್ಟ ಬಂದ ಕಡೆಗೆ ತೆರಳಲು ತಿಳಿಸಿದನು.

ಆ ಮೇಲೊಂದು ದಿನ ಅವನು ಸಾಕಿದ್ದ ಹಂಸ ಪಕ್ಷಿಯು ಆ ರಾಜ ಪುತ್ರನ ಬಳಿಗೆ ಬಂದು "ರಾಜಪುತ್ರ, ನಾನು ಅನೇಕ ದೇಶಗಳನ್ನು ಸಂಚರಿ ಸಿದ್ದೇನೆ. ಒಮ್ಮೆ ನಾನು ಹಾರುತಿದ್ದಾಗ ಅತಿ ಮನೋಹರವಾದ ಒಂದು ಉದ್ಯಾನವನವನ್ನು ನೋಡಿದೆ. ಅಲ್ಲಿ ಇಳಿದೆ, ಉದ್ಯಾನದ ಮಧ್ಯೆ ಒಂದು ಪವಿತ್ರವಾದ ಸರೋವರವಿತ್ತು. ನಾನು ಆ ಕೆರೆಯಲ್ಲಿಳಿದು ಸಂತೋಷದಿಂದ ಈಸುತಿದ್ದೆ. ಅಷ್ಟರಲ್ಲಿ ಅತ್ಯಂತ ಲಾವಣ್ಯವತಿಯಾದ ರಾಜಪುತ್ರಿಯೊ

ಬ್ಬಳು ಜಲಕ್ರೀಡೆಗಾಗಿ ಸರೋವರಕ್ಕೆ ಬಂದಳು. ಅವಳ ರೂಪಸೌಂದರ್ಯ ವನ್ನು ನೋಡಿ ನಾನು ಮುಗ್ಧನಾಗಿ ಹೋದೆ. ಅವಳನ್ನೇ ನೋಡುತ್ತಿದ್ದೆ. ಅಷ್ಟರಲ್ಲಿ ಒಬ್ಬ ದೈತ್ಯನು ಅಲ್ಲಿ ಬಂದನು. ದೈತ್ಯನ ಸ್ವರಕೇಳಿದಕೂಡಲೇ ಅವಳು ಹೆದರುತ್ತಿದ್ದಳು, ಆ ಉದ್ಯಾನವನದಲ್ಲಿರುವ ಒಂದು ಅರಮನೆ ಯಲ್ಲಿ ಅವಳು ಕೈದಿಯಾಗಿದ್ದಾಳೆ. ನೀನು ಅವಳ ಬಂಧನ ಬಿಡಿಸಿ ಮದು ವೆಯಾದರೆ ಒಳ್ಳೇದು'' ಎಂದು ನುಡಿಯಿತು.

ಅದನ್ನು ಕೇಳಿ ಈ ರಾಜಪುತ್ರನು ತನ್ನ ಕುದುರೆ ಏರಿ ಪ್ರಯಾಣ ಮಾಡಿದನು. ಆದಿಶೇಷನ ಪುತ್ರನು ಕೊಟ್ಟ ಮಣಿಯನ್ನೂ ಅವನು ಹಿಡಿ ದುಕೊಂಡಿದ್ದನು. ಹಂಸನು ಹೇಳಿದ ದಾರಿಯಲ್ಲೇ ಅವನು ಅನೇಕ ದಿನಗಳ ವರೆಗೆ ತೆರಳಿ, ಅದು ಸೂಚಿಸಿದ ಉದ್ಯಾನವನಕ್ಕೇ ಬಂದನು. ರಾಜಪುತ್ರಿ ಯು ಜಲಕ್ರೀಡೆ ಆಡಲು ಸರೋವರಕ್ಕೆ ಬರುವ ಸಮಯವನ್ನೇ ನಿರೀಕ್ಷಿಸಿ ಮರದಡಿ ಅಡಗಿ ಕುಳಿತನು. ಅವಳು ಬಂದಕೂಡಲೇ ಅವನು ಅವಳ ಬಳಿ ತೆರಳಿದನು. ಅವಳ ಅಂಗಾಂಗ ಸೌಂದರ್ಯವನ್ನು ಕಂಡು ರಾಜಪುತ್ರನು ಅರೆ ಕ್ಷಣ ಸ್ತಂಭೀಭೂತನಾದನು. ಅವಳು ಆಶ್ಚರ್ಯದಿಂದ ಅವನನ್ನು ನೋಡ ತೊಡಗಿದಳು. ಆ ಮೇಲೆ ರಾಜಪುತ್ರನು ಚೇತರಿಸಿಕೊಂಡು ನಯವಿನಯ ದಿಂದ ಅವಳೊಡನೆ ಮಾತನಾಡತೊಡಗಿದನು. ಅವಳು ಗಾಬರಿಯಾಗಿ "ರಾಜಪುತ್ರ, ನೀನು ಬೇಗನೆ ಇಲ್ಲಿಂದ ಹೊರಟು ಹೋಗು; ದೈತ್ಯನಿಗೆ ಗೊತ್ತಾದರೆ ನಿನ್ನ ಪ್ರಾಣಕ್ಕೆ ಅಪಾಯವಿದೆ'' ಎಂದಳು. ಆದರೆ ಅವನು ಕೇಳಲಿಲ್ಲ. "ರಾಜಪುತ್ರಿಯೇ, ನನಗೆ ದೈತ್ಯನ ಬೆದರಿಕೆ ಇಲ್ಲ" ಎಂದು ಹೇಳಿ ತನ್ನ ಶಕ್ತಿಯ ರಹಸ್ಯವನ್ನು ತಿಳಿಸಿದನು. ರಾಜಪುತ್ರಿ ಪರಮ ಸಂತೋಷಪಟ್ಟು ಉದ್ಯಾನವನಕ್ಕೆ ಅವನನ್ನು ಕರೆದುಕೊಂಡು ಹೋದಳು. ಅಲ್ಲೊಂದು ಮರದ ತಂಪಿನಲ್ಲಿಟ್ಟ ಸುಖಾಸನಗಳಲ್ಲಿ ಅವರೀರ್ವರೂ ಕುಳಿತು ಕೊಂಡು ಪ್ರೇಮಾಲಾಪ ಮಾಡತೊಡಗಿದರು.

ಜಲಕ್ರೀಡೆಗೆ ತೆರಳಿದ ರಾಜಪುತ್ರಿಯು ಬಾರದೇ ಇದ್ದುದನ್ನು ಕಂಡು ಆ ದೈತ್ಯನು ಸರೋವಕ್ಕೆ ಚಾರರನ್ನು ಕಳಿಸಿಕೊಟ್ಟನು. ಅಲ್ಲಿ ರಾಜಪುತ್ರಿ ಇಲ್ಲದಿದ್ದುದನ್ನು ಕಂಡು ಅವರು ಗಾಬರಿಯಾದರು. ಉದ್ಯಾನವನದಲ್ಲೆಲ್ಲ ಹುಡುಕಿದರು. ಆಗ ಸುಂದರನಾದ ತರುಣನೊಡನೆ ಅವಳು ಮಧುರ

ಸಂಭಾಷಣೆ ಮಾಡುತ್ತಿರುವದನ್ನು ಕಂಡರು. ದೈತ್ಯನ ವರೆಗೂ ಈ ಸುದ್ದಿ ಮುಟ್ಟಿತು. ಕೂಡಲೇ ಅವನು ಕೋಪೋದ್ರೇಕದಿಂದ ಗರ್ಜಿಸುತ್ತಾ ಬಂದನು. ರಾಜಪುತ್ರನು ತನ್ನಲ್ಲಿದ್ದ ಮಣಿಯನ್ನು ಪ್ರಾರ್ಥಿಸಿ, ಮತ್ತೊಬ್ಬ ಭಯಾನಕ ದೈತ್ಯನನ್ನು ನಿರ್ಮಿಸಿದನು. ಅವನು ಆ ಉದ್ಯಾನದ ಯಜಮಾನನಾದ ದೈತ್ಯನನ್ನು ಕೊಂದನು. ರಾಜಪುತ್ರನು ಮತ್ತೆ ಅವನನ್ನು ತನ್ನ ಮಣಿಯ ಮಂತ್ರದಿಂದ ಮಾಯಗೊಳಿಸಿದನು.

ರಾಜಪುತ್ರಿಯು ಅವನನ್ನು ಆ ಅರಮನೆಗೆ ಕರೆದುಕೊಂಡು ಹೋದಳು. ಇಬ್ಬರೂ ಯೌವನಕ್ಕೆ ಕಾಲಿಟ್ಟವರು. ಸ್ಫುರದ್ರೂಪಿಗಳು. ಮದನ ಭಾಧೆಗೊಳಗಾದವರು. ಆದುದರಿಂದ ಅನೇಕ ದಿನಗಳ ವರೆಗೆ ಪ್ರಿಯ ಸಂಭಾಷಣೆಯಲ್ಲೂ, ಜಲಕ್ರೀಡೆ, ರತಿಕ್ರೀಡೆಗಳಲ್ಲೂ ಕಾಲ ಕಳೆದರು. ಆಗ ಆ ರಾಜಪುತ್ರಿಯು ತನ್ನೆಲ್ಲ ಕಥೆಯನ್ನು ಹೇಳಿದಳು. ಅವಳ ಹೆಸರು ಕುಸುಮಾವತಿ ಎಂಬು. ವಿದರ್ಭದ ನೆರೆಹೊರೆಯಲ್ಲಿರುವ ಒಂದು ತುಂಡರಸನ ಪುತ್ರಿ. ಒಮ್ಮೆ ಶತ್ರುಗಳು ಆ ರಾಜ್ಯಕ್ಕೆ ಮುತ್ತಿಗೆ ಹಾಕಿದರು. ವೈರಿಗಳು ಬಲಿಷ್ಠರಾಗಿದ್ದುದರಿಂದ ಕುಸುಮಾವತಿಯ ತಂದೆಗೆ ಜಯದ ಚಿಹ್ನೆ ಇರಲಿಲ್ಲ. ಆದುದರಿಂದ ಅವನು ಪತ್ನಿ ಪುತ್ರಿಯರು ಹಾಗೂ ಕೆಲವು ವಿಶ್ವಾಸಿಕ ಅಂಗರಕ್ಷಕರೊಡನೆ ಗುಪ್ತ ಮಾರ್ಗದಿಂದ ಕೋಟೆಯಿಂದ ಹೊರಬಿದ್ದನು. ಸಂಜೆಯ ಹೊತ್ತಿಗೆ ಅವರೊಂದು ಅರಣ್ಯ ಸೇರಿದರು. ಆ ಅರಣ್ಯದಲ್ಲಿ ಈ ದೈತ್ಯನು ತನ್ನ ಸಂಗಡಿಗರೊಂದಿಗೆ ವಾಸವಾಗಿದ್ದನು. ಇವನು ರಾಜಪರಿವಾರದ ಮೇಲೆ ಬಿದ್ದನು. ಅನೇಕರು ಪ್ರಾಣಕಳೆದುಕೊಂಡರು. ಕೆಲವರು ಓಡಿಹೋದರು. ಈ ರಾಜಪುತ್ರಿಯು ಮಾತ್ರ ಅವನ ಕೈಗೆ ಸಿಕ್ಕಿ ಬಿದ್ದಳು. ದೈತ್ಯನು ಅವಳನ್ನು ಮಾತ್ರ ಕರೆದುಕೊಂಡು ಬಂದು ವನದಲ್ಲಿದ್ದ ತನ್ನ ಅರಮನೆಯಲ್ಲಿ ಇಟ್ಟನು. ತನ್ನನ್ನು ಕೂಡಿ ಸುಖಪಡಿಸಬೇಕೆಂದು ಮನವೊಲಿಸತೊಡಗಿದನು. ಆದರೆ ಒಂದಲ್ಲದಿದ್ದರೆ ಇನ್ನೊಂದು ನೆವದಿಂದ ಕುಸುಮಾವತಿಯು ಅವನೊಡನೆ ರತ್ಯಾಸಕ್ತಳಾಗದೆ ವ್ಯಸನದಿಂದ ಕಾಲ ಕಳೆಯುತಿದ್ದಳು. ಈಗ ಆ ದೈತ್ಯನನ್ನು ಸಂಹರಿಸುವದಕ್ಕಾಗಿ ಅವಳು ರಾಜಪುತ್ರನಿಗೆ ತನ್ನ ಕೃತಜ್ಞತೆಯನ್ನು ಅರ್ಪಿಸಿದಳು. ಇಬ್ಬರೂ ಬಹಳ ಸುಖದಿಂದ ಇರತೊಡಗಿದರು.

ಹೀಗಿರಲು ಒಂದು ದಿನ ಕುಸುಮಾವತಿಯು ತನ್ನ ದಾಸಿಯೊಂದಿಗೆ

ಸ್ನಾನಕ್ಕೆ ನದಿಗೆ ಹೋದಳು. ಅವಳು ಸ್ನಾನ ಮಾಡುತಿದ್ದಾಗ ಅವಳ ತಲೆ ಯಲ್ಲಿದ್ದ ಚಿನ್ನದ ಆಭರಣವು ನದಿಗೆ ಬಿದ್ದಿತು. ಎಷ್ಟು ಹುಡುಕಿದರೂ ಅದು ಸಿಗಲಿಲ್ಲ ನದಿಯ ನೀರು ಅದನ್ನು ಕೊಚ್ಚಿಕೊಂಡು ಹೋಯಿತು. ಅನೇಕ ದಿನಗಳ ತರುವಾಯ ಒಬ್ಬ ಬೆಸ್ತನು ಮೀನಿನ ಬಲೆ ಬೀಸಿದಾಗ ಆ ಚಿನ್ನಾಭರಣವು ಅವನ ಬಲೆಯೊಳಗೆ ಸಿಕ್ಕಿತು. ಅವನು ಅದನ್ನು ತೆಗೆದು ಕೊಂಡು ಆ ಊರಿನ ಮಂಡರಸನಿಗೆ ಕೊಟ್ಟನು. ಆ ಚಿನ್ನದ ಆಭರಣದಲ್ಲಿ ಕುಸುಮಾವತಿಯ ಚಿತ್ರವನ್ನೂ ಅವಳ ಹೆಸರನ್ನೂ ಕೆತ್ತಿದ್ದರು. ಆ ಸುಂದ ರಾಂಗಿಯನ್ನು ಕಂಡ ಕೂಡಲೇ ಆ ಮಂಡರಸನು ಮೋಹಾಂಧನಾದನು. ಮತ್ತು ಆ ಹೆಸರಿನ ರಮಣಿಯನ್ನು ತಾನು ವರಿಸಬೇಕೆಂದು ನಿರ್ಧರಿಸಿದನು. ಚಿನ್ನಾಭರಣದಲ್ಲಿರುವ ಚಿತ್ರವನ್ನು ತೋರಿಸಿ ಅವಳು ಯಾವ ದೇಶದ ರಾಜಪುತ್ರಿಯೆಂದು ಎಲ್ಲ ಸಭಾಸದರನ್ನೂ ಕೇಳಿದನು. ಆದರೆ ಯಾರಿಗೂ ತಿಳಿದಿರಲಿಲ್ಲ. ಕೊನೆಗೆ ಅವಳ ಚಿತ್ರವನ್ನು ನಗರದ ಮುಖ್ಯ ಸ್ಥಳಗಳಲ್ಲೆಲ್ಲ ಬರೆಸಿ, ಅವಳನ್ನು ತೋರಿಸಿದವರಿಗೆ ಅಮೂಲ್ಯ ಉಡುಗೊರೆ ಕೊಡುವು ದಾಗಿ ತಿಳಿಸಿದನು. ಅದನ್ನು ಕೇಳಿದ ಮುದುಕಿಯೊಬ್ಬಳು ಅರಮನೆಗೆ ಬಂದು ತಾನು ಅವಳಿದ್ದ ಸ್ಥಳವನ್ನು ತೋರಿಸುವುದಾಗಿ ನುಡಿದಳು. ಈ ಮುದುಕಿ ಮೊದಲು ಕುಸುಮಾವತಿಯನ್ನು ಬಲಾತ್ಕಾರದಿಂದ ತಂದಿರಿಸಿದ್ದ ದೈತ್ಯನಲ್ಲಿ ಕೆಲಸಕ್ಕಿದ್ದಳು. ಅವನ ಪೀಡೆಯನ್ನು ಸಹಿಸಲಾರದೆ ಮತ್ತೊಂದು ರಾಜ್ಯಕ್ಕೆ ತೆರಳಿದ್ದಳು. ಆದುದರಿಂದ ಅವಳು ಒಂದು ನೌಕೆ ಯೊಳಗೆ ಕುಳಿತು ನದಿ ಮೂಲಕವಾಗಿಯೇ ಕುಸುಮಾವತಿಯ ಉದ್ಯಾನದ ಬಳಿ ಬಂದಳು. ನೌಕೆಯನ್ನು ಒಂದೆಡೆ ಕಟ್ಟಿ ತಾನು ಅನಾಥಳೆಂದು ನಟಿ ಸುತ್ತ, ಅಳುತ್ತ ಕುಸುಮಾವತಿಯ ಅರಮನೆಯ ದಾರಿ ಹಿಡಿದಳು. ಸೊಸೆ ತನ್ನನ್ನು ಮನೆಯಿಂದ ಹೊರಗೆ ನೂಕಿಸಿದಳೆಂದೂ ಹೊಟ್ಟೆಗಿಲ್ಲವೆಂದೂ ಹೇಳಿ ಆ ಮುದುಕಿ ಅಳತೊಡಗಿದ್ದುದರಿಂದ ಕುಸುಮಾವತಿಯು ಕರುಣೆ ದೋರಿ ಅವಳಿಗೆ ಆಶ್ರಯ ಕೊಟ್ಟಳು.

ಮುದುಕಿಯು ಬಹಳ ನಯವಿನಯದಿಂದಲೇ ನಡೆದುಕೊಂಡಳು. ರಾಜಪುತ್ರಿಗೆ ಹೂಗಳನ್ನು ಪೋಣಿಸಿ ಕೊಡುತಿದ್ದಳು. ತಲೆ ಬಾಚಿ ಹೆರಳು ಹಾಕುತಿದ್ದಳು. ಎಣ್ಣೆ ಹಚ್ಚಿ ಸ್ನಾನ ಮಾಡಿಸುತಿದ್ದಳು. ಬೇಸರವಾದಾಗ

ರಮ್ಯ ಕಥೆಗಳನ್ನು ಹೇಳುತಿದ್ದಳು. ಇದರಿಂದ ಕುಸುಮಾವತಿಗೂ ಅವಳ ಮೇಲೆ ವಿಶ್ವಾಸ ಹುಟ್ಟಿತು. ಅದನ್ನರಿತ ಮುದುಕಿಯು ಒಂದು ದಿನ ರಾಜಪುತ್ರಿಯೇ, ಈ ಅರಣ್ಯದಲ್ಲಿ ಬಹಳ ಜನರಿಲ್ಲ. ಆದರೂ ನಿನ್ನ ಪತಿ ಇಷ್ಟು ಧನಧಾನ್ಯಗಳನ್ನು ತಂದು ಹಾಕಿರುವನಲ್ಲ! ಇದೇನು ಮಂತ್ರ ದಿಂದಲೋ ಮಾಯೆಯಿಂದಲೋ! ಅಗಾಧವಮ್ಮಾ!''. ಆಗ ಆ ರಾಜ ಪುತ್ರಿಯು ತನ್ನ ಪತಿಯಲ್ಲಿದ್ದ ಮಣಿಯ ಮಹತ್ವವನ್ನು ಹೇಳಿದಳು. ಅದನ್ನು ಹಿಡಿದರೆ ಅಪೇಕ್ಷಿಸಿದ ವಸ್ತುಗಳೆಲ್ಲ ದೊರೆಯುವವೆಂದು ಹೇಳಿದಳು. ಸೈನ್ಯ, ಸಂಪತ್ತು, ಆನೆ, ಕುದುರೆಗಳನ್ನು ಬಯಸಿದರೂ ಅವು ಸಿದ್ಧವಾಗು ವವೆಂದು ನುಡಿದಳು. ಮುದುಕಿಯು ತನ್ನ ಆಶ್ಚರ್ಯವನ್ನು ವ್ಯಕ್ತಮಾಡಿ ರಾಜಪುತ್ರಿಯ ಅದೃಷ್ಟವನ್ನು ಹೊಗಳುತ್ತ ಅವಳಿಗೆ ತನ್ನ ದುರುದ್ದೇಶದ ಯಾವ ಸಂದೇಹವೂ ಉಂಟಾಗದಂತೆ ಹರುಷದಿಂದಲೇ ಮಾತನಾಡಿದಳು.

ಹೀಗಿರುತ್ತಿರಲು ಒಂದು ದಿನ ಮುದುಕಿಯು ರಾಜಪುತ್ರಿಯನ್ನು ನೌಕಾವಿಹಾರಕ್ಕೆ ಕರೆದಳು. "ನದಿಯಲ್ಲಿ ಒಂದು ನೌಕೆಯಿದೆ. ಅದರ ಕಪ್ತಾನನನ್ನು ನಾನು ಬಲ್ಲೆ. ಸ್ವಲ್ಪ ವಿಹರಿಸಿ ಬರೋಣ" ಎಂದು ನುಡಿದಳು. ರಾಜಪುತ್ರಿಯು ನಂಬಿ ಅವಳೊಂದಿಗೆ ಹೊರಟಳು. ನದಿಯ ದಂಡೆಗೆ ತೆರ ಳಿದ ಕೂಡಲೇ ಮುದುಕಿಯು ಏನೋ ಒಂದು ವಸ್ತುವನ್ನು ಬಿಟ್ಟು ಬಂದಿ ರುವೆನೆಂದು ಹೇಳಿ ಪುನಃ ಒಬ್ಬಳೇ ಅರಮನೆಗೆ ಹಿಂತಿರುಗಿದಳು. ರಾಜ ಪುತ್ರನು ಆಗ ಮಂಚದ ಮೇಲೆ ನಿದ್ರಾಸಕ್ತನಾಗಿದ್ದ. ಅವನ ಮಂಚದ ಬಳಿ ಇದ್ದ ಕಠಾರಿಯನ್ನು ಮುದುಕಿ ಹಿರಿದು ರಾಜಪುತ್ರನ ಕೊರಳಲ್ಲಿದ್ದ ಮಣಿ ಸರವನ್ನು ಮೆಲ್ಲಗೆ ಕತ್ತರಿಸಿ ತೆಗೆದುಕೊಂಡು ಬಂದಳು. ಆ ಮೇಲೆ ರಾಜ ಪುತ್ರಿಯನ್ನೂ ಅವಳ ದಾಸಿಯನ್ನೂ ಕರೆದುಕೊಂಡು ನೌಕೆಯನ್ನೇರಿದಳು. ಅವಳ ಕಣ್ಸನ್ನೆ ಮೇರೆಗೆ ಕಪ್ತಾನನು ನೌಕೆಯನ್ನು ವೇಗವಾಗಿ ಬಿಟ್ಟನು. ರಾಜಪುತ್ರಿಗೆ ಸಂದೇಹ ಬರದಂತೆ ಮುದುಕಿಯು ನಾನಾ ದೃಶ್ಯಗಳನ್ನು ತೋರಿಸುತ್ತ ಅವಳನ್ನು ಸಂತೋಷಪಡಿಸುತಿದ್ದಳು. ಬಹಳ ಹೊತ್ತಾದರೂ ನೌಕೆಯು ಮುಂದೆ ಮುಂದೆಯೇ ಹೋಗುತಿತ್ತು. ಅದು ತಿಳಿದ ಕೂಡಲೇ ರಾಜಪುತ್ರಿಯು ನೌಕೆಯನ್ನು ಹಿಂದಿರುಗಿಸಲು ಹೇಳಿದಳು. ಆದರೆ ಅವಳ ಮಾತನ್ನು ಯಾರೂ ಕೇಳಲಿಲ್ಲ. ನೌಕೆಯು ಬಹು ದೂರ ಹೋಯಿತು.

ಮುದುಕಿಯ ಕಪಟ ಗೊತ್ತಾದ ಮೇಲೆ ಕುಸುಮಾವತಿಯು ಮೂರ್ಛೆ ಹೋದಳು.

ಕುಸುಮಾವತಿಗೆ ಪ್ರಜ್ಞೆ ಬಂದಾಗ ಅವಳು ಮುದುಕಿ ತಂದೊಪ್ಪಿಸಿದ ರಾಜನ ಅಂತಃಪುರದಲ್ಲಿದ್ದಳು. ಅವಳು ಎಚ್ಚತ್ತ ಕೂಡಲೇ ಆ ರಾಜನು ದಾಸಿಯರನ್ನೆಲ್ಲ ಹೊರಗೆ ಕಳಿಸಿ, ಅವಳ ಮಂಚದ ಸಮೀಪ ಕುಳಿತು, ತಾನೇ ಮೃದುಮಧುರ ಮಾತುಕತೆಗಳನ್ನಾಡತೊಡಗಿದನು. ಆ ಮೇಲೆ ದಿನಂಪ್ರತಿ ಬಂದು ತನ್ನನ್ನು ವರಿಸಬೇಕೆಂದು ಕೇಳತೊಡಗಿದನು ಕುಸುಮಾವತಿಯು ಯಾವ ಉತ್ತರವನ್ನೂ ಕೊಡಲಿಲ್ಲ. ಅದನ್ನು ಕಂಡು ಅವನು ಒಂದು ದಿನ ಬಲಾತ್ಕಾರದಿಂದ ಅವಳ ಮೈಮೇಲೆ ಕೈ ಹಾಕಿದನು. ಉಪಾಯದಿಂದ ಈ ಗಂಡಾಂತರವನ್ನು ಪರಿಹರಿಸಿಕೊಳ್ಳಬೇಕೆಂದು ಕುಸುಮಾವತಿಯು ನಾಲ್ಕುದಿನಗಳ ಮೇಲೆ ಅವನ ಮನೋಭಿಲಾಷೆಯನ್ನು ಈಡೇರಿಸುವುದಾಗಿ ನುಡಿದು ಕಳಿಸಿಕೊಟ್ಟಳು.

ಇತ್ತ ರಾಜಪುತ್ರನು ನಿದ್ದೆಯಿಂದ ಎಚ್ಚತ್ತಾಗ ಕೊರಳಲ್ಲಿದ್ದ ಹಾರವೂ ಇರಲಿಲ್ಲ. ಕುಸುಮಾವತಿಯೂ ಇರಲಿಲ್ಲ. ನೌಕಾವಿಹಾರಕ್ಕೆಂದು ಮುದುಕಿ ಕರೆದುಕೊಂಡು ಹೋದಳು. ಆದರೆ ಇಷ್ಟರವರೆಗೂ ಬಂದಿಲ್ಲ ಎಂದು ಇನ್ನೊಬ್ಬಳು ದಾಸಿ ನುಡಿದಳು. ಆಗ ಇದರಲ್ಲೇನೋ ಮೋಸವಿದೆಯೆಂದು ಆ ರಾಜಪುತ್ರನು ಅರಿತು ತಾನು ಸಾಕಿದ್ದ ಗಿಳಿಯನ್ನು ಬಿಟ್ಟು ಕುಸುಮಾವತಿಯನ್ನು ಹುಡುಕಬೇಕೆಂದು ನುಡಿದನು. ಆ ಗಿಳಿಯು ಹಾರುತ್ತ ಹಾರುತ್ತ ಕುಸುಮಾವತಿಯನ್ನು ಇಟ್ಟಿದ್ದ ಅರಮನೆಗೆ ಬಂದಿತು. ಕುಸುಮಾವತಿಯನ್ನು ಕಂಡಕೂಡಲೇ ಗುರುತು ಹಿಡಿದು ಕರೆಯಿತು. ಆಗ ಅವಳಿಗೂ ಆ ಗಿಳಿಯ ಗುರುತು ಹತ್ತಿತು. ಅವಳು ತನ್ನ ಕಣ್ಣಿನಲ್ಲಿದ್ದ ಕಾಡಿಗೆಯನ್ನು ಉಪಯೋಗಿಸಿ ಒಂದು ಪತ್ರವನ್ನು ಬರೆದು ಆ ಗಿಳಿಯ ಕಾಲಿಗೆ ಕಟ್ಟಿಬಿಟ್ಟಳು. ಅದು ಮತ್ತೆ ರಾಜಪುತ್ರನಿದ್ದಲ್ಲಿ ಬಂದಿತು. ಕೂಡಲೇ ಆ ರಾಜಪುತ್ರನು ತನ್ನ ಕುದುರೆ, ಆನೆ, ಹಾವು, ಗಿಳಿ ಮೊದಲಾದ ಪ್ರಾಣಿಗಳನ್ನೆಲ್ಲ ಕಟ್ಟಿಕೊಂಡು ಕುಸುಮಾವತಿ ಇದ್ದ ರಾಜ್ಯಕ್ಕೆ ಹೊರಟನು. ಎರಡು ದಿನಗಳ ದಾರಿ ನಡೆದು ಅವರು ನಗರದ ಹೊರಗೆ ಬೀಡುಬಿಟ್ಟರು. ರಾತ್ರಿ ಹಾವು ತೆರಳಿ ಆ ಮುದುಕಿಯ ಮನೆ ಸೇರಿ ಅವಳನ್ನು ಕಚ್ಚಿತು. ವಿಷವೇರಿ ಅವಳು

ಮರಣ ಹೊಂದಿದ ಕೂಡಲೇ ಇಲಿಯು ಅವಳ ಬೆರಳನ್ನು ಕತ್ತರಿಸಿತು. ಆ ಮಣಿಯನ್ನು ಹಾವು ಬಾಯಲ್ಲಿ ಹಿಡಿದುಕೊಂಡು ಬಂದು ರಾಜಪುತ್ರ ನಿಗೊಪ್ಪಿಸಿತು. ಆ ಮಣಿಯನ್ನು ಪೂಜಿಸಿ ತನಗೆ ಅಸಂಖ್ಯ ಕುದುರೆ ಸವಾರರೂ ಸೈನಿಕರೂ ಬೇಕೆಂದು ರಾಜಪುತ್ರನು ಅಪೇಕ್ಷಿಸಿದನು. ನಿಮಿಷಾರ್ಧ ದಲ್ಲಿ ಆ ಬಯಲಿನಲ್ಲೆಲ್ಲ ಸೈನ್ಯ ತುಂಬಿತು. ಬೆಳಗಾಗುವುದರೊಳಗೆ ಆ ಸೇನೆ ಆ ನಗರಕ್ಕೆ ಮುತ್ತಿಗೆ ಹಾಕಿತು. ಶರಣಾಗತನಾಗಿ ಕುಸುಮಾವತಿಯನ್ನು ಒಪ್ಪಿಸಿದರೆ ಒಳ್ಳೇಯದಾಯಿತು. ಇಲ್ಲದಿದ್ದರೆ ಯುದ್ಧಕ್ಕೆ ಸಿದ್ಧನಾಗಬೇಕೆಂದು ಪತ್ರ ಬರೆದು ದೂತನ ಮೂಲಕ ಕಳಿಸಿದನು. ಆ ಅರಸನೂ ಅಭಿಮಾನಿ. ಆದುದರಿಂದ ಯುದ್ಧಕ್ಕೆ ಸರ್ವ ಸನ್ನಾಹ ಮಾಡಿದನು. ಆದರೆ ಯುದ್ಧದಲ್ಲಿ ಪ್ರಾಣ ಕಳೆದುಕೊಂಡನು. ರಾಜಪುತ್ರನು ಅವನ ಮಗನಿಗೆ ಪಟ್ಟಕಟ್ಟಿ ಕಪ್ಪಕಾಣಿಕೆಗಳೊಂದಿಗೆ ಕುಸುಮಾವತಿಯನ್ನು ಕರೆದುಕೊಂಡು ಪುನಃ ತನ್ನ ಅರಮನೆಗೆ ಸೇರಿದನು.

ಆ ಮೇಲೆ ಈ ರಾಜಪುತ್ರನು ಅದೇ ಸೇನೆಯೊಂದಿಗೆ ತನ್ನ ತಂದೆಯು ಆಳುತಿದ್ದ ವಿದರ್ಭ ದೇಶದ ಮೇಲೆ ದಂಡೆತ್ತಿ ಹೋದನು. ಅಪರಿಮಿತವಾದ ಶತ್ರು ಸೈನ್ಯವನ್ನು ಕಂಡು ವೃದ್ಧನಾದ ಅಜಿತನು ಯುದ್ಧಮಾಡದೆ ಶರಣಾಗತನಾದನು. ದಂಡೆತ್ತಿ ಬಂದ ರಾಜನು ತನ್ನ ಕನಿಷ್ಠ ಪುತ್ರನೆಂದು ತಿಳಿದ ಮೇಲಂತೂ ಅಜಿತನ ಮೋರೆ ಸಣ್ಣಗಾಯಿತು. ಆದರೆ ಮಗನು ತಂದೆಗೆ ನಮಸ್ಕರಿಸಿ ಕ್ಷಮೆ ಕೇಳಿದನು. ತಂದೆಯೂ ಮಗನನ್ನು ಆಶೀರ್ವದಿಸಿ ತನ್ನ ಅಪರಾಧವನ್ನು ಮನಸ್ಸಿನಲ್ಲಿಟ್ಟುಕೊಳ್ಳಕೂಡದೆಂದು ಸಂತೈಸಿದನು. ಅಜಿತನು ಈ ಮಗನಿಗೇ ಪಟ್ಟವನ್ನು ಕೊಡಲು ಬಂದರೂ ಅವನು ಒಪ್ಪದೇ ತಂದೆಯಿಂದ ಬೀಳ್ಕೊಂಡು ಕುಸುಮಾವತಿಯೊಂದಿಗೆ ಪುನಃ ಉದ್ಯಾನವನದಲ್ಲಿದ್ದ ತನ್ನರಮನೆಗೆ ಬಂದು ಅವಳೊಂದಿಗೆ ಸುಖವಾಗಿ ಕಾಲಕಳೆಯತೊಡಗಿದನು.

ಅಜಿತರಾಜನ ಕನಿಷ್ಠ ಪುತ್ರನ ಕತೆ ಕೇಳಿದ ಕಲಾವತಿಯು ಸಂತೋಷಪಟ್ಟು ಉಳಿದವರ ಕಥೆಗಳನ್ನು ಕೇಳಲು ಇಷ್ಟಪಟ್ಟಳು. ಆದುದರಿಂದ ಪ್ರತಾಪಸೇನನು ಹೇಳತೊಡಗಿದನು ಎಂದು ಮೋಹಿನಿಗೆ ಮೋಹನದಾಸನು ನುಡಿದನು.

# ೪೧. ಜಯಸೇನನ ಕಥೆ

ಅಜಿತರಾಜನ ಜ್ಯೇಷ್ಠಪುತ್ರನಾದ ಜಯಸೇನನು ನಗರದಲ್ಲೇ ಮೊದಲು ಅಂಗಡಿ ತೆರೆದು ವ್ಯಾಪಾರೋದ್ಯಮಗಳನ್ನು ಆರಂಭಿಸಿದ್ದನಷ್ಟೆ. ಆದರೆ ವಿದೇಶಕ್ಕೆ ತೆರಳಿದರೆ ಅಪರಿಮಿತ ಲಾಭವು ಬರುವುದೆಂದು ಮನ ಗಂಡು ಹೇರಳ ವಸ್ತುಗಳನ್ನು ಕೊಂಡುಕೊಂಡನು. ಅದನ್ನು ಸಮುದ್ರ ಮಾರ್ಗವಾಗಿ ಸಾಗಿಸಲು ಒಂದು ಹಡಗವನ್ನು ಗೊತ್ತುಪಡಿಸಿದನು. ತಾನು ಕುದುರೆಯ ಮೇಲೆ ನೆಲ ಮಾರ್ಗವಾಗಿ ಬರುತ್ತೇನೆಂದು ತಿಳಿಸಿದನು.

ಆದರಂತೆ ಜಯಸೇನನು ಕುದುರೆಯೇರಿ ಪ್ರಯಾಣ ಮಾಡಿದನು. ಅದೇ ದಿನ ಸಂಜೆ ಅವನು ಒಂದು ಊರು ಮುಟ್ಟಿದನು. ಆದರೆ ಕತ್ತಲಾ ಗುತ್ತ ಬಂದುದರಿಂದ ಊರಿನ ಮಹಾದ್ವಾರವನ್ನು ಸಿಪಾಯಿಗಳು ಮುಚ್ಚಿ ದ್ದರು. ಆದುದರಿಂದ ಅವನು ಆ ಊರಿನ ಕೋಟೆಯ ಕಂದಕದ ದಂಡೆ ಯಲ್ಲೇ ತಂಗಿದನು. ಕುದುರೆಗೆ ಆ ಕಂದಕದ ನೀರು ಕುಡಿಸಿ ಅದನ್ನು ಒಂದು ಗಿಡಕ್ಕೆ ಕಟ್ಟಿ ತಾನು ಮಲಗಿಕೊಂಡನು. ಆದರೆ ಮಧ್ಯ ರಾತ್ರಿ ಯಲ್ಲಿ ಕಂದಕದಲ್ಲಿ ಏನೋ ಶಬ್ದವಾದಂತೆ ಕೇಳಿಸಿತು. ಅವನು ನೋಡಿ ದಾಗ ಕೋಟೆಯ ಮೇಲ್ಗಡೆಯಿಂದ ಯಾರೋ ಒಂದು ಪೆಟ್ಟಿಗೆಯನ್ನು ಹಗ್ಗದ ಮೂಲಕ ಕಂದಕಕ್ಕೆ ಇಳಿಸುತಿದ್ದರು. ಕಳ್ಳರು ಕಳ್ಳರು ಚಿನ್ನಾ ಭರಣಗಳನ್ನು ಇಳಿಸುತ್ತಿರಬೇಕೆಂದು ನಂಬಿ ಜಯಸೇನನು ಕಂದಕದಲ್ಲಿ ಇಳಿದು ಈಸುತ್ತ ಅದನ್ನು ಮೆಲ್ಲಗೆ ಈಚೆ ದಂಡೆಗೆ ತಂದು ಹಗ್ಗ ಬಿಚ್ಚಿ ಬಿಟ್ಟನು. ಆ ಮೇಲೆ ಅದರೊಳಗೆ ಏನಿದೆಯೋ ಏನೋ ಎಂದು ನೋಡಲು ಅವನ ಕುತೂಹಲ ಹೆಚ್ಚಿತು. ಆ ಪೆಟ್ಟಿಗೆಯ ಬೀಗವನ್ನು ಒಡೆದು, ಬಾಗಿಲು ತೆರೆದು ನೋಡಲು ಸೀರೆಯಲ್ಲೆಲ್ಲ ರಕುತ ತೊಯ್ದಿದ್ದ ಅತ್ಯಂತ ಸುಂದರಿಯಾದ ಸ್ತ್ರೀಯೊಬ್ಬಳು ಇದ್ದಳು. ಅವಳಿಗೆ ಪ್ರಜ್ಞೆ ಇರಲಿಲ್ಲ. ಜಯಸೇನನು ಅವಳನ್ನು ಪೆಟ್ಟಿಗೆಯಿಂದ ಹೊರಗೆ ಎತ್ತಿಟ್ಟು, ಕಂದಕದಿಂದ ಬೊಗಸೆಗೈಗಳಲ್ಲಿ ನೀರು ತಂದು ಅವಳ ಕಣ್ಣು ಮೋರೆಗಳನ್ನು ತೊಳೆದನು. ಅಲ್ಲಲ್ಲಿ ಅವಳನ್ನು ತಿವಿದ ಗಾಯಗಳು ಕೈಮೈಗಳಲ್ಲಿದ್ದುವು. ಮತ್ತು ಅವು ಗಳಿಂದ ರಕುತ ಧಾರಾಕಾರವಾಗಿ ಇಳಿಯುತಿತ್ತು. ಜಯಸೇನನು ಅವಳ

ಶುಶ್ರೂಷೆ ಮಾಡಿದುದರಿಂದ ಅವಳು ಎಚ್ಚತ್ತಳು. ಅವನು ಅವಳ ಭಯ ವನ್ನು ಪರಿಹರಿಸಿದನು.

ಮುಂಜಾನೆ ಅವನು ಅವಳನ್ನು ಕರೆದುಕೊಂಡು ಆ ನಗರಕ್ಕೆ ಪ್ರವೇಶಿಸಿದನು. ಅವಳನ್ನು ಒಬ್ಬ ವೈದ್ಯರಲ್ಲಿ ಕೆರೆದುಕೊಂಡು ಹೋದನು. ಇಬ್ಬರೇ ಬರುತಿದ್ದಾಗ ಕಳ್ಳರು ಚಿನ್ನಾಭರಣಗಳ ಆಸೆಯಿಂದ ಏರಿಬಂದರು· ನಾವು ಅವರನ್ನು ಪ್ರತಿಭಟಿಸಲು ಶಸ್ತ್ರಗಳಿಂದ ಇರಿದರು. ಈ ನನ್ನ ಸ್ತ್ರೀ ಬಹಳ ಬಳಲಿರುವಳು. ಅವಳ ಗಾಯಗಳನ್ನು ಗುಣಪಡಿಸಿರಿ. ಹಡಗದಲ್ಲಿ ನನ್ನ ಸರಕುಗಳು ಬೇಗನೇ ಬರುತ್ತವೆ. ಬಂದೊಡನೆಯೇ ಅವನ್ನು ಮಾರಾಟ ಮಾಡಿ ಅಪಾರ ಹಣ ಗಣಿಸುವವನಿದ್ದೇನೆ. ಆಗ ನಿಮ್ಮ ಋಣ ತೀರಿಸುತ್ತೇನೆ ಎಂದು ವೈದ್ಯನಿಗೆ ಜಯಸೇನನು ಅರಿಕೆ ಮಾಡಿಕೊಂಡನು. ವೈದ್ಯನು ಒಪ್ಪಿ ನಲ್ವತ್ತು ದಿನಗಳ ವರೆಗೆ ಅವಳಿಗೆ ಯೋಗ್ಯ ಅನ್ನಪಾನ ಔಷಧಿಗಳ ಚಿಕಿತ್ಸೆ ನಡೆಸಿದನು. ಅವಳು ಅದರಿಂದ ತುಂಬಾ ಚೇತರಿಸಿಕೊಂಡಳು. ಜಯಸೇನನು ಅದೇ ನಗರದಲ್ಲಿ ಒಂದು ಭವ್ಯವಾದ ಮನೆಯನ್ನು ಬಾಡಿಗೆಗೆ ಹಿಡಿದು ಅಲ್ಲಿ ವಾಸಿಸಲಾರಂಭಿಸಿದನು.

ಜಯಸೇನನ ವ್ಯಾಪಾರವು ಸಮೃದ್ಧಿಯಾಗಿ ನಡೆಯಿತು. ನಗರದಲ್ಲಿರುವ ಪ್ರತಿಷ್ಠಿತ ವ್ಯಾಪಾರಿಗಳೂ ಅವನ ಮಿತ್ರರಾದರು. ಜಯಸೇನನ ಮನೆಯಲ್ಲಿದ್ದ ಸ್ತ್ರೀಯು ಕೂಡಾ ಜಯಸೇನನ ವ್ಯಾಪಾರಾಭಿವೃದ್ಧಿಯನ್ನು ಕಂಡು ಸಂತೋಷ ಪಟ್ಟಳು. ಆದರೆ ಅವನೊಡನೆ ಯಾವುದೇ ರೀತಿಯ ಅಕ್ರಮ ಸಂಬಂಧ ಅವಳಿಗಿರಲಿಲ್ಲ. ಅವಳ ಪ್ರೀತಿ ಗಳಿಸಿ ಮದುವೆಯಾಗಬೇಕೆಂದು ಜಯಸೇನನ ಆಶೆ. ಆದರೆ ಅವಳು ಒಂದೊಂದೇ ನೆವಹೇಳಿ ಆ ಕಾಲವನ್ನು ಮುಂದೆ ದೂಡುತಿದ್ದಳು. ಆದರೆ ಅವನ ವ್ಯಾಪಾರಕ್ಕಾಗಿ ಅವಳು ಬಹಳ ಸಹಾಯ ನೀಡುತಿದ್ದಳು. ಅರಮನೆಯ ಪಕ್ಕಕ್ಕಿರುವ ದೊಡ್ಡ ಅಮೀರ ಶಹಾ ನೆಂಬ ವ್ಯಾಪಾರಿಯೊಡನೆ ಸ್ನೇಹ ಬೆಳೆಸುವಂತೆ ಪ್ರೋತ್ಸಾಹಿಸಿದಳು. ಜಯಸೇನನು ಒಪ್ಪಿ ಆವನ ಗುರುತು ಪರಿಚಯ ಮಾಡಿಕೊಂಡನು. ಕಾಲಕ್ರಮೇಣ ಅವರಿರ್ವರ ಸ್ನೇಹವೂ ಗಾಢವಾಯಿತು. ಒಂದು ದಿನ ತನ್ನ ಮನೆಗೆ ಭೋಜನಕ್ಕೆ ಬರಬೇಕೆಂದು ಅಮೀರ ಶಹಾನು ಜಯಸೇನನನ್ನು ಕರೆದನು. ಜಯಸೇನನು ಒಪ್ಪಿ ಊಟಕ್ಕೆ ಹೋದನು. ಊಟ,

ಗಾಯನ, ನರ್ತನ, ಮದ್ಯಪಾನ ಮೊದಲಾದವುಗಳಿಂದ ಅವನನ್ನು ಸಂತೋಷಪಡಿಸಿದನು. ಅದಕ್ಕೆ ಬದಲಾಗಿ ತಾವೂ ಒಂದು ದಿನ ಅಮೀರ್ ಶಹಾನನ್ನು ಊಟಕ್ಕೆ ಕರೆಯಬೇಕೆಂದು ಜಯಸೇನನು ನುಡಿದನು. ಆ ಸ್ತ್ರೀಯು ಅದಕ್ಕೊಪ್ಪಿ ಯೋಗ್ಯ ಸಿದ್ಧತೆ ಮಾಡಿದಳು. ಆದರೆ ಅಮೀರ ಶಹಾನು ಬಂದಾಗ ಮಾತ್ರ ತಾನು ಅವನ ಕಣ್ಣಿಗೆ ಬೀಳದಂತೆ ಮರೆಯಾಗಿದ್ದಳು. ಊಟ ಉಪಚಾರವಾದ ಮೇಲೆ ಇಬ್ಬರೂ ಅಮಲೇರುವವರೆಗೆ ಕುಡಿದರು. ಇಬ್ಬರೂ ಅಮಲೇರಿ ಮಂಚದಲ್ಲೇ ಒರಗಿದರು. ಆಗ ಜಯಸೇನನು ರಕ್ಷಿಸಿದ ಆ ಸ್ತ್ರೀಯು ಆ ಕೋಣೆಯೊಳಗೆ ಬಂದು, ತಾನು ಬಚ್ಚಿಟ್ಟುಕೊಂಡಿದ್ದ ಕಠಾರಿಯಿಂದ ಅಮೀರ್ ಶಹಾನನ್ನು ತಿವಿದು ಆ ಮನೆಯಿಂದ ಹೊರಟು ಹೋದಳು.

ಬೆಳಗಾದ ಮೇಲೆ ಜಯಸೇನನು ಎಚ್ಚತ್ತನು. ಆದರೆ ಕೋಣೆಯಲ್ಲಿ ಸತ್ತು ಬಿದ್ದ ತನ್ನ ಗೆಳೆಯನನ್ನು ಕಂಡು ಗಾಬರಿಯಾದನು. ಮನೆಯಲ್ಲಿ ಬೇರೆ ಯಾರೂ ಇರಲಿಲ್ಲ. ಆದುದರಿಂದ ಅವನು ಆ ಮನೆಯ ತೋಟದಲ್ಲಿ ಒಂದು ತಗ್ಗು ತೆಗೆಸಿ ಅದರಲ್ಲೇ ಅವನನ್ನು ಹೂಳಿಟ್ಟನು. ತಾನು ರಕ್ಷಿಸಿದ ಸ್ತ್ರೀ ಯಾರು ? ಈಗ ಅವಳು ಎಲ್ಲಿ ಹೋದಳು ? ಎಂದು ಅವನು ಚಿಂತಿಸುತ್ತಾ ಅವನು ಮನೆಯಲ್ಲೇ ಉಳಿದನು. ಅಷ್ಟರಲ್ಲಿ ಅಪರಿಚಿತನಾದ ತರುಣನೊಬ್ಬನು ಜಯಸೇನನಿದ್ದಲ್ಲಿ ಬಂದು "ರಾಜಪುತ್ರ, ನೀನು ರಕ್ಷಿಸಿದ ಸ್ತ್ರೀ ನನ್ನನ್ನು ಕಳಿಸಿರುವಳು. ನೀನು ಅವಳ ಜೀವನವನ್ನು ರಕ್ಷಿಸಿದುದಕ್ಕಾಗಿ ಕೃತಜ್ಞತೆಯನ್ನರ್ಪಿಸಿರುವಳು. ಈ ಹಣದ ಗಂಟನ್ನು ನಿಮಗೆ ಕೊಡಲು ಹೇಳಿರುವಳು. ಅವಳನ್ನು ಪೀಡಿಸಿದ್ದ ವ್ಯಾಪಾರಿಯ ಮೇಲೆ ಅವಳು ಸೇಡು ತೀರಿಸಿಕೊಂಡಳು" ಎಂದು ಹೇಳಿ ಆ ಹಣದ ಗಂಟನ್ನು ಕೊಟ್ಟು ಹೊರಡಲನುವಾದನು. ಆಗ ಜಯಸೇನನು ಅವನನ್ನು ತಡೆದು "ಆ ಸ್ತ್ರೀ ಯಾರು ?" ಎಂದು ಪ್ರಶ್ನಿಸಿದನು. ಆ ತರುಣನು ಎಷ್ಟು ನಿರಾಕರಿಸಿದರೂ ಜಯಸೇನನು ಬಿಡಲಿಲ್ಲ. ಕೊನೆಗೆ ಆ ತರುಣನ ಹೃದಯ ಕರಗಿತು. "ಆ ಸ್ತ್ರೀ ಈ ಊರಿನ ರಾಜನ ಮಗಳು" ಎಂದು ನುಡಿದನು. ಆಗ ಜಯಸೇನನು " ಅವಳನ್ನು ಒಮ್ಮೆ ಭೆಟ್ಟಿ ಮಾಡಿಸು " ಎಂದು ಬೇಡಿಕೊಂಡನು. ಅದನ್ನು ಕೇಳಿ ಆ ತರುಣನು, "ಅವಳು ಭೆಟ್ಟಿಯಾಗಲಾರಳು.

ಆದರೆ ದೇವಾಲಯಕ್ಕೆ ಹೋಗುವಾಗ ನೀನು ಕಾಣಲಡ್ಡಿಯಿಲ್ಲ" ಎಂದನು. ಅದನ್ನು ಕೇಳಿ ಜಯಸೇನನು ಸನ್ಯಾಸಿಯ ವೇಷ ಧರಿಸಿ ರಾಜಪುತ್ರಿಯು ದೇವಾಲಯಕ್ಕೆ ತೆರಳುವ ದಾರಿಯಲ್ಲಿ ನಿಂತುಕೊಂಡನು. ರಾಜಪುತ್ರಿಯನ್ನು ಕಂಡಕೂಡಲೇ ಅವನ ಕಣ್ಣುಗಳಿಂದ ನೀರು ಧಾರಾಕಾರವಾಗಿ ಸುರಿಯ ತೊಡಗಿತು. ರಾಜಪುತ್ರಿಯು ತನ್ನ ದಾಸಿಯನ್ನು ಕರೆದು "ಅವನು ಯಾರೆಂದು ತಿಳಿದುಕೊಂಡು ಬಾ" ಎಂದು ಹೇಳಿ ಕಳಿಸಿದಳು. ತನ್ನನ್ನು ರಕ್ಷಿಸಿದ ರಾಜಪುತ್ರನೆಂದು ಗೊತ್ತಾಗಲು ಸಂಜೆ ಉದ್ಯಾನವನಕ್ಕೆ ಬರಲು ಹೇಳಿ ಕಳಿಸಿದಳು.

ಜಯಸೇನನು ಸಂಜೆ ಉದ್ಯಾನವನಕ್ಕೆ ಬಂದಾಗ ರಾಜಪುತ್ರಿಯು ಅವನೊಡನೆ "ರಾಜಪುತ್ರಾ, ನೀವೆಷ್ಟು ಬಳಲಿರುವಿರಲ್ಲ! ಇದರ ಕಾರಣ ವೇನು? ನೀವು ಮಾಡಿದ ಉಪಕಾರಕ್ಕೆ ನಾನು ಪ್ರತ್ಯುಪಕಾರ ಮಾಡಿರುವೆನಲ್ಲ! ಆದರೂ ಮತ್ತೆ ನನ್ನನ್ನು ಕಾಣಲು ಬಯಸುತ್ತಿರುವಿರೇಕೆ?" ಎಂದು ಪ್ರಶ್ನಿಸಿದಳು. ಆಗ ಅವನು "ರಮಣೀ, ಧನದಾಸೆ ನನಗಿಲ್ಲ. ನಿನ್ನನ್ನು ಮದುವೆ ಮಾಡಿಕೊಳ್ಳಲು ಆತುರವುಳ್ಳವನಾಗಿದ್ದೇನೆ" ಎಂದನು. ಅದನ್ನು ಕೇಳಿ ಅವಳು ಸಿಟ್ಟಾಗಿ ಅಲ್ಲಿಂದೆದ್ದು ಹೋದಳು. ಜಯಸೇನನು ತಬ್ಬಿಬ್ಬಾದನು. ರಾಜಪುತ್ರಿಯು ತನ್ನನ್ನು ತಿರಸ್ಕರಿಸಿದುದನ್ನು ಕಂಡು ಅವನಿಗೆ ತುಂಬಾ ಬೇಸರವಾಯಿತು. ಊಟ ಉಡಿಗೆಗಳೂ ರುಚಿಸಲಿಲ್ಲ. ಹುಚ್ಚನಂತೆ ದಿನಂಪ್ರತಿ ಆ ದೇವಾಲಯ ಮತ್ತು ಉದ್ಯಾನವನಗಳಿಗೆ ಅಲೆಯ ತೊಡಗಿದನು. ದಾಸಿಯರು ಪದೇ ಪದೇ ಈ ಸುದ್ದಿಯನ್ನು ರಾಜಪುತ್ರಿಗೆ ತಿಳಿಸುತ್ತ ಬಂದರು. ಆದರೂ ಅವಳ ಮನಸ್ಸು ಕರಗಲಿಲ್ಲ. ಒಂದು ದಿನ ಅವಳು ಜಯಸೇನನನ್ನು ಮತ್ತೆ ಉದ್ಯಾನವನಕ್ಕೆ ಕರೆಸಿ "ರಾಜಪುತ್ರ, ನೀನು ಹೀಗೆ ಮಾಡಬಾರದು. ನಾನಿನ್ನೂ ಅವಿವಾಹಿತಳಿದ್ದೇನೆ. ನನ್ನ ಹೆಸರನ್ನೇ ಹೇಳುತ್ತ ನೀನು ಹೀಗೆ ಅಲೆವರೆ ಜನರು ನನ್ನ ಮೇಲೆ ಗೌರವ ತೋರಿಸಲಾರರು. ನೀನು ನಿನ್ನ ದೇಶಕ್ಕೆ ಹಿಂತಿರುಗು. ಬೇಕಾಗಿದ್ದರೆ ನಾನು ಇನ್ನೂ ದ್ರವ್ಯ ಸಹಾಯ ಮಾಡಲು ಸಿದ್ಧಳಿದ್ದೇನೆ" ಎಂದಳು. ಅದನ್ನು ಕೇಳಿ ಜಯಸೇನನು ಉತ್ತರ ಕೊಡದೆ ಕಣ್ಣೀರು ಸುರಿಸುತ್ತ ಅಲ್ಲಿಂದೆದ್ದು ಬಂದನು. ಆದರೆ ರಾಜಪುತ್ರಿ ಹೇಳಿದಂತೆ ಆ ಊರು ಬಿಟ್ಟು ತೆರಳಲಿಲ್ಲ.

ಅವಳ ಮೇಲಿನ ಮೋಹದಿಂದ ಅವನು ಭ್ರಾಂತನಾದನು. ಅದನ್ನು ಕಂಡ ರಾಜಪುತ್ರಿಯು ಸಿಪಾಯಿಗಳನ್ನು ಕಳಿಸಿ ಅವನನ್ನು ಬಂಧಿಸಿ, ಬೇರೆ ಊರಿಗೆ ಕೊಟ್ಟು ಕಳಿಸಿದಳು ಕೆಲವು ವಾರಗಳ ಮೇಲೆ ಪುನಃ ಅವನು ಮರಳಿದನು. ಇದನ್ನರಿತ ವೃದ್ಧ ದಾಸಿಯೊಬ್ಬಳು ರಾಜಪುತ್ರಿಯೊಡನೆ "ಅಮ್ಮಾ, ಆ ರಾಜಪುತ್ರನು ಅಸುರೂಪನು. ಯುವಕನು. ನಿನ್ನ ಮೇಲೆ ಅಗಾಧವಾದ ಪ್ರೇಮವಿದೆ. ನಿನಗಾಗಿ ಅವನು ತನುಮನಧನಗಳೆಲ್ಲವನ್ನು ಕಳೆದುಕೊಳ್ಳಲು ಸಿದ್ಧನಾಗಿದ್ದಾನೆ. ಜಗತ್ತಿನಲ್ಲಿ ಸಿರಿಸಂಪತ್ತು ರಾಜ್ಯ ಅಧಿಕಾರಗಳೆಲ್ಲ ಒಮ್ಮೆ ಲಭಿಸುತ್ತವೆ. ಒಮ್ಮೆ ಕೈಬಿಟ್ಟು ಹೋಗುತ್ತವೆ. ಆದರೆ ಪ್ರೇಮವು ಶಾಶ್ವತವಾಗಿದೆ. ಪ್ರೇಮವಿಲ್ಲದ ವಿವಾಹ ಬಂಧನವು ನಿಷ್ಫಲ. ಆದುದರಿಂದ ನೀನು ಅವನನ್ನು ಮದುವೆಯಾಗುವುದು ಉಚಿತವಾಗಿದೆ" ಎಂದು ನುಡಿದಳು. ವೃದ್ಧ ದಾಸಿಯ ಈ ಮಾತುಗಳನ್ನು ಕೇಳಿ ರಾಜಪುತ್ರಿಯ ಮನಸ್ಸು ಬದಲಾಯಿತು. ರಾಜಪುತ್ರನ ಮೇಲೆ ಕರುಣೆ ಹುಟ್ಟಿತು. ಅವನನ್ನು ಮದುವೆಯಾಗಲು ಸಮ್ಮತಿಸಿದಳು. ಮತ್ತು ರಾಜಪುತ್ರನಿಗೆ ಅದರಂತೆ ಹೇಳಿಕಳಿಸಿ ಅರಮನೆಗೆ ಬರಲು ತಿಳಿಸಿದಳು.

ರಾಜಪುತ್ರನು ಅಂದವಾದ ಬಟ್ಟೆಬರೆಗಳನ್ನು ಧರಿಸಿ ಅರಮನೆಗೆ ತೆರಳಿದನು. ರಾಜಪುತ್ರಿಯು ಅವನನ್ನು ಆದರದಿಂದ ಸ್ವಾಗತಿಸಿ ಅವನ ಯೋಗಕ್ಷೇಮವನ್ನು ವಿಚಾರಿಸಿ ಫಲಾಹಾರಕ್ಕೆ ತಂದು ಕೊಟ್ಟಳು. ಆ ಮೇಲೆ ಅವನನ್ನುದ್ದೇಶಿಸಿ "ರಾಜಪುತ್ರ, ನಿನ್ನ ಪ್ರೇಮವನ್ನು ಪರೀಕ್ಷಿಸಲು ನಾನು ಈ ರೀತಿ ಇಷ್ಟರವರೆಗೆ ದಂಡಿಸಿದೆ. ಅದನ್ನು ಮನಸ್ಸಿನಲ್ಲಿಟ್ಟುಕೊಳ್ಳದೆ ಕ್ಷಮಿಸು. ಆದರೆ ನಾನು ಅಮೀರ್ ಶಹಾನನ್ನು ಕೊಂದ ಕಾರಣವನ್ನು ನೀನು ಕೇಳಕೂಡದು. ಹಾಗಾದರೆ ಮದುವೆಯಾಗಲು ಒಪ್ಪುತ್ತೇನೆ" ಎಂದಳು. ರಾಜಪುತ್ರನು ಅದಕ್ಕೆ ಒಪ್ಪಿಕೊಂಡನು. ಅವರೀರ್ವರೂ ಗಾಂಧರ್ವ ಪದ್ಧತಿಯಿಂದ ಮದುವೆಯಾದರು. ರಾಜಪುತ್ರನು ಅದೇ ನಗರದಲ್ಲಿ ವ್ಯಾಪಾರವನ್ನು ನಡೆಸುತ್ತ ತುಂಬ ಧನವಂತನಾಗಿ ಮೆರೆದನು. ಅವರ ದಾಂಪತ್ಯ ಜೀವನವೂ ಸುಖಮಯವಾಗಿಯೇ ಸಾಗಿತು. ಇಬ್ಬರೂ ಅತ್ಯಂತ ಗಾಢವಾಗಿ ಪ್ರೀತಿಸುತಿದ್ದರು. ಅವರೀರ್ವರ ಪ್ರೇಮದಲ್ಲಿ ಯಾವುದೇ ರೀತಿಯ ಕಪಟ, ಕೃತ್ರಿಮತೆ ಇದ್ದಿರಲಿಲ್ಲ.

ಹೀಗೆ ಅನೇಕ ವಾರಗಳು ಉರುಳಿದುವು. ಒಂದು ದಿನ ಜಯಸೇನನು ತನ್ನ ರಮಣಿಯೊಡನೆ ಸರಸಲ್ಲಾಪವಾಡುತ್ತ ಹಿಂದಿನ ರೋಮಾಂಚಕಾರೀ ಘಟನೆಗಳನ್ನು ಸ್ಮರಿಸಿಕೊಂಡು ಹೇಳುತಿದ್ದನು. ಆಗ ಅವನು "ಪ್ರಿಯೇ!" ಹಿಂದೆ ನಿನ್ನನ್ನು ಯಾರೋ ತಿವಿದು ಪೆಟ್ಟಿಗೆಯಲ್ಲಿಹಾಕ್ಕಿಕಂದಕದಲ್ಲಿ ಮುಳುಗಿಸಲು ಯತ್ನಿಸುತಿದ್ದರಲ್ಲ. ಅದರ ಕಾರಣವೇನು ? ಅಲ್ಲದೆ ಆ ಅಮೀರ್ ಶಹಾನನ್ನು ನೀನು ಕೊಲ್ಲಲು ಕಾರಣವೇನು ?" ಎಂದು ಕೇಳಿದನು. ಆಗ ಅವಳು "ರಾಜಪುತ್ರ, ನಾನು ಅವುಗಳ ಕಾರಣವನ್ನು ಹೇಳಿದರೆ ನೀನು ನನ್ನ ಮೇಲೆ ಸಿಟ್ಟಾಗುವುದರಲ್ಲಿ ಯಾವ ಸಂದೇಹವೂ ಇಲ್ಲ. ಅಲ್ಲದೆ ನನ್ನ ಮೇಲಿನ ಪ್ರೇಮವೂ ಕಡಿಮೆಯಾಗಬಹುದು. ನನ್ನನ್ನು ತ್ಯಜಿಸಿ ಬೇರೊಬ್ಬಳನ್ನು ಕೂಡಾ ಮದುವೆಯಾಗಲು ಇಚ್ಛಿಸಬಹುದು. ಆದುದರಿಂದಲೇ ಅದರ ಕಾರಣ ಕೇಳಬಾರದೆಂದು ನಾನು ಹಿಂದೆ ಹೇಳಿದ್ದೆನಲ್ಲವೇ ?" ಎಂದು ನುಡಿದಳು ಅದನ್ನು ಕೇಳಿ ಜಯಸೇನನು "ರಮಣೀ, ನೀನು ಏನೆಂದರೂ ನಾನು ಸಿಟ್ಟಾಗುವುದಿಲ್ಲ. ಮತ್ತು ನಮ್ಮಿಬ್ಬರ ಸ್ನೇಹ, ಹಾಗೂ ಪ್ರೇಮವು ಯಾವುದೇ ರೀತಿ ಎಳ್ಳಷ್ಟು ಕಡಿಮೆಯಾಗಲಾರದು. ದೇವರ ಸಾಕ್ಷಿಯಾಗಿ ನುಡಿಯುತ್ತೇನೆ" ಎಂದು ವಚನ ಕೊಟ್ಟನು.

ಆಗ ಆ ರಾಜಪುತ್ರಿಯು ಇಂತೆಂದಳು: "ಸ್ವಾಮೀ, ನಾನೂ ಆ ಅಮೀರ್ ಶಹಾನೂ ಬಾಲ್ಯ ಸ್ನೇಹಿತರು. ಒಂದೇ ಗುರುವಿನ ಆಶ್ರಯದಲ್ಲಿ ವಿದ್ಯಾಭ್ಯಾಸ ಮಾಡಿದೆವು. ದೊಡ್ಡವರಾದ ಮೇಲೆ ಸಹಜವಾಗಿ ನಮ್ಮೀರ್ವರಲ್ಲಿ ಪ್ರೇಮವು ಅಂಕುರಿಸಿತು. ನಾನು ಅವನಿಗೆ ಅಮಿತ ಸಹಾಯವನ್ನು ನೀಡಿದೆನು. ಆದರಿಂದ ಅವನು ವ್ಯಾಪಾರವನ್ನು ಬೆಳೆಸಿದನು. ಅರಮನೆಯಂತಹ ದೊಡ್ಡ ಕಟ್ಟಡವನ್ನು ಕಟ್ಟಿಸಿದನು. ನಾನು ಯಾವಾಗಲೂ ಅವನಲ್ಲಿ ತೆರಳುತಿದ್ದೆನು. ಮತ್ತು ಇಬ್ಬರೂ ಪ್ರೇಮ ಚೇಷ್ಟೆಯಲ್ಲಿ ತೊಡಗುತಿದ್ದೆವು. ಹೀಗೆ ಸ್ವಲ್ಪ ಕಾಲ ಕಳೆಯಿತು. ಆ ಮೇಲೊಂದು ದಿನ ರಾತ್ರಿ ನಾನು ಬಹಳ ಕಾಮಾತುರಳಾದೆ. ನಾನು ವೇಷಪಲ್ಲಟ ಮಾಡಿಕೊಂಡು ಅವನ ಮನೆಗೆ ಒಬ್ಬಳೇ ಹೋದೆ. ಅಮೀರ್ ಶಹಾನು ಮತ್ತೊಬ್ಬ ಸ್ತ್ರೀಯೊಡನೆ ಶೃಂಗಾರ ಚೇಷ್ಟೆಗಳಲ್ಲಿ ತಲ್ಲೀನನಾಗಿದ್ದನು. ಅದನ್ನು ಕಂಡು ನನಗೆ ಬಹಳ ಕೋಪವು ಬಂದಿತು. ಅವನು ಮಾಡಿದ ಮೋಸಕ್ಕಾಗಿ

ಯೋಗ್ಯ ಶಿಕ್ಷೆ ಕೊಡಿಸದೇ ಬಿಡಲಾರೆನೆಂದು ಹೇಳಿದೆದು. ಅದನ್ನು ಕೇಳಿ ಅವನು ಸ್ತಂಭೀಭೂತನಾದನು. ತನ್ನ ತಪ್ಪನ್ನು ಒಪ್ಪಿಕೊಂಡು ಇನ್ನು ಮುಂದೆ ಅಂತಹ ಕೃತ್ಯ ಮಾಡುವುದಿಲ್ಲವೆಂದು ನುಡಿದನು. ನನ್ನನ್ನು ಮಧುರ ವಚನಗಳಿಂದ ಸಂತೈಸಿ ನನಗೆ ಕುಡಿಯಲು ಮದ್ಯವನ್ನು ತಂದು ಕೊಟ್ಟನು. ಆ ಮದ್ಯದಲ್ಲಿ ಅವನು ಅಮಲಿನ ಔಷಧಿಯನ್ನು ಕೂಡಿಸಿದಂತೆ ಕಾಣುತ್ತದೆ. ಆ ಮೇಲೆ ಅವನು ಚೂರಿಯಿಂದ ನನ್ನನ್ನು ತಿವಿದನು. ನಾನು ಪ್ರಜ್ಞಾ ಶೂನ್ಯಳಾಗಿದ್ದುದರಿಂದ ಮುಂದೇನಾಯಿತೋ ನಾನರಿಯೆ. ಅವರು ಪೆಟ್ಟಿಗೆಯಲ್ಲಿ ಹಾಕಿ ಕಂದಕದಲ್ಲಿ ಮುಳುಗಿಸುತಿದ್ದರು. ನೀನು ಬಂದುದರಿಂದ ನನ್ನ ಪ್ರಾಣ ಉಳಿಯಿತು. ನಾನು ಬದುಕಿಕೊಂಡುದುದು ಅವನಿಗೆ ಮಾತ್ರ ತಿಳಿದಿರಲಿಲ್ಲವೆಂದು ತೋರುತ್ತದೆ. ಹೇಗಾದರೂ ಮಾಡಿ ಅವನನ್ನು ಕೊಂದು ಹೊಟ್ಟೆಯೊಳಗಿನ ಸೇಡನ್ನು ತೀರಿಸಿಕೊಳ್ಳಬೇಕೆಂದು ನಾನು ಸಮಯನಿರೀಕ್ಷಿಸುತಿದ್ದೆ. ಅವನೊಡನೆ ಸ್ನೇಹ ಬೆಳೆಸಲು ನಾನು ನಿನಗೆ ಪ್ರೋತ್ಸಾಹ ಕೊಟ್ಟುದುದೂ ಅದೇ ಉದ್ದೇಶದಿಂದಲೇ. ಆ ದಿವಸ ಅವನು ಮನೆಗೆ ಊಟಕ್ಕೆ ಬಂದಾಗ ಮದ್ಯದಲ್ಲಿ ನಾನೂ ನಿದ್ದೆ ಬರುವ ಔಷಧವನ್ನು ಹಾಕಿ ನಿಮಗಿಬ್ಬರಿಗೂ ಕುಡಿಯಲು ಕೊಟ್ಟೆ. ಮತ್ತು ಆ ಮೇಲೆ ಕಠಾರಿಯಿಂದ ಅವನನ್ನು ತಿವಿದೆ. ಅವನು ಮಾಡಿದ ಮೋಸಕ್ಕೆ ತಕ್ಕ ಶಿಕ್ಷೆಯಾಯಿತು. ನಾನು ಮಾಡಿದ್ದ ಅಪರಾಧಕ್ಕೆ ನೀನು ಮನ್ನಿಸ ಬೇಕು".

ಜಯಸೇನನು ಅವಳನ್ನು ಕ್ಷಮಿಸಿ ತನ್ನ ರಾಜ್ಯಕ್ಕೆ ಕರೆದುಕೊಂಡು ಹೋಗಿ, ಸಂಭ್ರಮದಿಂದ ಮದುವೆಯಾಗಿ ಅಲ್ಲೇ ಸುಖದಿಂದ ಇರತೊಡಗಿದನು". ಇದನ್ನು ಕೇಳಿದ ಕಲಾವತಿಯು ಕುಡುಕನಾದ ಎರಡನೇ ಪುತ್ರನ ಕಥೆಯನ್ನು ಕೇಳಲು ಅಪೇಕ್ಷಿಸಿದಳು. ಆದುದರಿಂದ ಅದನ್ನು ಪ್ರತಾಪಸೇನನು ಅವಳಿಗೆ ವಿವರಿಸಿದನೆಂದು ಮೋಹಿನಿಗೆ ಮೋಹನದಾಸನು ನುಡಿದು ಇಂತೆಂದನು.

---

## ೪೨ ವಿಜಯಕುಮಾರನ ಕತೆ

ಅಜಿತನ ದ್ವಿತೀಯ ಪುತ್ರನಾದ ವಿಜಯ ಕುಮಾರನು ರಾಜಧಾನಿ

ಯಲ್ಲಿ ಅತ್ಯಂತ ಮನೋಹರದಿಂದ ಒಂದು ಉದ್ಯಾನವನ್ನು ನಿರ್ಮಿಸಿದನು. ಆ ತೋಟದಲ್ಲಿ ನಾನಾ ಜಾತಿಯ ಹೂವುಗಳ ಹಾಗೂ ಫಲ ವಸ್ತುಗಳ ಗಿಡ ಮರಗಳು ಇದ್ದುವು. ರಾತ್ರಿ ಸಂಚರಿಸುತ್ತಿದ್ದ ದೇವಾಂಗನೆಯರು ಆ ಉದ್ಯಾನ ವನದಲ್ಲಿ ಇಳಿದು ಆ ಅಂದವಾದ ಹೂಗಳನ್ನೂ ಮಧುರವಾದ ಫಲಗಳನ್ನೂ ಕೊಯ್ದು ದೇವೇಂದ್ರನಿಗೆ ಒಯ್ದು ಅರ್ಪಿಸಿದರು. ಅವುಗಳ ಸುವಾಸನೆ ಮತ್ತು ಮಾಧುರ್ಯವನ್ನು ಕಂಡು ದೇವೇಂದ್ರನು ಮೆಚ್ಚಿ ಹೋದನು. ಮತ್ತು ಅವುಗಳನ್ನು ಎಲ್ಲಿಂದ ತಂದಿರುವಿರಿ ಎಂದು ಕೇಳಿದನು. ಅವರು ವಿಜಯ ಕುಮಾರನ ಉದ್ಯಾನದ ಹೆಸರನ್ನು ಹೇಳಿದರು. ಆಗ ದೇವೇಂದ್ರನು ಆ ತೋಟದ ಗಿಡಗಳನ್ನು ಕಿತ್ತು ತನ್ನ ಲೋಕಕ್ಕೆ ತರಬೇಕೆಂದು ತಿಳಿಸಿದನು. ಅವನ ಗಣಗಳು ಅದರಂತೆ ಮಾಡಿದುವು. ದಿನಂಪ್ರತಿ ವಿಜಯ ಕುಮಾರನ ತೋಟದಲ್ಲಿ ಒಂದೊಂದೇ ಗಿಡಗಳು ಕಣ್ಮರೆಯಾಗ ತೊಡಗಿತು. ಇದನ್ನು ಕಂಡ ತೋಟಗಾರನು ರಾಜಪುತ್ರನಿಗೆ ಅದನ್ನು ತಿಳಿಸಿದನು. ಆಗ ಅವನು ಆಶ್ಚರ್ಯಚಕಿತನಾಗಿ ಇದನ್ನು ಪರೀಕ್ಷಿಸಬೇಕೆಂದು ಕಾದು ಕುಳಿತನು.

ಆ ರಾತ್ರಿ ಒಂದು ಕಾಡು ಹಂದಿಯು ಬಂದು ತೋಟದಲ್ಲಿದ್ದ ಸಸಿಗಳನ್ನು ಕಿತ್ತೆಸೆಯತೊಡಗಿತು ವಿಜಯ ಕುಮಾರನೂ ಅವನ ಮಿತ್ರನೂ ಇಬ್ಬರೂ ಕುದುರೆಗಳನ್ನೇರಿ ಆ ಹಂದಿಯನ್ನು ಬೆನ್ನಟ್ಟಿ ಹೋದರು. ಹಂದಿಯು ಒಂದು ದೊಡ್ಡ ಕಾಡನ್ನು ಪ್ರವೇಶಿಸಿತು. ಅವರೂ ಅದರ ಬೆನ್ನ ಹಿಂದೆಯೇ ನುಸುಳಿದರು. ಬಾಣ ಹೊಡೆಯಬೇಕೆಂದು ಅವರು ಬಿಲ್ಲಿಗೆ ಅಂಬನ್ನು ಏರಿಸುವಾಗಲೇ ಅದು ಮರೆಯಾಗುತಿತ್ತು. ಹೀಗಾಗಿ ಅದು ಅವರ ಕೈಗೆ ಸಿಗಲಿಲ್ಲ. ಕುದುರೆಗಳು ಓಡುತ್ತ ಓಡುತ್ತ ಬಳಲಿದುವು. ನೀರನ್ನು ಹುಡುಕಲು ಇಬ್ಬರೂ ಯತ್ನಿಸಿದರು. ಆಗ ಆ ಕಾಡಿನ ಮಧ್ಯೆದಲ್ಲಿ ಒಂದು ತಿಳಿನೀರಿನ ಸರೋವರ ಅವರ ಕಣ್ಣಿಗೆ ಬಿತ್ತು. ಅವರೀರ್ವರೂ ಕುದುರೆಗಳನ್ನು ತಂದು ನೀರು ಕುಡಿಸಿ, ತಾವೂ ಬಾಯಾರಿಕೆಯನ್ನು ಶಮನ ಮಾಡಿಕೊಂಡು, ಅತ್ತಿತ್ತ ನೋಡಲು ಆ ಕೆರೆಯ ಒಂದು ಪಾರ್ಶ್ವದಲ್ಲಿ ಒಂದು ಕಟ್ಟಿಗೆಯ ಸ್ತ್ರೀ ಮೂರ್ತಿ ಅವರ ದೃಷ್ಟಿಗೆ ಬಿತ್ತು. ಆ ಮೂರ್ತಿಯ ಅಗಾಧ ಸೌಂದರ್ಯವನ್ನು ಕಂಡು ರಾಜಕುಮಾರನು ಮೋಹಿತನಾದನು.

ಅವನು ಅದರ ಬಳಿಯೇ ನಿಂತು ಬಹಳ ಹೊತ್ತಿನ ವರೆಗೆ ಅದರ ಸೌಂದರ್ಯ ವನ್ನು ಕುಡಿಯುವವರಂತೆ ನೋಡತೊಡಗಿದನು. ಅದರ ತುಟಿಯಲ್ಲಿ ಮೂಡಿದ್ದ ಎಳೆನಗು ರಾಜಕುಮಾರನನ್ನು ಪ್ರೇಮ ಪೂಜಾರಿಯನ್ನಾಗಿ ಪರಿವರ್ತಿಸಿತು. ಅವನು ಆ ಸ್ತ್ರೀ ಮೂರ್ತಿಯನ್ನುದ್ದೇಶಿಸಿ "ಓ, ಮೋಹನಾಂಗಿಯೇ, ನೀನು ಯಾರು? ನರಲೋಕದವಳೋ? ಗಂಧರ್ವ ಲೋಕದವಳೋ? ದೇವಾಂಗನೆಯೋ? ನಿನ್ನ ರೂಪ ಕಂಡು ನಾನು ಮೆಚ್ಚಿಹೋಗಿದ್ದೇನೆ. ಈ ಅರಣ್ಯದಲ್ಲಿ ನಿನ್ನ ಮೂರ್ತಿಯನ್ನು ನಿಲ್ಲಿಸಿದವರು ಯಾರು? ನೀನು ನನ್ನನ್ನು ವರಿಸಿದರೆ ನೀನು ರಾಣಿಯಾಗುವೆ" ಎಂದು ಹೇಳುತ್ತ ಹಂಬಲಿಸಿದನು. ಆಗ ಅವನ ಮಿತ್ರನು "ರಾಜಪುತ್ರ, ಇದು ಕೇವಲ ಕಾಷ್ಟ ಪ್ರತಿಮೆ. ಜೀವವಿಲ್ಲ. ಅದರೊಡನೆ ಸಂಭಾಷಣೆ ಮಾಡಲಿಕ್ಕಾಗುತ್ತದೆಯೇ? ಅದನ್ನು ನಿರ್ಮಿಸಿದ ಶಿಲ್ಪಿಯನ್ನು ಕೇಳಿದರೆ ಅವಳಾರೆಂದು ತಿಳಿದೀತು. ಶಿಲ್ಪಿಯನ್ನಾದರೂ ಹುಡುಕೋಣ ಏಳು" ಎಂದು ನುಡಿದನು. ಆದರೆ ಆ ರಾಜಪುತ್ರನು ಒಪ್ಪಲಿಲ್ಲ. "ಮಿತ್ರ! ನೀನೇ ಆ ಶಿಲ್ಪಿಯನ್ನು ಹುಡುಕಿ, ಅದರ ಸಮಾಚಾರವನ್ನು ತಿಳಿದುಕೊಂಡು ಬಾ. ಅಷ್ಟರ ವರೆಗೆ ನಾನು ಇಲ್ಲೇ ಇರುತ್ತೇನೆ. ನಿನ್ನ ಉಪಹಾರಕ್ಕೆ ಯೋಗ್ಯ ಉಡುಗೊರೆಯನ್ನು ಕೊಡುತ್ತೇನೆ" ಎಂದನು. ರಾಜಕುಮಾರನ ಮಿತ್ರನು ಅದಕ್ಕೊಪ್ಪಿ ತನ್ನ ತುರಗವನ್ನೇರಿ ಹೊರಟನು.

ಆ ಕಾಡಿನ ಅಂಚಿನಲ್ಲಿ ಕೆಲವು ಬೇಡರ ಮನೆಗಳಿದ್ದುವು. ಅಲ್ಲಿ ಆ ಕಾಷ್ಟ ಪ್ರತಿಮೆಯ ಬಗ್ಗೆ ವಿಚಾರಿಸಲು ನೆರೆಯಲ್ಲಿದ್ದ ಒಂದು ಹಳ್ಳಿಯ ಶಿಲ್ಪಿ ಅದನ್ನು ನಿರ್ಮಿಸಿದನೆಂದು ಸುದ್ದಿ ಹತ್ತಿತು. ರಾಜಕುಮಾರನ ಮಿತ್ರನು ಹಳ್ಳಿಗೆ ತೆರಳಿ ಆ ಶಿಲ್ಪಿಯನ್ನು ಕಂಡು ತಾನು ಬಂದ ಉದ್ದೇಶವನ್ನು ತಿಳಿಸಿದನು. ಆಗ ಆ ಶಿಲ್ಪಿಯು "ವತ್ಸ, ಆ ಕಥೆ ಬಹಳ ವಿಸ್ಮಯಕರವಿದೆ. ಒಂದು ದಿನ ನಾನು ಕಟ್ಟಿಗೆ ತರಲು ಕಾಡಿಗೆ ತೆರಳಿದ್ದೆ. ಬಾಯಾರಿಕೆಯಾಗಲು ನೀರನ್ನು ಹುಡುಕುತ್ತ ಹೋದೆ. ಕಾಡಿನ ಮಧ್ಯೆ ಒಂದು ಸರೋವರವಿತ್ತು. ನೀರು ಕುಡಿದು ದಣಿವಾರಿಸಿಕೊಳ್ಳಲು ನಾನು ಆ ಕೆರೆಯ ದಂಡೆಯ ಮೇಲೆ ಒಂದು ಮರದ ತಂಪಿನಲ್ಲಿ ಕುಳಿತೆ. ನನಗೆ ಅಲ್ಲೇ ನಿದ್ದೆ ಹತ್ತಿತು. ನನಗೆ ಎಚ್ಚರವಾದಾಗ ಕತ್ತಲೆ ಪಸರಿಸಿತ್ತು. ರಾತ್ರಿ ದಾರಿ

ಗೊತ್ತಾಗುವಂತಿರಲಿಲ್ಲ. ಆದುದರಿಂದ ರಾತ್ರಿ ಅಲ್ಲೇ ಉಳಿದು ಮರುದಿನ ಮುಂಜಾನೆ ಊರಿಗೆ ತೆರಳಲು ನಿಶ್ಚಯಿಸಿದೆ. ಆದರೆ ಕಾಡು ಮೃಗಗಳ ಕೂಗುಗಳಿಂದ ನನಗೆ ನಿದ್ದೆಯೇ ಬರಲಿಲ್ಲ. ಮಧ್ಯರಾತ್ರಿ ಆ ಸರೋವರ ದಿಂದ ಅನುಪಮ ಸುಂದರಿಯಾದ ತರುಣಿಯೊಬ್ಬಳು ಮೇಲಕ್ಕೆ ಬಂದಳು. ಅಂತಹ ಸುಂದರಾಂಗಿಯನ್ನು ನಾನು ಕಂಡೇ ಇಲ್ಲ. ಅವಳ ಮೋರೆಯು ಪ್ರಕಾಶಮಾನವಾಗಿತ್ತು. ನಾನು ಕೈಗಳಿಂದ ಕಣ್ಣುಗಳನ್ನು ಮುಚ್ಚಿಕೊಂಡೆ. ಅವಳು ಆ ಕೆರೆಯ ದಂಡೆಯಲ್ಲಿ ಓಡುತ್ತ ಹಾಡುತ್ತ ಸ್ವಲ್ಪ ಹೊತ್ತಿನ ವರೆಗೆ ಆನಂದದಿಂದ ಕಾಲ ಕಳೆದಳು. ಆ ಮೇಲೆ ಅದೇ ಸರೋವರದಲ್ಲಿಳಿದು ಅದೃಶ್ಯಳಾದಳು. ಮರುದಿನ ನಾನು ಹಳ್ಳಿಗೆ ಬಂದು ಕಟ್ಟಿಗೆಯಿಂದಲೇ ಅವಳನ್ನು ಹೋಲುವ ಒಂದು ತೇಜೋಮೂರ್ತಿಯನ್ನು ನಿರ್ಮಿಸಿ ಆ ಸರೋವರದ ದಂಡೆಯಲ್ಲಿ ನಿಲ್ಲಿಸಿದೆ. ಅವಳು ಯಾರು ಎಂದು ನಾನೂ ಹೇಳಲಾರೆ" ಎಂದನು.

ವಿಜಯ ಕುಮಾರನ ಮಿತ್ರನು ಹಿಂತಿರುಗಿ ಬಂದು ಇದನ್ನು ರಾಜ ಪುತ್ರನಿಗೆ ತಿಳಿಸಿದನು. ಆ ಮೇಲೆ ಅವರಿಬ್ಬರೂ ಮುಂದೇನು ಮಾಡ ಬೇಕೆಂದು ಯೋಚಿಸಿದರು. ರಾಜಪುತ್ರನು ಆ ಸರೋವರದಲ್ಲಿ ಇಳಿದು ತಳದ ವರೆಗೂ ಮುಳುಗಿದನು. ಆಗ ಅವನಿಗೆ ಅಲ್ಲೊಂದು ಬಾಗಿಲು ತೋರಿತು. ಅದನ್ನು ತೆರೆದು ನೋಡಲು ಒಳಗೆ ತೆರಳುವ ಮೆಟ್ಟಲುಗಳು ಇದ್ದುವು. ಅದನ್ನಿಳಿದು ಹೋಗಲು ಒಂದು ದೊಡ್ಡ ಅರಮನೆಯೇ ಕಾಣಿ ಸಿತು. ಅದರ ಅಂಗಳದಲ್ಲಿ ಒಂದು ಹೂದೋಟವೂ ಇದ್ದಿತು. ಅಲ್ಲಿ ಹೂಗಳನ್ನು ಹೆಕ್ಕುತ್ತ ಅತ್ಯಂತ ಲಾವಣ್ಯವತಿಯಾದ ಆ ರಮಣಿ ನಿಂತಿದ್ದಳು. ರಾಜಪುತ್ರನು ಅವಳನ್ನು ಕಂಡ ಕೂಡಲೇ ಮೋಹದಿಂದ ಮೂರ್ಛೆ ಹೋದನು. ಅವನು ಬಿದ್ದ ಸಪ್ಪಳ ಕೇಳಿ ಅವಳು ಓಡಿಬಂದು ಶುಶ್ರೂಷೆ ಮಾಡಿದಳು. ಅವನ ಅಂಗ ಸೌಂದರ್ಯವನ್ನು ಕಂಡು ಅವಳೂ ಮೋಹಿತ ಳಾದಳು. ಇಬ್ಬರೂ ಗಾಂಧರ್ವ ವಿಧಿಯಿಂದ ವಿವಾಹವಾಗಲೊಪ್ಪಿದರು. ರಾಜಪುತ್ರನು ನೀರಿನ ಹೊರಗೆ ಬಂದು ತನ್ನ ಮಿತ್ರನನ್ನುದ್ದೇಶಿಸಿ "ನೀನು ಕೂಡಲೇ ಊರಿಗೆ ಹಿಂತೆರಳಿ ಚತುರಂಗ ಬಲವನ್ನು ತೆಗೆದುಕೊಂಡು ಬಾ. ಆ ಮೇಲೆ ಅವಳನ್ನು ಕರೆದುಕೊಂಡು ಹೋಗೋಣ'' ಎಂದು ನುಡಿದನು.

ಅವನ ಮಿತ್ರನು ಅದಕ್ಕೊಪ್ಪಿ ಕುದುರೆಯನ್ನೇರಿ ಹೊರಟು ಹೋದನು.

ವಿಜಯ ಕುಮಾರನು ಪುನಃ ನೀರಿನೊಳಗೆ ಮುಳುಗಿ ಆ ದೇವಾಂಗನೆಯಿದ್ದಲ್ಲಿ ಬಂದು ಅವಳೊಡನೆ ಸರ್ವಸುಖವನ್ನು ಅನುಭವಿಸುತ್ತ ಉಳಿದನು. ತನ್ನ ಮಿತ್ರನು ಚತುರಂಗ ಬಲದೊಂದಿಗೆ ಮರಳಿದನೇ ಎಂದು ನೋಡಲು ದಿನಂಪ್ರತಿ ತನ್ನ ರಮಣಿಯನ್ನು ಹೊರಗೆ ಕಳಿಸುತಿದ್ದನು. ಹೀಗೆ ಅನೇಕ ದಿನಗಳು ಉರುಳಿದರೂ ಅವನು ಬರಲಿಲ್ಲ. ಹೀಗಿರಲು ಒಂದು ದಿನ ಆ ಕಾಡಿಗೆ ಬೇಟೆಗಾಗಿ ಒಬ್ಬ ರಾಜನು ತನ್ನ ಸೈನಿಕರೊಂದಿಗೆ ಬಂದನು. ದೇಹಾಯಾಸದಿಂದ ನೀರನ್ನು ಹುಡುಕುತ್ತ ಅವರು ಆ ಕೆರೆಗೆ ಬಂದು ಅದರ ದಂಡೆಯಲ್ಲಿ ಡೇರೆ ಹೊಡೆದರು. ಅಷ್ಟರಲ್ಲಿ ಆ ನಾರೀಮಣಿಯು ನೀರಿನಿಂದ ಮೇಲೆ ಬಂದಳು. ಬೇಟೆಗೆ ಬಂದಿದ್ದ ರಾಜನ ಸೈನಿಕರು ನೋಡಿದರು. ಮತ್ತು ಅವಳು ಪುನಃ ನೀರಿಗೆ ಧುಮುಕುವ ಮೊದಲೇ ಅವರು ಅವಳನ್ನು ಹಿಡಿದು ತಮ್ಮ ರಾಜನ ಮುಂದೆ ನಿಲ್ಲಿಸಿದರು. ಅವಳ ರೂಪ ಲಾವಣ್ಯವನ್ನು ಕಂಡು ಬೆರಗಾದ ಆ ರಾಜನು ಅವಳನ್ನು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ ತನ್ನ ರಾಜ್ಯಕ್ಕೆ ಕರೆದುಕೊಂಡು ಹೋದನು. ಅವಳನ್ನು ನಾನಾರೀತಿ ಒಲಿಸಿಕೊಳ್ಳಲಾರಂಭಿಸಿದನು. ತನ್ನನ್ನು ಮದುವೆಯಾದರೆ ಉಳಿದ ರಾಣಿಯರನ್ನೆಲ್ಲ ತ್ಯಜಿಸಿ ಅವಳನ್ನೇ ಪಟ್ಟಮಹಿಷಿಯನ್ನಾಗಿ ಮಾಡುವೆನೆಂದು ನುಡಿದನು. ಆದರೆ ಅವಳು ಮಾತ್ರ ಒಪ್ಪಲಿಲ್ಲ.

ಇತ್ತ ವಿಜಯ ಕುಮಾರನ ಮಿತ್ರನು ಚತುರಂಗಬಲ ಸಮೇತನಾಗಿ ಆ ಕೆರೆಯ ದಂಡೆಗೆ ಬಂದನು. ಕೆರೆಯಲ್ಲಿಳಿದು ತನ್ನ ಮಿತ್ರನನ್ನು ಕಂಡನು. ಆದರೆ ಆ ದೇವಾಂಗನೆಯು ಬಾರದೇ ಇದ್ದುದರಿಂದ ರಾಜಪುತ್ರನು ತುಂಬಾ ದುಃಖಿತನಾಗಿ ಕಾಲಕಳೆಯುತಿದ್ದನು. ಇಬ್ಬರೂ ಕೆರೆಯ ಮೇಲೆ ಬಂದು ಅವಳನ್ನು ಹುಡುಕತೊಡಗಿದರು. ಆಗ ಬೇಟೆಗೆ ಬಂದ ರಾಜನು ತನ್ನ ಸೈನಿಕರೊಂದಿಗೆ ರಾಜಪುತ್ರಿಯೊಬ್ಬಳನ್ನು ಅಪಹರಿಸಿ ಪಲ್ಲಕಿಯಲ್ಲಿ ಕರೆದುಕೊಂಡು ಹೋದ ಸುದ್ದಿಯನ್ನು ಕಾಡಿನ ಅಂಚಿನಲ್ಲಿದ್ದ ಬೇಡರು ತಿಳಿಸಿದರು. ಕೂಡಲೇ ವಿಜಯ ಕುಮಾರನು ತನ್ನ ಮಿತ್ರನು ತಂದ ಚತುರಂಗ ಬಲದೊಂದಿಗೆ ಆ ಮಾರ್ಗವಾಗಿ ತೆರಳಿ ಆ ರಾಜ್ಯದ ಮೇಲೆ ದಂಡೆತ್ತಿ ಹೋದರು. ಯುದ್ಧದಲ್ಲಿ ಆ ರಾಜನು ಸೋತು ಹತನಾದನು. ವಿಜಯ ಕುಮಾರನು

ಅದೇ ರಾಜ್ಯದ ಅಧಿಪತಿಯಾಗಿ ತನ್ನ ಪ್ರೀತಿಪಾತ್ರಳಾದ ಸ್ತ್ರೀಯೊಂದಿಗೆ ಸಂತೋಷದಿಂದ ರಾಜ್ಯಭಾರ ಮಾಡುತ್ತ ಬಂದನು.

ಪ್ರತಾಪಸೇನನು ಈ ಕಥೆಯನ್ನು ಹೇಳಿದ ಮೇಲೆ ಅಜಿತ ರಾಜನ ಮೂರನೇ ಪುತ್ರನ ಗತಿ ಏನಾಯಿತೆಂದು ಕಲಾವತಿಯು ಕೇಳಿದಳು.. ಆಗ ಅವನ ಕಥೆಯನ್ನು ಪ್ರತಾಪಸೇನನು ಹೇಳಲಾರಂಭಿಸಿದನು.

---

## ೪೩ ಶೂರಸೇನನ ಕಥೆ

ಅಜಿತನ ಮೂರನೇ ಪುತ್ರನು ಶೂರಸೇನ ಅವನು ತನ್ನ ಸ್ವಪರಾಕ್ರಮದಿಂದ ನೆರೆಹೊರೆಯ ರಾಜರನ್ನು ಗೆದ್ದು ಅದನ್ನು ತನ್ನ ತಂದೆಯ ರಾಜ್ಯಕ್ಕೆ ಕೂಡಿಸಿದನು. ಅವನು ಬುದ್ಧಿವಂತನೂ ಪರಾಕ್ರಮಿಯೂ ಎಂದು ತಿಳಿದು ಅಜಿತನು ಅವನಿಗೆ ಯುವರಾಜ ಪಟ್ಟವನ್ನು ಕಟ್ಟಿದನು. ಆದರೆ ಸ್ವಲ್ಪಕಾಲ ಕಳೆದ ಮೇಲೆ ಅವನು ಅಮಿತ ದ್ರವ್ಯವನ್ನು ಹಿಡಿದುಕೊಂಡು ತುರಗಾರೂಢನಾಗಿ ವಿದೇಶಕ್ಕೆ ಪ್ರಯಾಣ ಬೆಳೆಸಿದನು. ಮಾರ್ಗಮಧ್ಯೆ ಕಳ್ಳರು ಅವನನ್ನು ತಡೆದರು. ಅವನಲ್ಲಿದ್ದ ದ್ರವ್ಯವನ್ನೆಲ್ಲ ಕಿತ್ತುಕೊಂಡು ಜೀವಸಹಿತ ಮಾತ್ರ ಬಿಟ್ಟುಬಿಟ್ಟರು. ಶೂರಸೇನನು ಸರ್ವಸ್ವವನ್ನು ಕಳೆದುಕೊಂಡನು. ಅಲ್ಲಿಂದ ಸಮೀಪದ ಮತ್ತೊಂದು ರಾಜ್ಯಕ್ಕೆ ತೆರಳಿ ಅರಸನನ್ನು ಕಂಡು ತನ್ನ ದುರವಸ್ಥೆಯನ್ನು ತಿಳಿಸಿದನು. ಆಗ ಆ ರಾಜನು ಕರುಣೆತೋರಿ ಅವನನ್ನು ತನ್ನ ಒಬ್ಬ ಸರದಾರನನ್ನಾಗಿ ನೇಮಿಸಿಕೊಂಡನು.

ಈ ರೀತಿ ಸ್ವಲ್ಪ ಕಾಲ ಕಳೆಯಿತು. ಒಂದು ದಿನ ಒಬ್ಬ ರೈತನು ಬಂದು ಹುಲಿಯೊಂದು ಬಹಳ ಹಾವಳಿ ಎಬ್ಬಿಸಿದೆಯೆಂದು ದೂರುಕೊಟ್ಟನು. ಅನೇಕ ದನಕರುಗಳನ್ನು ಅದು ಮುರಿದಿದೆಯೆಂದೂ ಅದನ್ನು ಕೊಲ್ಲಬೇಕೆಂದೂ ಅರಿಕೆ ಮಾಡಿಕೊಂಡನು. ಆಗ ಆ ರಾಜನು ತನ್ನ ಆಸ್ಥಾನದಲ್ಲಿದ್ದ ಶೂರ ಸರದಾರರನ್ನು ಕರೆದು ಆ ಹುಲಿಯನ್ನು ಕೊಲ್ಲುವಂತೆ ಅಜ್ಞಾಪಿಸಿದನು. ಒಬ್ಬೊಬ್ಬರೇ ಸರದಾರರು ಆ ಕಾಡಿಗೆ ತೆರಳಿ ಹುಲಿಯನ್ನು

ಕೊಲ್ಲಲೆತ್ನಿಸಿದರು. ಆದರೆ ಒಬ್ಬರಿಂದಲೂ ಆಗಲಿಲ್ಲ. ಕೆಲವು ಸರದಾರರು ಪ್ರಾಣವನ್ನೂ ಕಳೆದುಕೊಂಡರು. ಅದನ್ನು ಕಂಡ ಆ ರಾಜನು ವ್ಯಸನಪಟ್ಟು ಶೂರಸೇನನ್ನು ಕಳಿಸಿದನು. ಶೂರಸೇನನು ಆ ಕಾಡಿಗೆ ತೆರಳಿ ಹೊಂಚಿ ಕುಳಿತು ಹುಲಿಯನ್ನು ಹೊಡೆದನು. ಬಾಣವು ಅದರ ಮರ್ಮಸ್ಥಾನಕ್ಕೆ ತಾಗಿದುದರಿಂದ ಅದು ಪ್ರಾಣ ತೊರೆಯಿತು. ಆಗ ಶೂರಸೇನನು ಅದರ ಬಾಲ, ಮೂಗು, ಕಿವಿ, ಮೀಸೆಗಳನ್ನೆಲ್ಲ ಕಡಿದು ರಾಜಧಾನಿಗೆ ಹೊರಟನು.

ಆದರೆ, ಶೂರಸೇನನು ರಾಜಧಾನಿಗೆ ಬರಲು ಸ್ವಲ್ಪ ಕಾಲವಿಲಂಬವಾಯಿತು. ಅವನು ಹುಲಿಯನ್ನು ಕೊಂದ ದಿನವೇ ಆ ರಾಜನ ಮಂತ್ರಿಯು ಆ ಕಾಡಿಗೆ ಬೇಟೆಗೆ ತೆರಳಿದ್ದನು. ಶೂರಸೇನನು ಕೊಂದ ಹುಲಿಯು ದೇಹವು ಪೊದೆಯಲ್ಲಿತ್ತು. ಅದು ಜೀವಂತ ಹುಲಿಯೆಂದೇ ಭಾವಿಸಿ ಆ ಮಂತ್ರಿಯು ಅನೇಕ ಬಾಣಗಳನ್ನೆಸೆದನು. ಎಷ್ಟು ಹೊಡೆದರೂ ಅದು ಏಳಲಿಲ್ಲ. ಅದು ತನ್ನ ಬಾಣದಿಂದಲೇ ಪ್ರಾಣಬಿಟ್ಟಿತೆಂದು ನಂಬಿ ಆ ಹುಲಿಯನ್ನು ಹೊರಿಸಿಕೊಂಡು ಬಂದು ರಾಜನಿಗೆ ತೋರಿಸಿದನು. ಮತ್ತು ಅವನಿಂದ ಅಮಿತ ಉಡುಗೊರೆಯನ್ನು ಪಡೆದನು. ಆದರೆ ಸ್ವಲ್ಪ ಸಮಯದೊಳಗೆ ಶೂರಸೇನನೂ ರಾಜಸಭೆಗೆ ಬಂದನು. ಮತ್ತು ಹುಲಿಯನ್ನು ಕೊಂದವನು ತಾನೆಂದು ನುಡಿದನು. ಅದನ್ನು ಕೇಳಿ ರಾಜನಿಗೆ ಸಿಟ್ಟುಬಂದಿತು. ಶೂರಸೇನನ ಮಾತನ್ನು ಅವನು ನಂಬಲಿಲ್ಲ. ಮಂತ್ರಿಯೇ ಹುಲಿಯನ್ನು ಕೊಂದಿದ್ದಾಗಿ ನುಡಿದನು. ಅದರ ಮೃತದೇಹವನ್ನು ತೋರಿಸಿದನು. ಆಗ ಶೂರಸೇನನು ರಾಜನಿಗೆ ಆ ಹುಲಿಯು ಬಾಲ, ಮೂಗು, ಮೀಸೆ, ಕಿವಿಗಳು ಇಲ್ಲದಿದ್ದುದನ್ನು ತೋರಿಸಿ ತಾನು ಅವನ್ನು ತಂದಿರುವೆನೆಂದು ಹೇಳಿ, ಆಳನ್ನು ಕರೆಸಿ ಅವನೇ ಹೊತ್ತು ತಂದಿದ್ದ ಆ ವಸ್ತುಗಳನ್ನು ತೋರಿಸಿದನು. ಆಗ ರಾಜನು ಮಂತ್ರಿಯನ್ನು ಗದರಿಸಿ ಅವನಿಗೆ ಕೊಟ್ಟಿದ್ದ ಅಮಿತ ಉಡುಗೊರೆಗಳನ್ನೆಲ್ಲ ಸೆಳೆದುಕೊಂಡು ಶೂರಸೇನನಿಗೆ ಕೊಡಿಸಿದನು. ಆದರೆ ಇದರಿಂದ ಮಂತ್ರಿ ಮತ್ತು ಶೂರಸೇನರೊಳಗೆ ವೈಮನಸ್ಸು ಹುಟ್ಟಿತು. ಅದು ದಿನದಿಂದ ದಿನಕ್ಕೆ ಬೆಳೆದು ದ್ವೇಷವಾಗಿ ಕುದಿಯಿತು. ಆ ರಾಜ್ಯದಲ್ಲಿದ್ದರೆ ತನ್ನ ಪ್ರಾಣಕ್ಕೆ ಗಂಡಾಂತರವಿದೆಯೆಂದು ಶೂರಸೇನನು ಅರಿತು ರಾಜನಿಗೆ

ಹೇಳಿ ಅವನ ಅಪ್ಪಣೆಯನ್ನು ಪಡೆದುಕೊಂಡು ಅವನಿಂದ ಅಪಾರ ದ್ರವ್ಯ ಸಹಾಯವನ್ನು ಪಡೆದು ತನ್ನ ಊರಿಗೆ ಹೊರಟನು.

ಆದರೆ ಮಾರ್ಗ ಮಧ್ಯೆ ಒಬ್ಬ ಕಳ್ಳನು ಅವನನ್ನು ಕಂಡನು. ಶೂರ ಸೇನನ ರೂಪ ಹಾಗೂ ಅವನ ಕೈಯಲ್ಲಿದ್ದ ಗಂಟನ್ನು ಕಂಡು ಇವನು ದೊಡ್ಡ ಧನಿಕನಿರಬೇಕೆಂದು ಊಹಿಸಿದನು. ಹೇಗಾದರೂ ಮಾಡಿ ಆ ಗಂಟನ್ನು ಅಪ ಹರಿಸಬೇಕೆಂಬ ಇಚ್ಛೆಯಿಂದ ಶೂರಸೇನನ ಬೆನ್ನಹಿಂದೆಯೇ ಬಂದನು. ಆದರೆ ಎಲ್ಲಿಯೂ ಅಡವಿಯೇ ಇರಲಿಲ್ಲ. ಆದುದರಿಂದ ಆ ಕಳ್ಳನ ಆಶೆ ಈಡೇರಲಿಲ್ಲ. ಬಹಳ ದೂರ ಹೋದ ಮೇಲೆ ಇನ್ನೊಬ್ಬ ಕಳ್ಳನು ಇದಿರಾ ದನು. ಆ ಕಳ್ಳನಿಗೂ ಇವನಿಗೂ ಸಂಚು. ಆದುದರಿಂದ ಮೊದಲನೆಯ ವನು ತನ್ನ ಉದ್ದೇಶವನ್ನು ತಿಳಿಸಿದನು. ಆಗ ಎರಡನೆಯವನು ಮೊದಲನೆ ಯವನಿಗೆ ಅಪಾರ ದ್ರವ್ಯವನ್ನು ಕೊಟ್ಟು ಅವನನ್ನು ಹಿಂದೆಕಳಿಸಿದನು. ಮತ್ತು ತಾನು ಶೂರಸೇನನ್ನು ಹಿಂಬಾಲಿಸಿದನು. ಆದರೆ ಅವನಿಗೂ ಶೂರಸೇನ ನನ್ನು ಸುಲಿಯಲು ಅವಕಾಶವೇ ಸಿಗಲಿಲ್ಲ. ಅಷ್ಟರಲ್ಲಿ ಮೂರನೇ ಕಳ್ಳನ್ನ ಇದಿರಾದನು. ಅವನು ಎರಡನೇ ಕಳ್ಳನಿಗೆ ಅಪಾರ ಚಿನ್ನಾಭರಣಗಳನ್ನು ಕೊಟ್ಟರೆ ತಾನು ಶೂರಸೇನನನ್ನು ಬೆಂಬತ್ತಿ ಹೋದನು.

ಸೂರ್ಯನು ಮುಳುಗಿದನು. ಕತ್ತಲಾಯಿತು. ಶೂರಸೇನನ ಕುದುರೆ ಮೆಲ್ಲಗೆ ಹೋಗಲಾರಂಭಿಸಿತು. ಆಗ ಹಿಂದಿನಿಂದ ಮೂರನೇ ಕಳ್ಳನು ಬಂದು ತನ್ನ ಕುದುರೆಯನ್ನು ಬೇಗನೇ ಓಡಿಸುತ್ತ ಬಂದನು. ಶೂರಸೇನ ನನ್ನು ಕಂಡು ಅವನೊಡನೆ ಸ್ನೇಹದಿಂದ ಮಾತನಾಡಿಸಿದನು. ಶೂರಸೇನನು ಹಸಿವೆ ನೀರಡಿಕೆಗಳಿಂದ ಬಳಲಿದ್ದ. ಅವನಿಗೂ ಆಶ್ರಯ ಬೇಕಾಗಿತ್ತು. ಆದುದರಿಂದ ಆ ಕಳ್ಳನು ತನ್ನ ಮನೆಗೆ ಕರೆದ ಕೂಡಲೇ ಕಪಟವನ್ನರಿಯದೆ ಅವನಹಿಂದೆ ಹೋದನು. ಶೂರಸೇನನು ಬಂದ ಕೂಡಲೇ ದಿವ್ಯಭೋಜನ ತಯಾರಿಸಲು ದಾಸಿಗೆ ಕರೆದು ಹೇಳಿದನು. ನದಿಗೆ ಸ್ನಾನಕ್ಕೆ ತೆರಳಿದ್ದ ತನ್ನ ಮಗಳನ್ನು ಕರೆದುತರಲು ಆ ಕಳ್ಳನು ನದಿಯಕಡೆ ಹೋದನು.

ಇತ್ತ ಶೂರಸೇನನು ಕೈಕಾಲು ಮೋರೆ ತೊಳೆದುಕೊಂಡು ಕುಳಿತಿರಲು ಅಡಿಗೆಯ ದಾಸಿಯು ಅವನನ್ನು ನೋಡಿದಳು. ಶೂರಸೇನನ ರೂಪಲಾವಣ್ಯ ಕಂಡು ಅವಳು ಮುಗ್ಧಳಾದಳು. ಅವಳ ಕಣ್ಣಿಂದ ನೀರು ಸುರಿಯತೊಡ

ಗಿತು. ಅದು ಶೂರಸೇನನ ದೃಷ್ಟಿಗೆ ನಿಲುಕಲು, ಅವನು ಆ ದಾಸಿಯೊಡನೆ ಮಾತನಾಡಿದನು. ಆಗ ಆ ದಾಸಿಯು "ಸ್ವಾಮಿ, ಈ ಮನೆಯ ಯಜಮಾನನು ದೊಡ್ಡ ಕಳ್ಳನು. ದಾರಿಯಲ್ಲಿ ಹೋಗುವವರನ್ನೆಲ್ಲ ಮನೆಗೆ ಕರೆದು ಕೊಂಡುಬರುವನು. ಅವರಿಗೆ ದಿವ್ಯವಾದ ಊಟ ಹಾಕುವನು. ಅವರ ಸೇವೆಗಾಗಿ ತನ್ನ ಮಗಳನ್ನೇ ನೇಮಿಸುವನು. ಅವಳು ತಂದೆಗಿಂತಲೂ ಬುದ್ಧಿವಂತಳು. ಅತಿಥಿಯು ವಿಶ್ರಾಂತಿಗೆ ತೆರಳಿದಾಗ ಅವಳೂ ಅವನನ್ನು ಅನುಸರಿಸುವಳು. ಅವನಿಗೆ ಶೀತೋದಕ, ಮದ್ಯ, ಹಾಗೂ ತಾಂಬೂಲಗಳನ್ನು ಕೊಡುವಳು. ಅವುಗಳಲ್ಲಿ ಅಮಲಿನ ವಸ್ತುಗಳನ್ನು ಹಾಕುವಳು. ಅತಿಥಿಯ ಕೋಣೆಯಲ್ಲೇ ಅವಳೂ ಮಲಗಿಕೊಳ್ಳುವಳು. ಅತಿಥಿಗೆ ನಿದ್ದೆ ಬಂದಕೂಡಲೇ ಹೊರಗೆಬಂದು ತಂದೆಗೆ ತಿಳಿಸುವಳು. ಆಗ ಅವನು ತೆರಳಿ ಅವನನ್ನು ಎತ್ತಿ ಒಂದು ಬಾವಿಯಲ್ಲಿ ದೂಡಿ, ಇದ್ದ ಸಂಪತ್ತನ್ನೆಲ್ಲ ಅಪಹರಿಸುವನು. ಆದುದರಿಂದ ಅವನು ಮಗಳನ್ನು ಕರೆದುಕೊಂಡು ಬರುವುದರೊಳಗೆ ನೀನು ಓಡಿಹೋಗು" ಎಂದಳು.

ದಾಸಿಯ ಮಾತನ್ನು ಕೇಳಿದ ಕೂಡಲೇ ಶೂರಸೇನನು ತನ್ನ ಗಂಟನ್ನು ಕುದುರೆ ಮೇಲೆ ಹೇರಿ, ತಾನೂ ಏರಿ ನಾಗಾಲೋಟದಿಂದ ಓಡಿದನು. ಸ್ವಲ್ಪ ಹೊತ್ತಿನ ಮೇಲೆ ಆ ಕಳ್ಳನು ತನ್ನ ಮಗಳೊಂದಿಗೆ ಹಿಂತಿರುಗಿದನು. ಆದರೆ ಅತಿಥಿಯು ಇಲ್ಲದುದನ್ನು ಕಂಡು ರೇಗಿ ದಾಸಿಯನ್ನು ಕೇಳಿದನು. "ಅಡಿಗೆ ಮಾಡುವದರಲ್ಲೇ ನಾನು ತಲ್ಲೀನಳಾಗಿದ್ದೇನೆ. ಹೊರಗೆ ಹಣಿಕಿ ಕೂಡಾ ನೋಡಿಲ್ಲ" ಎಂದವಳು ಹೇಳಿದಳು. ಆ ಕೂಡಲೇ ಆ ಕಳ್ಳನೂ ಶ್ರೇಷ್ಠವಾದ ಕುದುರೆಯನ್ನು ಹತ್ತಿ, ಶೂರಸೇನನ ಕುದುರೆಯ ಕಾಲಹೆಜ್ಜೆಗಳನ್ನು ಗುರುತಿಸಿ, ಅದೇ ದಾರಿಯಲ್ಲಿ ನುಗ್ಗಿದನು. ಶೂರಸೇನನು ಒಂದು ನದಿಯನ್ನು ದಾಟಲಾಗದೆ ಅದರ ದಂಡೆಯ ಒಂದು ವೃಕ್ಷದ ಬಳಿ ಕುಳಿತಿದ್ದನು. ಅವನೊಂದಿಗೆ ಇನ್ನಿತರ ಮೂರು ನಾಲ್ಕು ಜನರೂ ಕುಳಿತಿದ್ದರು. ಕಳ್ಳನು ಇಳಿದು ಆ ಅಪರಿಚಿತರನ್ನುದ್ದೇಶಿಸಿ, "ಸ್ವಾಮಿ, ಈತನು ನನ್ನ ಅಳಿಯನು. ಇಷ್ಟುರವರೆಗೆ ಪರದೇಶದಲ್ಲೇ ಇದ್ದನು. ಇಂದೇ ಮನೆಗೆ ಬಂದಿದ್ದ. ಮನೆಗೆ ಬಂದಾಗ ಹೆಂಡತಿ ಇರಲಿಲ್ಲವೆಂದು ರೇಗಿ ಹೊರಟು ಬಂದಿದ್ದಾನೆ. ಅವಳು ಮನೆಯಲ್ಲಿ ಅಳುತ್ತಾ ಕುಳಿತಿದ್ದಾಳೆ.

ಗಂಡನು ಮನೆಗೆ ಹಿಂತಿರುಗದಿದ್ದರೆ ನದಿಗೆಬಿದ್ದು ಪ್ರಾಣತ್ಯಾಗ ಮಾಡುವ ದಾಗಿ ಹಟಹಿಡಿದಿದ್ದಾಳೆ. ನನ್ನ ಮನೆಯಲ್ಲಿ ಇರಲು ಇವನಿಗೆ ಇಷ್ಟವಿಲ್ಲದೇ ಇದ್ದರೆ ಬಂದು ತನ್ನ ಹೆಂಡತಿಯನ್ನಾದರೂ ಕರೆದುಕೊಂಡು ಹೋಗಲಿ'' ಎಂದು ಹೇಳಿದನು. ಆಗ ಶೂರಸೇನನೊಂದಿಗಿದ್ದ ಮೂವರೂ ಆ ಕಳ್ಳನ ಮಾತನ್ನೇ ನಂಬಿ ಶೂರಸೇನನ್ನು ನಿಂದಿಸಿದರು. ಅವನ ಮಾತನ್ನೊ ಕೇಳ ಲಿಲ್ಲ. ಉಪಾಯವಿಲ್ಲದೆ ಶೂರಸೇನನು ಕಳ್ಳನೊಂದಿಗೆ ಹಿಂತಿರುಗಿದನು.

ಆದರೆ ಕಳ್ಳನ ಮಗಳು ಶೂರಸೇನನನ್ನು ನೋಡಿದ ಮೇಲೆ ನಿಜವಾ ಗಿಯೂ ಮೋಹಿತಳಾದಳು. ಅಂತಹ ತಾರುಣ್ಯ, ಹಾಗೂ ತೇಜಸ್ಸುಳ್ಳ ಸುಂದರಾಂಗನನ್ನು ಅವಳು ಕಂಡಿರಲಿಲ್ಲ. ಅವಳೂ ಯೌವನಕ್ಕೆ ಕಾಲಿಟ್ಟ ವಳು. ಮದನಶರ ಪೀಡಿತಳು. ಆದುದರಿಂದ ಶೂರಸೇನನ್ನು ಕಂಡ ಕೂಡಲೇ ಅವಳು ಪ್ರೇಮಾಸಕ್ತಳಾದಳು. ಅವನನ್ನು ಹೇಗಾದರೂ ಮಾಡಿ ಉಳಿಸಿ ಅವನೊಡನೆ ಕಾಮಸುಖವನ್ನು ಪಡೆಯಬೇಕೆಂಬ ಇಚ್ಛೆಯೂ ಉದ ಯಿಸಿತು. ಆದುದರಿಂದ ಶೂರಸೇನನು ಊಟವಾದ ಮೇಲೆ ಅವಳು ಅವನು ವಿಶ್ರಮಿಸಿದ್ದ ಕೋಣೆಗೆ ಬಂದು ಅವನೊಡನೆ ಮೃದುಮಧುರವಾಗಿ ಮಾತ ನಾಡತೊಡಗಿದಳು. ಆದರೆ ಶೂರಸೇನನು ಅವಳ ಮಾತಿಗೊಂದಕ್ಕೂ ಮರು ಳಾಗಲಿಲ್ಲ. "ನಿನ್ನ ತಂದೆಯಂತೆ ನೀನೂ ಮಾತಿನಿಂದ ನನ್ನನ್ನು ಮರುಳು ಗೊಳಿಸಿ, ನನ್ನನ್ನು ಕೊಂದು ನನ್ನ ದ್ರವ್ಯವನ್ನು ಅಪಹರಿಸಲು ಬಂದಿರುವಿ ಯಲ್ಲ! ನಿನ್ನೊಡನೆ ಏಕೆ ಮಾತನಾಡಬೇಕು?'' ಎಂದು ಹೇಳಿದನು. ಕಳ್ಳನ ಮಗಳು ತನ್ನ ತಂದೆಯ ಮೋಸವನ್ನೆಲ್ಲ ಹೇಳಿದಳು ಆದರೆ ತಾನು ಹಾಗೆ ಮಾಡಲಾರೆನೆಂದೂ ತನ್ನನ್ನು ಮದುವೆ ಮಾಡಿಕೊಂಡು ಇಲ್ಲಿಂದ ಕರೆದು ಕೊಂಡು ಹೋಗಬೇಕೆಂದೂ ಪ್ರಾರ್ಥಿಸಿದಳು. ಆಗ ಶೂರಸೇನನು "ನೀನು ಪಾಪಕರ್ಮವನ್ನು ಮಾಡಿರುವೆ. ಅಲ್ಲದೆ ನಿನ್ನ ಶೀಲದಲ್ಲೂ ನನ್ನ ನಂಬಿಗೆ ಇಲ್ಲ'' ಎಂದು ನುಡಿದನು. ಅದನ್ನು ಕೇಳಿ ಅವಳು "ರಾಜಪುತ್ರ, ಇಷ್ಟರ ವರೆಗೆ ಅನೇಕ ಜನರನ್ನು ಕೊಲ್ಲಲು ನಾನು ತಂದೆಗೆ ನೆರವಾಗಿದ್ದೆ. ಅದು ಪಾಪಕರ್ಮವೆಂದು ನನಗೂ ಗೊತ್ತಾಗಿದೆ. ಅದಕ್ಕಾಗಿ ಪಶ್ಚಾತ್ತಾಪಪಡು ತ್ತೇನೆ. ದೇವರೇ ನನ್ನ ಅಪರಾಧಗಳನ್ನು ಮನ್ನಿಸು ಎಂದು ನಾನು ಅವ ನನ್ನು ಪ್ರಾರ್ಥಿಸುತ್ತೇನೆ. ಇನ್ನು ಮುಂದೆ ನಾನು ಹಾಗೆ ಮಾಡುವವಳಲ್ಲ.

ನಾನು ಇಷ್ಟರವರೆಗೂ ಯಾವ ಪರಪುರುಷರನ್ನೂ ಮೋಹಿಸಿಲ್ಲ. ಪುರುಷರ ಸಂಸರ್ಗದ ಅನುಭವವೂ ಇಲ್ಲ" ಎಂದು ಹೇಳಿ ದೇವರಾಣೆ ಮಾಡಿ ಪ್ರತಿಜ್ಞೆ ಮಾಡಿದಳು. ಶೂರಸೇನನು ಅವಳ ಮಾತುಗಳನ್ನು ನಂಬಿ ಅವಳನ್ನು ಪರಿಗ್ರಹಿಸಿದನು. ಇಬ್ಬರೂ ಪ್ರೇಮಾಂಧರಾಗಿ ಗಾಢಾಲಿಂಗನ ಮಾಡಿದರು. ಆ ಮೇಲೆ ಕಳ್ಳನನ್ನು ಹೇಗೆ ಕೊಲ್ಲಬೇಕು ಮತ್ತು ಅಲ್ಲಿಂದ ಹೇಗೆ ಪಾರಾಗಿ ಹೋಗಬೇಕೆಂದು ಅವರಿಬ್ಬರೂ ಯೋಚಿಸತೊಡಗಿದರು.

ತನ್ನ ಮಗಳ ಆಗಮನವನ್ನೇ ನಿರೀಕ್ಷಿಸುತ್ತ ಕಳ್ಳನು ಕುಳಿತಿದ್ದನು. ಸರ್ವಸಾಧಾರಣವಾಗಿ ಎಲೆ ಅಡಿಕೆಯಲ್ಲಿ ಅಮಲು ಅಥವಾ ವಿಷಕೂಡಿಸಿ ಕೊಡುತ್ತಿರುವುದು ಆವನ ಪದ್ಧತಿ. ಒಮ್ಮೊಮ್ಮೆ ಪ್ರಜ್ಞೆತಪ್ಪಿದ ಪಾಂಥಿಕನನ್ನು ರಾತ್ರಿಯೇ ಅವನು ಬಾವಿಗೆ ಎಸೆಯುತಿದ್ದ. ಆ ದಿನ ಅವನೂ ತುಂಬಾ ಬಳಲಿದ್ದ. ನಿದ್ದೆಯನ್ನು ಸಹಿಸುತ್ತ ಮಗಳನ್ನು ನಿರೀಕ್ಷಿಸುತಿದ್ದ ಕಳ್ಳನಿಗೆ ನಿಜವಾಗಿಯೂ ನಿದ್ದೆಯೇ ಬಂದಿತು ಮಧ್ಯರಾತ್ರಿ ಅವನ ಮಗಳು ಬಂದಳು. ತಂದೆ ಮಲಗಿರುವುದನ್ನು ಕಂಡು ಸದ್ದಿಲ್ಲದೆ ತೆರಳಿ ತನ್ನ ಕಠಾರಿಯಿಂದ ಅವನನ್ನು ಇರಿದಳು. ಆ ಮೇಲೆ ಕೈಗೆ ಸಿಕ್ಕಿದ ಅಮೂಲ್ಯ ಚಿನ್ನಾಭರಣ ಹಾಗೂ ದ್ರವ್ಯವನ್ನು ಸಂಗ್ರಹಿಸಿ ಮತ್ತೊಂದು ಕುದುರೆಯನ್ನೇರಿ ಶೂರಸೇನನೊಂದಿಗೆ ಅಲ್ಲಿಂದ ಪಲಾಯನಮಾಡಿದಳು.

ಪ್ರತಾಪಸೇನನು ಹೇಳಿದ ಈ ಕತೆಯನ್ನು ಕೇಳಿ ಕಲಾವತಿಯು "ರಾಜಪುತ್ರ, ಅಜಿತನ ಮತ್ತೊಬ್ಬ ಪುತ್ರನ ಕಥೆಯನ್ನು ಕೇಳಲು ಆತುರವುಳ್ಳವಳಾಗಿದ್ದೇನೆ'' ಎಂದಳು. ಆಗ ವೀರಸೇನನು "ರಾಜಪುತ್ರಿಯೇ, ಅವನು ಧರ್ಮಬುದ್ಧಿಯುಳ್ಳವನು. ತನ್ನ ದ್ರವ್ಯದಿಂದ ಅನ್ನಛತ್ರ, ಕೆರೆ, ಕಾಲುವೆಗಳನ್ನು ಕಡಿಸಿದನು. ಅವನ ಜೀವನದಲ್ಲಿ ಇನ್ನಾವ ರೋಮಾಂಚಕಾರೀ ಘಟನೆಯು ನಡೆಯಲಿಲ್ಲ. ಅವನ ಹೆಂಡತಿಯೂ ಪರಮಧಾರ್ಮಿಕಳು. ಸ್ತ್ರೀಯರು ದುಶ್ಶೀಲೆಯರಾದರೆ ಎಲ್ಲ ಕಷ್ಟಗಳೂ ಬರುತ್ತವೆ" ಎಂದು ನುಡಿದನು. ಆಗ ಪದ್ಮಾವತಿಯು "ರಾಜಪುತ್ರ, ಮಾತುಮಾತಿಗೆ ಸ್ತ್ರೀಯರನ್ನು ಹೀಗಳೆಯುತಿದ್ದೀಯಲ್ಲ. ಪುರುಷರ ದುಷ್ಟತನಕ್ಕೆ ಅಳತೆಯಿಲ್ಲ. ಅಂತಹ ಅನೇಕ ಕಥೆಗಳು ನನಗೆ ಗೊತ್ತಿವೆ'' ಎಂದಳು. ಒಂದನ್ನು ಕೇಳಲು ಪ್ರತಾಪಸೇನನು ಆತುರಪಟ್ಟುದುದರಿಂದ ಅವಳು ಹೇಳತೊಡಗಿದಳು.

# ೪೪ ಸೆಟ್ಟಿಯ ಹೆಂಡತಿಯ ಕಥೆ

ಪ್ರಾಚೀನ ಕಾಲದಲ್ಲಿ ಮಗಧರಾಜ್ಯದಲ್ಲಿ ಗೋಪಾಲಸೆಟ್ಟಿ ಎಂಬೊಬ್ಬ ಧನಿಕನಿದ್ದನು. ಅವನು ತಾರುಣ್ಯದಲ್ಲಿ ದುರ್ವ್ಯಸನಗಳಿಗೆ ತುತ್ತಾಗಿ ತನ್ನ ಸಂಪತ್ತನ್ನೆಲ್ಲ ಸೂರೆಮಾಡಿದನು. ಮದ್ಯಪಾನ ಹಾಗೂ ವೇಶ್ಯಾಗಮನ ಗಳಿಂದ ಹಣವೆಲ್ಲ ಮುಗಿಯಿತು. ವೃದ್ಧಾಪ್ಯ ಬಂದಿತು. ಆಗ ಅವನು ಶ್ರೀಮಂತರೊಬ್ಬರ ಮಗಳನ್ನು ಮದುವೆಯಾಗಲು ಬಯಸಿದನು. ಗೋಪಾ ಲಸೆಟ್ಟಿಗೆ ಬಡತನ ಬಂದಿದೆಯೆಂದು ಆ ಹೆಣ್ಣಿನ ಕಡೆಯವರು ತಿಳಿದಿದ್ದಿಲ್ಲ. ಹಿಂದಿನ ಕುಲಕೀರ್ತಿಗಳನ್ನೇ ಕೇಳ್ಇ ಮರುಳಾಗಿ ಮೋಹಿನಿಯಂತಹ ತಮ್ಮ ಮಗಳನ್ನು ಆ ಮುದುಕನಿಗೆ ಮದುವೆ ಮಾಡಿಕೊಟ್ಟರು.

ಆದರೆ ಸ್ವಲ್ಪ ಕಾಲ ಕಳೆದ ಮೇಲೆ ಗೋಪಾಲಶೆಟ್ಟಿಗೆ ಜೀವನ ನಿರ್ವಾಹ ನಡೆಸುವುದೇ ದುಸ್ತರವಾಗಿ ಪರಿಣಮಿಸಿತು. ಒಂದು ದಿನ ಗೋಪಾಲ ಸೆಟ್ಟಿಯು ತನ್ನ ಹೆಂಡತಿಯನ್ನು ಕರೆದು "ಈ ನಗರದ ಪೋಲೀಸ ಅಧಿಕಾರಿಗೆ ನಾನು ಹಿಂದೆ ಬಹಳ ಸಹಾಯನೀಡಿದ್ದೆ. ಅದನ್ನು ಅವನು ಮರೆತಿರಲಿಕ್ಕಿಲ್ಲ. ನಾನಾಗಿ ಹೋಗಿ ಕೇಳಲು ಲಜ್ಜೆಯೆನಿಸುತ್ತದೆ. ನೀನು ಅವನನ್ನು ಕಂಡು ಸಹಾಯವನ್ನು ಕೇಳು. ನಮ್ಮ ಇಂದಿನ ಹೀನಸ್ಥಿತಿಯನ್ನು ಹೇಳು. ಒಂದು ವೇಳೆ ಅವನು ಸಹಾಯಕೊಡದಿದ್ದರೆ ಸಾಲವನ್ನಾದರೂ ತಾ" ಎಂದು ಹೇಳಿ ದನು. ಪತಿಯ ಅನುಜ್ಞೆಯಂತೆ ಅವಳು ಪೋಲೀಸ್ ಅಧಿಕಾರಿಯ ಮನೆಗೆ ತೆರಳಿದಳು. ಮತ್ತು ತನ್ನ ಗಂಡನು ಹೇಳಿದುದನ್ನು ಅವನಿಗೆ ತಿಳಿಸಿದಳು ಆ ಪೋಲೀಸ್ ಅಧಿಕಾರಿಯು ಸ್ತ್ರೀಲಂಪಟನು. ಅವಳ ರೂಪಾತಿಶಯಕ್ಕೆ ಮರುಳಾದನು. ಅವಳೊಡನೆ ಸಲಿಗೆಯಿಂದ ಮಾತನಾಡುತ್ತ ಏಕಾಂತ ವಾದ ಕೋಣೆಗೆ ಕರೆದೊಯ್ದು ತನ್ನ ಮನೋಭಿಲಾಷೆಯನ್ನು ಅವಳಿಗೆ ತಿಳಿ ಸಿದನು. ತನ್ನ ಇಚ್ಛೆಯನ್ನು ಪೂರ್ಣಗೊಳಿಸಿದ್ದೇ ಆದರೆ ಸಾವಿರಾರು ವರಹ ಗಳನ್ನು ಕೊಡುವುದಾಗಿಯೂ ಆಶೆತೋರಿಸಿದನು.

ಸೆಟ್ಟಿಯ ಹೆಂಡತಿ ದುಶ್ಶೀಲೆಯಲ್ಲ. ಆದುದರಿಂದ ಅವಳು ಒಪ್ಪಲಿಲ್ಲ. ಇಂಥ ದುಷ್ಕರ್ಮಕ್ಕೆಳಸಿ ಕುಲಕ್ಕೆ ಕಲಂಕವನ್ನು ತರಲಾರೆನೆಂದು ನುಡಿದಳು. ಆಗ ಆ ಪೋಲೀಸ್ ಅಧಿಕಾರಿಯು "ಸುಂದರಿಯೇ, ನೀನು ನಿನ್ನ ಪತಿ

ಯನ್ನು ತೊರೆದು ನನ್ನ ಮನೆಗೆ ಬಂದಿರಬೇಕೆಂದು ನಾನು ಹೇಳಲಿಲ್ಲ. ಆಗಾಗ ಬಂದು ನನ್ನ ಮನಸ್ಸನ್ನು ಸಂತೋಷಪಡಿಸಿದರೆ ಸಾಕು. ನಿನ್ನ ಪತಿಯು ಮುದುಕನು. ಅವನೊಡನೆ ನಿನಗೆ ಯಾವ ರತಿಸುಖವೂ ಸಿಗಲಾರದು. ನಾನು ನಿನಗೆ ತುಂಬಾ ಸುಖಕೊಡಬಲ್ಲೆ" ಎಂದು ನುಡಿದನು. ಅದನ್ನು ಕೇಳಿ ಸೆಟ್ಟಿಯ ಹೆಂಡತಿ ಸಿಟ್ಟಾಗಿ ತನ್ನ ಮನೆಗೆ ಹಿಂತಿರುಗಿದಳು. ಆ ಮೇಲೆ ಸೆಟ್ಟಿಯು ಅವಳನ್ನು ತನ್ನ ಹಿಂದಿನ ಮಿತ್ರನಾಗಿದ್ದ ನ್ಯಾಯಾಧೀಶನಲ್ಲಿ ಕಳಿಸಿದನು. ಸೆಟ್ಟಿಯ ಹೆಂಡತಿ ನ್ಯಾಯಾಧೀಶನಲ್ಲಿ ಬಂದು ಪೋಲೀಸ್ ಅಧಿಕಾರಿಯ ದುರ್ವರ್ತನೆಯನ್ನೂ ತಿಳಿಸಿದಳು. ಆದರೆ ಆ ನ್ಯಾಯಾಧೀಶನೂ ಸೆಟ್ಟಿಯ ಹೆಂಡತಿಯ ರೂಪಲಾವಣ್ಯವನ್ನು ಕಂಡು ಮೋಹಿತನಾದನು. ಅವನು ಅವಳನ್ನು ಏಕಾಂತ ಕೋಣೆಗೆ ಕರೆದೊಯ್ದು "ನೀನು ನನ್ನ ಮನಸ್ಸನ್ನು ಆಹ್ಲಾದಗೊಳಿಸಿದರೆ ಆ ಪೋಲೀಸ್ ಅಧಿಕಾರಿಯಿಂದ ಹಣ ತೆಗೆಸಿಕೊಡುತ್ತೇನೆ. ನಾನೂ ನಿನಗೆ ಸಹಾಯಸಲ್ಲಿಸುತ್ತೇನೆ. ಇದನ್ನು ನೀನು ಯಾರಿಗೂ ಹೇಳಬೇಡ. ನನ್ನಂತಹ ನ್ಯಾಯಾಧೀಶನೇ ನಿನ್ನಂತಹ ಸಾಮಾನ್ಯ ಸ್ತ್ರೀಗೆ ಒಲಿದಿರುವುದು ಅದು ನಿನ್ನ ಪೂರ್ವಜನ್ಮದ ಪುಣ್ಯವೆಂದೇ ತಿಳಿದುಕೋ" ಎಂದು ಹೇಳಿದನು. ಆದರೆ ಅವಳು ಅವನ ಮಾತನ್ನು ಆಲಿಸದೆ ತನ್ನ ಮನೆಗೆ ಹಿಂತಿರುಗಿದಳು.

ಆ ಮೇಲೆ ಸೆಟ್ಟಿಯು ಅವಳನ್ನು ಆ ನಗರದ ಮಂತ್ರಿಯ ಮನೆಗೆಕಳಿಸಿದನು. ಅವಳು ಮಂತ್ರಿಯನ್ನು ಕಂಡು ಹಿಂದೆ ನಡೆದ ಘಟನೆಗಳೆಲ್ಲವನ್ನೂ ಹೇಳಿ ತಾವಾದರೂ ದಯೆದೋರಿ ಕಷ್ಟದಲ್ಲಿ ಸಿಲುಕಿರುವ ನಮಗೆ ಸಹಾಯ ನೀಡಿರಿ" ಎಂದು ಪ್ರಾರ್ಥಿಸಿದಳು. ಆದರೆ ಆ ಮಂತ್ರಿ ಕೂಡಾ ಸೆಟ್ಟಿಯ ಹೆಂಡತಿಯನ್ನು ಬಯಸಿದ. "ನೀನು ನನ್ನೊಂದಿಗೇ ಇರು. ಆ ಮುದುಕನನ್ನು ಕಟ್ಟಿಕೊಂಡು ಸುಖವೇನು? ನನ್ನ ಮನೆಯಲ್ಲಿದ್ದರೆ ಯಾವ ಸುಖ ಸೌಭಾಗ್ಯಕ್ಕೂ ಕೊರತೆಯಾಗಲಾರದು'' ಎಂದು ನುಡಿದನು. ಅದನ್ನು ಕೇಳಿ ಅವಳು ತುಂಬಾ ಚಿಂತಾಕ್ರಾಂತಳಾದಳು. ಯಾರನ್ನು ಕಂಡರೂ ಅವಳ ಕಷ್ಟಪರಿಹಾರವಾಗಲಿಲ್ಲ. ರಸ್ತೆಯಲ್ಲಿ ಬಿದ್ದ ಮಾಂಸದ ತುಂಡನ್ನು ಕುಕ್ಕುವ ಕಾಗೆಗಳಂತೆ ಎಲ್ಲರೂ, ಅವಳ ಸೌಂದರ್ಯವನ್ನು ಸವಿಯಲು ಆತುರಪಡುವರೇ: ಇವರೆಲ್ಲರಿಗೂ ಒಂದು ಪಾಠಕಲಿಸಬೇಕೆಂದು ಸೆಟ್ಟಿ

ಹೆಂಡತಿ ನಿರ್ಧರಿಸಿದಳು.

ಮರುದಿನ ಅವಳು ಅಂದವಾದ ಬಟ್ಟೆಬರೆಗಳನ್ನು ತೊಟ್ಟುಕೊಂಡು, ಸರ್ವಾಲಂಕಾರ ಧರಿಸುತ್ತ ಪೋಲೀಸ್ ಅಧಿಕಾರಿಯ ಮನೆಗೆ ತೆರಳಿದಳು. ಅವನನ್ನು ಕಂಡಕೂಡಲೇ ಮುಗುಳು ನಗುತ್ತ "ನಿಮ್ಮಮಾತಿಗೆ ಒಪ್ಪುತ್ತೇನೆ. ಮತ್ತೇನು ಮಾಡೋಣ. ನಿಮಗೆ ನನ್ನ ಮೇಲೆ ಪ್ರೇಮವಾದಂತೆ ನಾನು ನಿಮ್ಮ ಮೇಲೆ ಮೋಹಿತಳಾಗಿದ್ದೇನೆ. ಆ ವೃದ್ಧ ಗಂಡನಿಂದ ಯಾವ ಸುಖವೂ ಇಲ್ಲ. ನೀವು ಇಂದು ರಾತ್ರಿ ಎರಡು ಪ್ರಹರವಾದ ಮೇಲೆ ಬನ್ನಿರಿ" ಎಂದು ಹೇಳಿದಳು. ಪೋಲೀಸ್ ಅಧಿಕಾರಿಯು ಉಬ್ಬಿ ಆಗಲೇ ಅವಳು ಬೇಡಿದಷ್ಟು ಹಣವನ್ನು ಕೊಟ್ಟು ಕಳಿಸಿದನು. ಅದರಂತೆ ಅವಳು ನ್ಯಾಯಾಧೀಶನಿದ್ದಲ್ಲೂ ತೆರಳಿ ಅವನನ್ನು ಮೂರು ಪ್ರಹರ ರಾತ್ರಿ ಬರುವಂತೆ ತಿಳಿಸಿದಳು. ಮಂತ್ರಿಗೆ ನಾಲ್ಕನೇ ಪ್ರಹರ ರಾತ್ರಿಯಲ್ಲಿ ಬರಲು ಹೇಳಿದಳು. ಅವಳು ಸೂಚಿಸಿದಂತೆ ಪೋಲೀಸ್ ಅಧಿಕಾರಿಯು ಹೊತ್ತಿಗೆ ಸರಿಯಾಗಿ ಮನೆಗೆ ಬಂದನು. ಸೆಟ್ಟಿಯ ಹೆಂಡತಿಯು ಅವನನ್ನು ಸ್ವಾಗತಿಸಿ, ಮೃದು ಮಧುರ ಮಾತುಗಳಿಂದ ಅವನ ಮನಸ್ಸನ್ನು ಸಂತೋಷಪಡಿಸತೊಡಗಿದಳು. ಅವನೊಡನೆ ಸರಸ ಮಾತುಕತೆಗಳಲ್ಲಿ ತೊಡಗಿದ ಸ್ವಲ್ಪ ಹೊತ್ತಿನ ಮೇಲೆ ನ್ಯಾಯಾಧೀಶನು ಬಂದು ಬಾಗಿಲು ತಟ್ಟಿದನು. ನ್ಯಾಯಾಧೀಶನು ಬಂದ ಸುದ್ದಿ ಕೇಳಿ ಸೆಟ್ಟಿಯ ಹೆಂಡತಿಯು ಗಾಬರಿಯಾದವಳಂತೆ ವರ್ತಿಸಿದಳು. ಯಾವ ಕಾರ್ಯಕ್ಕೆ ಬಂದರೋ ಎಂದು ಚಡಪಡಿಸಿದಳು. ಪೋಲೀಸ್ ಅಧಿಕಾರಿಯ ಕೈಕಾಲುಗಳೂ ನಡುಗತೊಡಗಿದುವು. ಹೇಗಾದರೂ ಮಾಡಿ ನನ್ನ ಮರ್ಯಾದೆಯನ್ನು ಉಳಿಸಬೇಕೆಂದು ಅವನು ಬೇಡಿಕೊಂಡನು. ಸೆಟ್ಟಿಯ ಹೆಂಡತಿಯು ಅವನನ್ನು ಒಂದು ಪೆಟ್ಟಿಗೆಯಲ್ಲಿ ಅಡಗಿಸಿಟ್ಟು ಬೀಗ ಹಾಕಿದಳು. ಅದರಂತೆ ನ್ಯಾಯಾಧೀಶನ ಮಾನ ಉಳಿಸಲು ಮತ್ತೊಂದು ಪೆಟ್ಟಿಗೆಯಲ್ಲ ಅವನನ್ನು ಅಡಗಿಸಿಟ್ಟಳು. ಮಂತ್ರಿಯು ಸರಸೋಕ್ತಿಗಳಲ್ಲಿ ಕಾಲ ಕಳೆಯಲಾರಂಭಿಸಿದಾಗ ಪೇಟೆಗೆ ತೆರಳಿದ್ದ ಅವಳ ವೃದ್ಧಪತಿ ಬಂದನು. ಆಗ ಮಂತ್ರಿಯನ್ನೂ ಅವಳು ಇನ್ನೊಂದು ಪೆಟ್ಟಿಗೆಯಲ್ಲಿ ಬಚ್ಚಿಟ್ಟಳು.

ಆ ಮೇಲೆ ಅವಳು ರಾಜನಿದ್ದಲ್ಲಿ ತೆರಳಿ ಪೋಲೀಸ್ ಅಧಿಕಾರಿ, ನ್ಯಾಯಾಧೀಶ ಮತ್ತು ಮಂತ್ರಿ ಈ ತ್ರಿವರ್ಗದವರ ದುರ್ಬುದ್ಧಿ, ದುರ್ನಡತೆ

ಗಳನ್ನು ಹೇಳಿದಳು. ರಾಜನು ಮೊದಲು ಅವಳ ಮಾತನ್ನು ನಂಬಲಿಲ್ಲ. ಆಗ ಅವಳು ತನ್ನ ಮನೆಯಿಂದ ಆ ಮೂರೂ ಪೆಟ್ಟಿಗೆಗಳನ್ನು ತರಿಸಿ ರಾಜ ಸಭೆಯಲ್ಲೇ ಬೀಗ ತೆಗೆದಳು. ರಾಜನು ಆ ತ್ರಿವರ್ಗದವರನ್ನು ಕಂಡು ಕೋಪದಿಂದ ಅವರನ್ನು ಜೈಲಿಗಟ್ಟಿದನು. ಆ ಸೆಟ್ಟಿಯ ಹೆಂಡತಿಗೆ ಉಡು ಗೊರೆಗಳನ್ನು ಕೊಟ್ಟು ಅವಳ ಮನೆಗೆ ಕಳಿಸಿದನು. ಆಮೇಲೊಂದು ದಿನ ರಾಜನು ವೇಷಪಲ್ಲಟ ಮಾಡಿಕೊಂಡು ಸೆಟ್ಟಿಯ ಹೆಂಡತಿಯೊಬ್ಬಳೇ ಇದ್ದ ಸಂದರ್ಭ ನೋಡಿ ಅವಳ ಮನೆಗೆ ಬಂದನು. ಅವಳನ್ನು ಕಂಡು ತನ್ನ ನಿಜ ಗುರುತನ್ನು ಅವಳಿಗೆ ತಿಳಿಸಿ ತಿಳಿಸಿ "ಮೋಹನಾಂಗಿಯೇ, ನಿನ್ನ ಬುದ್ಧಿ ಚಾತುರ್ಯವನ್ನು ನೋಡಿ ನಾನು ಮೆಚ್ಚಿದ್ದೇನೆ. ನೀನು ಅಂತಃಪುರದಲ್ಲಿ ರಲು ಯೋಗ್ಯಳು. ನೀನು ನನ್ನ ಅರಮನೆಗೆ ಬಾ. ನಿನ್ನನ್ನು ಬಹಳ ಪ್ರೀತ್ಯಾದರದಿಂದ ನಡೆಸಿಕೊಳ್ಳುತ್ತೇನೆ. ನಿನಗೆ ಯಾವ ಕೊರತೆಯೂ ಒದ ಗದಂತೆ ನೋಡಿಕೊಳ್ಳುತ್ತೇನೆ" ಎಂದು ನುಡಿದನು. ಸೆಟ್ಟಿಯ ಹೆಂಡತಿ ಮನದಲ್ಲೇ ದುಃಖಿತಳಾದಳು. ಆದರೆ ಹೊರಗೆ ಅದನ್ನು ತೋರಿಸಿಕೊಳ್ಳದೆ ತನ್ನ ಭಾಗ್ಯದ ಬಾಗಿಲು ತೆರೆಯಿತೆಂದು ಸಂತೋಷವ್ಯಕ್ತಪಡಿಸಿದಳು. ಎರಡು ಮೂರು ದಿನಗಳ ಅವಕಾಶಕೊಟ್ಟರೆ ತಾನೇ ಗುಪ್ತವಾಗಿ ಅರಮನೆಗೆ ಬಂದು ಬಿಡುವೆಂದು ತಿಳಿಸಿದಳು. ರಾಜನು ಒಪ್ಪಿ ಹೊರಟು ಹೋದನು. ಸೆಟ್ಟಿಯು ಬಂದಕೂಡಲೇ ಅವಳು ಆ ವಿಷತ್ತನ್ನು ತಿಳಿಸಿದಳು. ಅಂದೇ ರಾತ್ರಿ ಅವರಿ ಬ್ಬರೂ ಆ ನಗರವನ್ನು ತ್ಯಜಿಸಿಹೋದರು.

"ರಾಜಪುತ್ರ, ಆ ಸೆಟ್ಟಿಯ ಹೆಂಡತಿ ರೂಪವಂತಳಿದ್ದುದರಿಂದ ಎಷ್ಟು ಕಷ್ಟಕ್ಕೊಳಗಾದರು ? ಸ್ತ್ರೀಯರು ಸುಂದರಿಯರಿದ್ದರೆ ಎಲ್ಲ ಪುರುಷರ ಕಣ್ಣೂ ಅವರ ಮೇಲೆ ಬೀಳುತ್ತವೆ. ಸ್ತ್ರೀಯರು ಕಾಮನಾಟದ ಒಂದು ಗೊಂಬೆ ಎಂದು ಪುರುಷರು ತಿಳಿದಿರುವಂತೆ ತೋರುತ್ತದೆ. ಪುರುಷರಲ್ಲಿ ಪಾಪಬು ದ್ಧಿಯೇ ಹೆಚ್ಚು" ಎಂದು ನುಡಿದಳು. ಕಲಾವತಿಯ ಈ ಮಾತುಗಳನ್ನು ಕೇಳಿ ಪ್ರತಾಪಸೇನನು "ರಾಜಪುತ್ರಿಯೇ, ಸ್ತ್ರೀಯರೇ ಕಪಟಿಗಳು, ಕುಕರ್ಮಿ ಗಳು. ಅಂತಹ ಒಂದು ಕಥೆ ನನಗೆ ಗೊತ್ತಿದೆ" ಎಂದು ನುಡಿದನು. ಕಲಾ ವತಿಯು ಅದನ್ನು ಕೇಳಲು ಬಯಸಿದುದರಿಂದ ಪ್ರತಾಪಸೇನನು ಹೇಳತೊ ಡಗಿದನು.

# ೪೫ ಗೋಪಾಲದಾಸನ ಕಥೆ

ಪ್ರಾಚೀನ ಕಾಲದಲ್ಲಿ ಕಾಶ್ಮೀರ್ ದೇಶದಲ್ಲಿ ಧನಿಕನೊಬ್ಬನಿದ್ದನು. ಅವನಿಗೆ ಗೋಪಾಲದಾಸನೆಂಬ ಮಗನಿದ್ದನು. ತಂದೆಯು ಲೋಭತನ ದಿಂದ ಅಪಾರ ಹಣವನ್ನು ಗಳಿಸಿದ್ದನು. ಅವನು ಮರಣಕಾಲಕ್ಕೆ ಮಗ ನನ್ನು ಕರೆಸಿ "ಮಗನೇ, ನಾನು ಕಷ್ಟದಿಂದ ಹಣಗಳಿಸಿ ನಿನಗಾಗಿ ಶೇಖರಿಸಿ ಟ್ಟಿದ್ದೇನೆ. ನೀನು ದುಂದುವೆಚ್ಚಮಾಡಬೇಡ. ಒಂದು ವೇಳೆ ದುರ್ದೈವ ದಿಂದ ನಿನ್ನ ಹಣವೆಲ್ಲ ಮುಗಿದರೆ, ಈ ಮನೆಯ ನೆಲಮಾಳಿಗೆಯಲ್ಲಿ ಒಂದು ಸಮಾಧಿ ಇದೆ. ಅಲ್ಲಿ ತೆರಳಿ ಮಲಗು. ನಿನ್ನ ದುಃಖವೆಲ್ಲ ಪರಿಹಾರವಾಗು ವುದು" ಎಂದು ಹೇಳಿ ಪ್ರಾಣಬಿಟ್ಟನು.

ಗೋಪಾಲದಾಸನು ವ್ಯಾಪಾರ-ವ್ಯವಹಾರ ಮಾಡುತ್ತ ಕಾಲಕಳೆಯ ಲಾರಂಭಿಸಿದನು. ಆದರೆ ಅವನ ತಂದೆ ಅಪಾರದ್ರವ್ಯ ಗಳಿಸಿಟ್ಟುದುದು ಅನೇಕರಿಗೆ ತಿಳಿದಿದ್ದಿತು. ಆದುದರಿಂದ ದುರ್ವ್ಯಸನಿಗಳು ಗೋಪಾಲದಾಸನ ಸ್ನೇಹ ಬೆಳೆಸಿದರು. ಮತ್ತು ಅದರಿಂದ ಗೋಪಾಲದಾಸನಿಗೂ ದುರ್ವ್ಯಸನ ಗಳು ಅಂಟಿಕೊಂಡುವು. ತತ್ಪರಿಣಾಮವಾಗಿ ಅವನ ಕೈಯಲ್ಲಿದ್ದ ಹಣವೆಲ್ಲ ವೆಚ್ಚವಾಯಿತು. ಕೊನೆಗೆ ತನ್ನ ಮಿತ್ರ ವ್ಯಾಪಾರಿಗಳೊಡನೆ ಸಾಲಬೇಡಲು ಆರಂಭಿಸಿದನು. ಒಂದುದಿನ ಸಾಹುಕಾರನೊಬ್ಬನು ಗೋಪಾಲದಾಸನನ್ನು ಅಪಮಾನ ಮಾಡಿದನು. ಇದರಿಂದ ಅವನು ನೊಂದುಕೊಂಡು, ಇನ್ನು ಬದುಕಿ ಪ್ರಯೋಜನವಿಲ್ಲವೆಂದು ತಿಳಿದು ತಂದೆ ಹೇಳಿದ ನೆಲಮಾಳಿಗೆಗೆ ತೆರ ಳಿದನು. ಆದರೆ ಅವನು ಅಲ್ಲಿ ಹೊಕ್ಕಕೂಡಲೇ ಅಪಾರ ಮುತ್ತು-ರತ್ನಗಳು ಅವನ ಕಣ್ಣಿಗೆ ಬಿದ್ದುವು. ಆಗ ಅವನು ಧೈರ್ಯತಂದುಕೊಂಡು ಅವುಗಳನ್ನು ಹೊತ್ತುತಂದು, ವಿವೇಕದಿಂದ ಜೀವನ ಮಾಡಲಾರಂಭಿಸಿದನು. ತನ್ನ ಹಿಂ ದಿನ ದುರ್ವ್ಯಸನಗಳನ್ನೆಲ್ಲ ತೊರೆದನು.

ಆದರೆ ಕೆಲವು ವ್ಯಾಪಾರಿಗಳಿಗೆ ಗೋಪಾಲದಾಸನ ಶ್ರೀಮಂತಿಕೆಯ ಮೇಲೆ ವಕ್ರದೃಷ್ಟಿ ಬಿದ್ದಿತು. ಹೇಗಾದರೂಮಾಡಿ ಉಪಾಯದಿಂದ ಅದನ್ನು ಅಪಹರಿಸಬೇಕೆಂದು ಅವರು ನಿಶ್ಚಯಿಸಿದರು. ಆದುದರಿಂದ ಅವರು ಗೋಪಾಲದಾಸನನ್ನು ಒಪ್ಪಿಸಿ ಪಾಲಿನಲ್ಲಿ ವ್ಯಾಪಾರ-ವ್ಯವಹಾರ ಮಾಡಲು

ಆರಂಭಿಸಿದರು. ವಿದೇಶಗಳೊಡನೆ ಕೂಡಾ ಅವರು ವ್ಯಾಪಾರ ಮಾಡತೊಡಗಿದರು. ಹಡಗುಗಳು ಅವರ ಸರಕುಗಳನ್ನು ಹೇರಿಕೊಂಡು ಪ್ರಯಾಣ ಮಾಡುತ್ತಿದ್ದುವು. ಒಮ್ಮೆ ಅವರೂ ಹಡಗುಗಳೊಂದಿಗೆ ಹೊರಟರು. ಆದರೆ ಗೋಪಾಲದಾಸನ ಪಾಲುಗಾರರಿಗೆ ಅವನ ಮೇಲೆ ನಿಜವಾದ ಪ್ರೀತಿ ಇರಲಿಲ್ಲ. ಹೇಗಾದರೂ ಮಾಡಿ ಅವನನ್ನು ಕೊಲ್ಲಬೇಕೆಂದು ಅವರು ಚಿಂತಿಸುತ್ತಿದ್ದರು. ಆದುದರಿಂದ ಒಂದು ರಾತ್ರಿ ಅವರು ಗೋಪಾಲದಾಸನನ್ನು ಎತ್ತಿ ಸಮುದ್ರಕ್ಕೆ ಒಗೆದರು. ಮತ್ತು ಆ ಕೂಡಲೇ ಅವನು ಸಮುದ್ರಕ್ಕೆ ಜಾರಿಬಿದ್ದನೆಂದು ಕೂಗತೊಡಗಿದರು. ಆ ಕೂಗನ್ನು ಕೇಳಿ ನಾವಿಕರು ಎಚ್ಚತ್ತು ಸಣ್ಣ ದೋಣಿಗಳನ್ನು ಇಳಿಸಿ ಗೋಪಾಲದಾಸನನ್ನು ಹುಡುಕತೊಡಗಿದರು. ಎಲ್ಲಿಯೂ ಅವನು ಕಾಣಿಸಲೇ ಇಲ್ಲ. ಆದರೆ ಗೋಪಾಲದಾಸನು ಸಮುದ್ರದಲ್ಲಿ ಮುಳುಗಲಿಲ್ಲ. ಅವನು ಸಮುದ್ರಕ್ಕೆ ಬಿದ್ದ ಕೂಡಲೇ ಈಸತೊಡಗಿದನು. ಅಲ್ಲಿಗೆ ಸಮುದ್ರದ ದಂಡೆಯೂ ಹತ್ತಿರವಿದ್ದಿತು. ಅವನು ದಡಸೇರಿ ಸಮೀಪದ ನಗರಕ್ಕೆ ತೆರಳಿದನು.

ಇತ್ತ ಹಡಗವೂ ಆ ನಗರದ ಬಂದರದಲ್ಲೀ ರೇವು ಹಾಕಿತು. ಗೋಪಾಲದಾಸನ ಪಾಲುಗಾರರು ತಮ್ಮ ಸರಕುಗಳನ್ನು ನಗರಕ್ಕೆ ತಂದು ದೊಡ್ಡ ದೊಡ್ಡ ವ್ಯಾಪಾರಿಗಳಿಗೆ ಮಾರಾಟ ಮಾಡಿದರು. ಗೋಪಾಲದಾಸನು ಅವರನ್ನು ಕಂಡು ಆ ನಗರದ ನ್ಯಾಯಾಧೀಶನ ಮುಂದೆ ದೂರುಹೇಳಿದನು. ನ್ಯಾಯಾಧೀಶನು ಆ ವ್ಯಾಪಾರಿಗಳನ್ನು ಕರೆಸಿ ಕೇಳಲು, ತಮಗೆ ಗೋಪಾಲದಾಸನ ಗುರುತು-ಪರಿಚಯವಿಲ್ಲವೆಂದೇ ಅವರು ವಾದಿಸಿದರು. ಗೋಪಾಲದಾಸನ ಗುರುತು ಹೇಳುವವರು ಯಾರೂ ದೊರೆಯಲಿಲ್ಲ. ಹೀಗಾಗಿ ನ್ಯಾಯಾಧೀಶನು ಅವನ ಮಾತನ್ನು ಕಿವಿಯಲ್ಲಿ ಹಾಕಿಕೊಳ್ಳಲಿಲ್ಲ. ಖಟ್ಲೆ ಬಿದ್ದುಹೋಯಿತು. ವ್ಯಾಪಾರಿಗಳು ಹಡಗಹತ್ತಿ ಬೇರೆ ಊರಿಗೆ ಹೊರಟುಹೋದರು. ಗೋಪಾಲದಾಸನು ನಿರುಪಾಯನಾದನು. ತನ್ನ ಕೈಬೆರಳಲ್ಲಿದ್ದ ರತ್ನದುಂಗುರವನ್ನು ಮಾರಾಟಮಾಡಿ ಅಂದವಾದ ಬಟ್ಟೆಬರೆಗಳನ್ನು ಕೊಂಡುಕೊಂಡನು. ಆ ಮೇಲೆ ಆ ನಗರಕ್ಕೆ ಸಮೀಪವಿದ್ದ ಒಬ್ಬ ರಾಜನ ಬಳಿ ತೆರಳಿ, ತನ್ನನ್ನು ಯಾವುದಾದರೊಂದು ಕೆಲಸಕ್ಕೆ ನೇಮಿಸಿಕೊಳ್ಳಬೇಕೆಂದು ಪ್ರಾರ್ಥಿಸಿದನು. ರಾಜನು ಕರುಣೆಯಿಂದ ಅವನಿಗೆ ಉಚಿತವಾದ

ಒಂದು ಉದ್ಯೋಗವನ್ನು ಕೊಟ್ಟನು.

ಹೀಗೆ ಇರುತ್ತಿರಲು ಒಂದು ದಿನ ಗೋಪಾಲದಾಸನು ಮನೋವ್ಯಾಕುಲದಿಂದ ಆ ರಾಜನ ಉದ್ಯಾನವನಕ್ಕೆ ಪ್ರವೇಶಿಸಿ ಅತ್ತಿತ್ತ ಸಂಚರಿಸಿದನು. ಹೂಗಳ ಪರಿಮಳಕ್ಕೂ ಆ ತಂಗಾಳಿಗೂ ಅವನು ಮೈಮರೆತನು. ಒಂದು ಮರದಡಿ ವಿಶ್ರಮಿಸಿದ. ಅವನಿಗೆ ಅಲ್ಲೇ ಕಣ್ಣು ಜೊಂಪು ಹತ್ತಿತು, ಮತ್ತು ನಿದ್ದೆ ಬಂದಿತು. ಅವನಿಗೆ ನಿದ್ದೆ ಬಂದ ಸಮಯಕ್ಕೆ ಸರಿಯಾಗಿ ರಾಜಪುತ್ರಿಯು ತನ್ನ ಸಖಿಯರೊಂದಿಗೆ ಆ ವನಕ್ಕೆ ಬಂದಳು. ಉದ್ಯಾವನದಲ್ಲಿ ಯಾರೋ ಒಬ್ಬನು ಮಲಗಿರುವುದನ್ನು ಕಂಡು ರೇಗಿ ಅವನನ್ನು ಹಿಡಿದುತರಲು ಆಜ್ಞಾಪಿಸಿದಳು. ಗೋಪಾಲದಾಸನು ಎಚ್ಚತ್ತು ಅಲ್ಲಿಂದ ಓಡಿಹೋಗಲು ಯತ್ನಿಸಿದನು. ಆದರೆ ಸಖಿಯರು ಬಿಡಲಿಲ್ಲ. ಅವನನ್ನು ಎಳೆದುತಂದು ರಾಜಪುತ್ರಿಯ ಮುಂದೆ ನಿಲ್ಲಿಸಿದರು. ಆಗ ಗೋಪಾಲದಾಸನು "ರಾಜಪುತ್ರಿಯೇ, ನನ್ನ ಅಪರಾಧವನ್ನು ಮನ್ನಿಸು'' ಎಂದು ಪ್ರಾರ್ಥಿಸಿದನು. "ನೀನು ಸ್ತ್ರೀವೇಷವನ್ನು ಹಾಕಿಕೊಂಡು ನನ್ನೊಂದಿಗೆ ಬರುವುದಾದರೆಮಾತ್ರ ನಿನ್ನ ಅಪರಾಧವನ್ನು ಮನ್ನಿಸುತ್ತೇನೆ" ಎಂದು ಹೇಳಿದಳು. ಗೋಪಾಲದಾಸನು ಒಪ್ಪಿದನು.

ಸ್ತ್ರೀ ವೇಷದಿಂದ ರಾಜಪುತ್ರಿಯೊಡನೆ ಹೋದ ಗೋಪಾಲದಾಸನ ಮೇಲೆ ರಾಜಪುತ್ರಿಯೇ ಮೋಹಪಟ್ಟಳು. ರಾತ್ರಿ ಅವನೊಡನೆ ಸುರತ ಸುಖವನ್ನು ಅನುಭವಿಸತೊಡಗಿದಳು. ಉದ್ಯಾನವನಕ್ಕೂ ಅವನನ್ನು ಕರೆದೊಯ್ದು ಜಲಕ್ರೀಡೆ ಆಡುತಿದ್ದಳು. ದಿನದಿಂದ ದಿನಕ್ಕೆ ಈ ಮೋಹ ಹೆಚ್ಚಾಯಿತು. ಅವನನ್ನು ಅರೆಗಳಿಗೆಯೂ ಬಿಟ್ಟಿರಲಾರದಾದಳು. ಹಗಲಿಗೆ ಅವನು ಪುರುಷವೇಷದಲ್ಲೇ ತನ್ನ ಕೆಲಸಕ್ಕೆ ತೆರಳುತಿದ್ದ. ರಾತ್ರಿ ಆದ ಕೂಡಲೇ ಸ್ತ್ರೀ ವೇಷಧರಿಸಿ ರಾಜಪುತ್ರಿ ಇದ್ದಲ್ಲಿ ತೆರಳುತಿದ್ದನು. ಆದರೆ ಹಗಲೂ ಅವನ ವಿರಹವನ್ನು ಸಹಿಸುವುದು ರಾಜಪುತ್ರಿಗೆ ಕಷ್ಟವಾಗಿ ಪರಿಣಮಿಸಿತು. ಇದನ್ನು ಅವಳು ತನ್ನ ವಿಶ್ವಾಸಕ್ಕೆ ಪಾತ್ರಳಾದ ದಾಸಿಯೊಬ್ಬಳೊಡನೆ ಹೇಳಿಕೊಂಡಳು. ಆಗ ಆ ದಾಸಿಯು "ಅಮ್ಮಾ, ನೀವಿಬ್ಬರೂ ಈ ಅರಮನೆ ತ್ಯಜಿಸಿಹೋದರೆ ನಿಮಗೆ ಅಖಂಡ ಸುಖದೊರೆಯುತ್ತದೆ" ಎಂದಳು. ಅದನ್ನು ಸಾಧಿಸುವ ಬಗೆಹೇಗೆಂದು ರಾಜಪುತ್ರಿಯು ಕೇಳಲು

"ಅಮ್ಮಾ, ನೀವು ರೋಗಪೀಡಿತರಾವರಂತೆ ನಟಿಸಿರಿ. ನಾನು ಒಂದು ಗುಳಿಗೆ ಯನ್ನು ಕೊಡುತ್ತೇನೆ. ಅದನ್ನು ತಿಂದರೆ ಶ್ವಾಸೋಚ್ಛ್ವಾಸ ಕೂಡಾ ನಿಂತು ನೀನು ಸತ್ತುಹೋದಿಯೆಂದೇ ಅವರೆಲ್ಲ ತಿಳಿಯುತ್ತಾರೆ. ಸತ್ತಮೇಲೆ ಶವ ವನ್ನು ನನ್ನ ಪ್ರಿಯ ಸಖಿಯ ವಶ ಒಪ್ಪಿಸಬೇಕೆಂದೂ, ಶವವನ್ನು ಹೂಳ ಬೇಕೆಂದೂ ನೀನು ನಿನ್ನ ಅಂತಿಮ ಇಚ್ಛೆ ಇರುವುದಾಗಿ ತಿಳಿಸು. ನಾನು ಇನ್ನೊಂದು ಗುಳಿಗೆಯಿಂದ ನಿನ್ನನ್ನು ಜೀವಗೊಳಿಸುತ್ತೇನೆ" ಎಂದಳು. ಅವಳು ಹೇಳಿದಂತೆಯೇ ಎಲ್ಲವೂ ಸುಸಾರಾಗವಾಗಿ ನಡೆಯಿತು. ದಾಸಿಯು ರಾಜಪುತ್ರಿಯನ್ನು ತನ್ನ ಮನೆಗೆ ಕರೆದುಕೊಂಡುಬಂದು ರಕ್ಷಿಸತೊಡಗಿದಳು.

ಇತ್ತ ರಾಜಪುತ್ರಿಯು ಮರಣಹೊಂದಿದಳೆಂಬ ವಾರ್ತೆಕೇಳಿ ಗೋಪಾ ಲದಾಸನು ಭ್ರಾಂತನಾದನು. ಅವನು ಉದ್ಯೋಗವನ್ನು ತೊರೆದು ಸನ್ಯಾಸಿ ಯಾಗಿ ಹೊರಟುಹೋದನು. ದಾಸಿಯು ಅವನನ್ನು ಹುಡುಕಿ ತನ್ನ ಮನೆಗೆ ಕರೆದುಕೊಂಡು ಬರಲು ಮಾಡಿದ ಯತ್ನಗಳೆಲ್ಲ ವಿಫಲವಾದುವು. ರಾಜ ಪುತ್ರಿಯ ಮರಣದ ಸುದ್ದಿ ಕೇಳಿ ದುಃಖದಿಂದಲೇ ಅವನು ಹೊರಟುಹೋದ ನೆಂದು ಅವರೆಲ್ಲರೂ ತಿಳಿದುಕೊಂಡರು. ಇದರಿಂದ ರಾಜಪುತ್ರಿಗೂ ಅತಿ ವ್ಯಸನವಾಯಿತು. ಇತ್ತ ರಾಜವೈಭವವೂ ಉಳಿಯಲಿಲ್ಲ. ಪ್ರಿಯತಮನೂ ಕೈಗೆ ಲಭಿಸಲಿಲ್ಲ. ಇನ್ನು ಆ ಊರಲ್ಲಿ ವಾಸಿಸುವುದರಲ್ಲಿ ಅರ್ಥವಿಲ್ಲವೆಂದು ಅವಳುತಿಳಿದು ತನ್ನ ದಾಸಿಯೊಂದಿಗೆ ಬೇರೆ ಊರಿಗೆ ಪ್ರಯಾಣ ಮಾಡಿದಳು. ಆದರೆ ಪಾಪಿ ಹೋದಲ್ಲಿ ಮೊಳಕಾಲು ನೀರು'' ಎಂಬ ಗಾದೆಯಂತೆ ದಾರಿ ಯಲ್ಲಿ ಕಳ್ಳರು ಅವರ ಮೇಲೆ ಬಿದ್ದರು. ಅವರಲ್ಲಿದ್ದ ಆಭರಣಗಳನ್ನೆಲ್ಲ ಅಪಹರಿಸಿದರು. ಅವರೀರ್ವರನ್ನೂ ಒಂದು ಊರಿಗೆ ಕರೆದೊಯ್ದು ಅಲ್ಲಿ ಮಾರಾಟಮಾಡಲು ಯತ್ನಿಸಿದರು. ಆ ಊರಿನ ರಾಜನು ರಾಜಪುತ್ರಿಯ ಸೌಂದರ್ಯಕ್ಕೆ ಮನಸೋತು ಅವಳನ್ನೂ ಕ್ರಯಕ್ಕೆ ಕೊಂಡುಕೊಂಡನು. ಅವಳನ್ನು ತನ್ನರಮನೆಗೆ ಕರೆದುಕೊಂಡು ಬಂದು ಅಂದವಾದ ವಸ್ತ್ರ ಹಾಗೂ ಆಭರಣಗಳನ್ನು ಕೊಟ್ಟು ಅವಳ ಪ್ರೇಮಸಂಪಾದನೆಗಾಗಿ ಹಾತೊರೆಯು ತೊಡಗಿದನು. ಆದರೆ ಅವಳು ಮಾತ್ರ ಒಪ್ಪದೆ ಹಗಲಿರುಳು ಗೋಪಾಲ ದಾಸನ ಚಿಂತೆಯಲ್ಲೇ ಕಾಲಕಳೆಯಲಾರಂಭಿಸಿದಳು.

ಇತ್ತ ಸನ್ಯಾಸಿಯಾಗಿ ದೇಶಾಂತರಕ್ಕೆ ಹೊರಟ ಗೋಪಾಲದಾಸನು

ಒಂದು ದಿನ ಈ ರಾಜಪುತ್ರಿಯು ವಾಸಿಸುತ್ತಿದ್ದ ನಗರಕ್ಕೆ ಬಂದನು. ಭಿಕ್ಷಾನ್ನಕ್ಕಾಗಿ ಅವನು ಮನೆ ಮನೆಗೆ ತೆರಳುತಿದ್ದಾಗ ರಾಜಪುತ್ರಿಯ ದಾಸಿಯು ಅವನನ್ನು ನೋಡಿದಳು. ಅವನ ಗುರುತೂ ಅವಳಿಗೆ ಹತ್ತಿತು. ಮತ್ತು ಅವಳು ಸನ್ಯಾಸಿಯನ್ನು ಮಾತನಾಡಿಸಿ ಅವನು ಗೋಪಾಲದಾಸನೇ ಎಂದು ಖಚಿತಮಾಡಿಕೊಂಡಳು. ಆ ಮೇಲೆ ರಾಜಪುತ್ರಿಯ ದುಃಖದ ಕತೆಯನ್ನೆಲ್ಲ ಅವನಿಗೆ ತಿಳಿಸಿದಳು. ಅದನ್ನು ಕೇಳಿ ಅವನಿಗೂ ವ್ಯಸನವಾಯಿತು. ತನ್ನ ಕ್ಷೇಮ ಸಮಾಚಾರವನ್ನು ಕೂಡಲೇ ರಾಜಪುತ್ರಿಗೆ ತಿಳಿಸಬೇಕೆಂದು ಅವನು ಹೇಳಿದುದರಿಂದ ಆ ದಾಸಿಯು ಅರಮನೆಗೆ ಬಂದಳು. ಗೋಪಾಲದಾಸನು ಅದೇ ನಗರದಲ್ಲಿರುವುದನ್ನು ಕೇಳಿ ರಾಜಪುತ್ರಿಯು ಸಂತೋಷಪಟ್ಟಳು. ಅವನಿಗೆ ದಾಸಿಯ ಮೂಲಕ ಅಪಾರ ಹಣವನ್ನೂ ಚಿನ್ನಾಭರಣಗಳನ್ನೂ ಕೊಟ್ಟು ಕಳಿಸಿದಳು. ಗೋಪಾಲದಾಸನು ಅಂದವಾದ ಬಟ್ಟೆಬರೆಗಳನ್ನು ಕೊಂಡುಕೊಂಡನು. ಅದೇ ನಗರದಲ್ಲಿ ಒಂದು ದೊಡ್ಡಮನೆಯನ್ನು ಬಾಡಿಗೆ ಹಿಡಿದನು. ರಾತ್ರಿ ಕಾಲದಲ್ಲಿ ರಾಜಪುತ್ರಿಯು ಆ ಮನೆಗೆ ಬರುತಿದ್ದಳು. ಮತ್ತು ಗೋಪಾಲದಾಸನೊಡನೆ ರತಿಸುಖದಲ್ಲಿ ಕಾಲಕಳೆಯುತಿದ್ದಳು.

ಆದರೆ ಗೋಪಾಲದಾಸನ ವಿಧಿ ಇನ್ನೂ ಅವನನ್ನು ಕಾಡುತಿತ್ತು. ಅವನೊಟ್ಟಿಗೆ ಇದ್ದ ಸನ್ಯಾಸಿಯೊಬ್ಬನು ಗೋಪಾಲದಾಸನು ಮಾಯವಾದುದನ್ನು ಕಂಡು ಬೆರಗಾದನು. ಅವನನ್ನು ಹುಡುಕತೊಡಗಿದನು. ಆಗ ಒಂದು ದಿನ ಗೋಪಾಲದಾಸನು ಭವ್ಯವಾದ ಮನೆಯಲ್ಲಿದ್ದುದು ಕಂಡಿತು. ಸನ್ಯಾಸಿಯು ಗೋಪಾಲದಾಸನ ಬಳಿಗೆ ಬಂದು ರಾತ್ರಿ ಬೆಳಗಾಗುವುದರೊಳಗೆ ಅವನ ಅದೃಷ್ಟವು ಬದಲಾದುದು ಹೇಗೆಂದು ಪ್ರಶ್ನಿಸಿದನು. ಗೋಪಾಲದಾಸನು ರಾಜಪುತ್ರಿಯು ತನಗೆ ನೀಡಿದ ಸಹಾಯವನ್ನು ಅವಳಿಗೆ ತನ್ನ ಮೇಲಿರುವ ಪ್ರೇಮಾತಿಶಯವನ್ನೂ ವಿವರಿಸಿದನು. ಅದನ್ನು ಕೇಳಿ ಸನ್ಯಾಸಿಯು ಸಂತೋಷವ್ಯಕ್ತಪಡಿಸಿ ಆ ರಾಜಪುತ್ರಿಯನ್ನು ತನಗೊಮ್ಮೆ ತೋರಿಸಬೇಕೆಂದು ಪ್ರಾರ್ಥಿಸಿದನು. ಗೋಪಾಲದಾಸನು ಒಪ್ಪಿ ಮರುದಿನ ರಾತ್ರಿ ತನ್ನ ಮನೆಗೆ ಊಟಕ್ಕೆ ಬರಬೇಕೆಂದು ಹೇಳಿ ಕಳಿಸಿಕೊಟ್ಟನು. ಆ ಮೇಲೆ ಗೋಪಾಲದಾಸನು ರಾಜಪುತ್ರಿಯೊಡನೆ, ಮಿತ್ರನಾದ ತನ್ನ ಸನ್ಯಾಸಿಯ ವೃತ್ತಾಂತವನ್ನು ಹೇಳಿ, ಮರುದಿನ ಆ ಸನ್ಯಾಸಿಗೆ ದರ್ಶನಕೊಡಬೇಕೆಂದು

ಕೇಳಿದನು. ಮರುದಿನ ಹೊತ್ತಿಗೆ ಸರಿಯಾಗಿ ಆ ಸನ್ಯಾಸಿಯೂ ಬಂದನು. ಗೋಪಾಲದಾಸನ ಮನೆಯಲ್ಲಿ ದಿವ್ಯವಾದ ಭೋಜನದ ಏರ್ಪಾಟು ಮಾಡಿದ್ದರು. ಊಟವಾದಮೇಲೆ ಮೂವರೂ ವಿಶೇಷ ಕುಡಿದರು. ಆ ಸನ್ಯಾಸಿಗೆ ಅಮಲೇರಿದುದರಿಂದ ಅವನು ರಾಜಪುತ್ರಿಯ ಕೈಹಿಡಿದು ಅವಳನ್ನು ಮುದ್ದಿಸಲು ಯತ್ನಿಸಿದನು. ಅದನ್ನು ಕಂಡು ಗೋಪಾಲದಾಸನಿಗೆ ಸಿಟ್ಟು ಬಂದಿತು. ಅವನು ಸನ್ಯಾಸಿಯನ್ನು ತನ್ನ ಮನೆಯಿಂದ ಹೊರಗೆ ನೂಕಿದನು. ಇದರಿಂದ ಆ ಸನ್ಯಾಸಿಗೂ ವಿಶೇಷ ಕೋಪವು ಬಂದಿತು. ಮರುದಿನ ಮುಂಜಾನೆ ಅವನು ರಾಜನಿದ್ದಲ್ಲಿ ತೆರಳಿ, ಅವನು ಕ್ರಯಕ್ಕೆ ತೆಗೆದುಕೊಂಡ ಸ್ತ್ರೀಯು ಗೋಪಾಲದಾಸನೊಡನೆ ಅಕ್ರಮ ಸಂಬಂಧವನ್ನು ಇಟ್ಟುಕೊಂಡಿರುವಳೆಂದು ಹೇಳಿದನು. ರಾಜನು ರೇಗಿ ಅವರಿಬ್ಬರನ್ನೂ ಹಿಡಿದು ತರಿಸಿದನು. ಆಗ ಗೋಪಾಲದಾಸನು ಆರಂಭದಿಂದ ಇಂದಿನವರೆಗಿನ ತನ್ನ ಎಲ್ಲ ಕಥೆಯನ್ನು ವಿಸ್ತಾರವಾಗಿ ಆ ರಾಜನಿಗೆ ತಿಳಿಸಿ, ತನ್ನ ಅಪರಾಧವನ್ನು ಮನ್ನಿಸಬೇಕೆಂದು ಕೋರಿದನು. ಅವರೀರ್ವರೊಳಗೆ ಅಗಾಧವಾದ ಪ್ರೇಮವಿರುವದನ್ನು ಕಂಡ ರಾಜನು ಶಿಕ್ಷಿಸದೆ ಬಿಟ್ಟುಬಿಟ್ಟನು. ಗೋಪಾಲದಾಸನು ರಾಜಪುತ್ರಿಯೊಡನೆ ಮತ್ತೆ ತನ್ನ ಆ ಬಾಡಿಗೆ ಮನೆಗೆ ಬಂದು ಸುಖವಾಗಿ ವಾಸಿಸತೊಡಗಿದನು. ರಾಜನು ತೋರಿದ ದಯೆಗಾಗಿ ಅವನು ಕೃತಜ್ಞನಾಗಿದ್ದನು. ರಾಜನು ಸೈನಿಕರನ್ನು ಕಳಿಸಿ ಗೋಪಾಲದಾಸನ ಹಿಂದಿನ ಪಾಲುಗಾರರಾಗಿದ್ದ ವ್ಯಾಪಾರಿಗಳನ್ನು ಹಿಡಿದು ತರಿಸಿದನು. ಮರುದಿನ ಅವರನ್ನು ಶಿಕ್ಷಿಸಲೂ ನಿಶ್ಚಯಿಸಲಾಯಿತು. ಆದರೆ ಅದೇ ದಿನ ರಾತ್ರಿ ಆ ವ್ಯಾಪಾರಿಗಳು ತಪ್ಪಿಸಿಕೊಂಡು ಗೋಪಾಲದಾಸನ ಮನೆಗೆಬಂದು ಅವನನ್ನು ಕಟ್ಟಿಹಾಕಿ ಅವನ ಮನೆಯಲ್ಲಿದ್ದ ಎಲ್ಲ ಚಿನ್ನಾಭರಣಗಳನ್ನೂ ಅವನ ಪ್ರಿಯತಮೆಯನ್ನೂ ಅಪಹರಿಸಿಕೊಂಡು ಹೋದರು. ಬೆಳಗಾದ ಮೇಲೆ ನೆರೆಮನೆಯುವರು ಬಂದು ಅವನನ್ನು ಬಿಡಿಸಿದರು. ಸಂಪತ್ತನ್ನೂ ಪ್ರಿಯತಮೆಯನ್ನೂ ಕಳೆದುಕೊಂಡ ದುಃಖದಿಂದ ಗೋಪಾಲದಾಸನು ವೈರಾಗ್ಯವನ್ನು ತಾಳಿ ಪುನಃ ಸನ್ಯಾಸಿಯಾಗಿ ಹೊರಟನು. ಅನೇಕ ಊರುಗಳನ್ನು ಸುತ್ತಿ, ತೀರ್ಥ-ಕ್ಷೇತ್ರಗಳಲ್ಲಿ ಮಿಂದು, ಒಂದು ದಿನ ಕಾಶೀಪಟ್ಟಣಕ್ಕೆ ತಲುಪಿದನು. ಅಲ್ಲ ಧರ್ಮಛತ್ರದಲ್ಲಿ ಕುಳಿತಿದ್ದಾಗ ಕಾಶಿಯ ರಾಜನು

ಆ ಮಾರ್ಗವಾಗಿ ತೆರಳುತಿದ್ದನು. ಧರ್ಮಛತ್ರದ ಬಾಗಿಲಲ್ಲಿ ನಿಂತಿದ್ದ ಗೋಪಾಲದಾಸನನ್ನು ಆ ರಾಜನು ನೋಡಿ, ಅವನು ನಿಜವಾದ ಸನ್ಯಾಸಿಯಾಗಿರಲಿಕ್ಕಿಲ್ಲವೆಂದು ಸಂದೇಹಪಟ್ಟನು. ರಾಜನು ಬಂದು ಕೇಳಲು ಗೋಪಾಲದಾಸನು ತನ್ನ ನಿಜ ಸಂಗತಿಯನ್ನು ತಿಳಿಸಿದನು. ಅದನ್ನು ಕೇಳಿ ಆ ರಾಜನಿಗೆ ಬಹಳ ದುಃಖವಾಯಿತು. "ದೇವರು ಸಂಪತ್ತು, ಸೌಖ್ಯ, ಹಾಗೂ ಸ್ತ್ರೀಯನ್ನು ಕೊಟ್ಟರೂ ನೀನು ಸುಖಪಡಲಿಲ್ಲವಲ್ಲ" ಎಂದನು. ಆಗ ಗೋಪಾಲದಾಸನು "ಮಹಾರಾಜ! ಅವೆಲ್ಲ ಇದ್ದರೂ ಸುಖದೊರೆಯಲಾರದು. ಜಗತ್ತಿನಲ್ಲಿ ದುಃಖವು ಎಲ್ಲರನ್ನೂ ಒಂದಿಲ್ಲದಿದ್ದರೆ ಇನ್ನೊಂದು ರೀತಿಯಿಂದ ಬಾಧಿಸುತ್ತದೆ. ನಿನಗೆ ಈ ಮಾತಿನಲ್ಲಿ ನಂಬಿಗೆ ಉಂಟಾಗಲಿಕ್ಕಿಲ್ಲ. ಆದರೆ ನಿನ್ನ ಪರಿವಾರದಲ್ಲಿರುವ ಯಾರನ್ನಾದರೂ ಕೇಳು. ಅವನೂ ದುಃಖಿಯೇ" ಎಂದು ಹೇಳಿದನು. ಆಗ ಆ ರಾಜನು ತನ್ನ ಹತ್ತಿರವಿದ್ದ ಒಬ್ಬ ಸೇವಕನನ್ನು ಕರೆದು ಕೇಳಲು ಅವನು "ಮಹಾರಾಜ, ನಾನು ಸುಖಿಯಲ್ಲ. ಜನ್ಮದಾರಭ್ಯದಿಂದಲೂ ನಾನು ದುಃಖಿಯಾಗಿದ್ದೇನೆ'' ಎಂದನು. ಆಗ ಆ ಕಥೆಯನ್ನು ಹೇಳಬೇಕೆಂದು ರಾಜನು ಒತ್ತಾಯ ಮಾಡಲು ಆ ಭೃತ್ಯನು ಇಂತೆಂದನು.

## ೪೬ ರಾಜ್ಯಕಳೆದುಕೊಂಡವನ ಕಥೆ

ಪ್ರಭುವೇ, ನನ್ನ ತಂದೆ ಮಗಧ ರಾಜ್ಯವಂಶದ ಸಾಮಂತ ಅರಸನು. ನಾನು ನನ್ನ ತಂದೆಯ ಹಿರಿಮಗ. ನನ್ನ ಹೆಸರು ಜಯಸೇನ. ನಾನು ವಯಸ್ಸಿಗೆ ಬಂದ ಬಳಿಕ ಒಂದು ದಿನ ಒಬ್ಬನೇ ಬೊಕ್ಕಸ ನೋಡುವ ಆತುರದಿಂದ ಒಳಗೆ ಹೋದೆ. ಮುತ್ತು ರತ್ನಗಳೆಲ್ಲವನ್ನೂ ಪರೀಕ್ಷಿಸುತಿದ್ದಾಗ ಒಂದು ರತ್ನ ಖಚಿತ ಸಣ್ಣ ಪೆಟ್ಟಿಗೆಯು ನನ್ನ ದೃಷ್ಟಿಗೆ ಬಿತ್ತು. ಅದರ ಒಳಗೆ ಅತ್ಯಂತ ಲಾವಣ್ಯಮಯವಾದ ತರುಣಿಯೊಬ್ಬಳ ಭಾವಚಿತ್ರವಿದ್ದಿತು. ಆ ಚಿತ್ರದ ಸೌಂದರ್ಯ ಶೋಭೆಯನ್ನು ಕಂಡು ನಾನು ಮೋಹಿತನಾದೆ. ಅದನ್ನು ನಾನು ಹಿಡಿದುಕೊಂಡು ಬಂದೆ. ಅದನ್ನು ನನ್ನ ವಿಶ್ವಾಸನಾದ ಮಂತ್ರಿಗೆ ತೋರಿಸಿದೆ. ಮತ್ತು ಆ ರಾಜಪುತ್ರಿಯು ಯಾರು? ಯಾರ ಮಗಳು? ಇರುವ ಸ್ಥಳ ಯಾವುದು? ಎಂದು ಮುಂತಾಗಿ ಕೇಳಿದೆನು. ಆ ಮಂತ್ರಿಯು

ಬಹಳ ಯತ್ನ ನಡೆಸಿ, ಜ್ಞಾನಿಗಳನ್ನು ಕರೆಸಿ ಅದರ ಶೋಧ ಮಾಡಿಸಿದನು. ಮತ್ತು ಅವಳು ಭಾರತದ ಪೂರ್ವದಲ್ಲಿರುವ ಒಂದು ದ್ವೀಪರಾಜ್ಯದ ಅರಸನ ಮಗಳೆಂದು ತಿಳಿಸಿದನು. ಅದನ್ನು ಕೇಳಿದ ಮೇಲೆ ನಾನು ಕೆಲವು ಮಿತ್ರ ರೊಂದಿಗೆ ಸ್ವಲ್ಪ ದ್ರವ್ಯವನ್ನು ಹಿಡಿದುಕೊಂಡು ಹಡಗನ್ನು ಗೊತ್ತುಮಾಡಿ ಕೊಂಡು ಪ್ರಯಾಣ ಮಾಡಿದೆ. ಆದರೆ ಹಡಗವು ಬಿರುಗಾಳಿಗೆ ಸಿಕ್ಕಿದುದರಿಂದ ಮುಳುಗಿತು. ನಾವೆಲ್ಲರೂ ನೀರು ಪಾಲಾದೆವು. ನಾನು ನನ್ನ ಒಬ್ಬ ಮಿತ್ರನೂ ಈಸುತ್ತ ದಡ ಸೇರಿದೆವು. ಆಗ ರಾತ್ರಿಯಾಗಿದ್ದುದರಿಂದ ನಮಗೇನೂ ಕಾಣಿ ಸಲಿಲ್ಲ. ರಾತ್ರಿ ಆ ದಡದಲ್ಲೇ ನಿದ್ದೆ ಹೋದೆವು. ಬೆಳಗಾದಾಗ ನನ್ನ ಮಿತ್ರನು ನನ್ನ ಬಳಿಯಲ್ಲಿರಲಿಲ್ಲ. ಅವನೇನಾದನೋ ಎಂದು ನಾನು ಬಹಳ ಚಿಂತೆ ಗೊಳಗಾದೆ. ಕೂಗಿ ಕರೆದೆ. ಅತ್ತಿತ್ತ ತಿರುಗಿ ನೋಡಿದೆ. ಎಲ್ಲಿಯೂ ಅವನ ಪತ್ತೆಯೇ ಆಗಲಿಲ್ಲ. ನಾನು ಬಹಳ ದುಃಖಪಟ್ಟು ಒಬ್ಬನೇ ಸಮುದ್ರದ ದಂಡೆಯಲ್ಲಿ ಅಲೆಯುತ್ತ ಮುಂದೆ ಮುಂದೆ ಹೋದೆ. ದೂರದಲ್ಲಿ ಒಂದು ಕಾಡು ಕಾಣಿಸಿತು. ಅದನ್ನು ಪ್ರವೇಶಿಸಿ ನಡೆದು ಹೋದೆ. ಬಹಳ ದೂರ ಹೋದ ಮೇಲೆ ಒಂದು ದೊಡ್ಡ ಮನೆಯು ನನ್ನ ದೃಷ್ಟಿಗೆ ಬಿದ್ದಿತು. ಬಾಗಿಲು ಗಳು ಮುಚ್ಚಲ್ಪಟ್ಟಿದ್ದುವು. ನಾನು ಆ ಬಾಗಿಲುಗಳನ್ನು ತೆರೆದು ಒಳಗೆ ಪ್ರವೇ ಶಿಸಿದೆ. ಮನೆಯೊಳಗೆ ಯಾರೂ ಜನರಿದ್ದಂತೆ ಭಾಸವಾಗಲಿಲ್ಲ. ಆ ಮನೆ ಗೊಂದು ಉಪ್ಪರಿಗೆಯೂ ಇದ್ದಿತು. ಮೆಟ್ಟಲುಗಳನ್ನೇರಿ ಮೇಲೆ ಹೋಗಿ ನೋಡಲು ಒಂದು ಮಂಚದ ಮೇಲೆ ಸುಂದರಿಯಾದ ರಮಣಿಯೊಬ್ಬಳು ನಿದ್ರಾಸಕ್ತಳಾಗಿದ್ದಳು. ಭಾವಚಿತ್ರದಲ್ಲಿರುವ ರಮಣಿ ಅವಳೇ ಇರಬೇಕೆಂದು ನಾನು ತುಂಬಾ ಹರ್ಷಿತನಾದೆ. ಮಂಚದ ಸಮೀಪ ತೆರಳಿ ಅವಳನ್ನೇ ದಿಟ್ಟಿಸಿ ನೋಡಿದೆ. ಆದರೆ ಆ ಸ್ತ್ರೀ ಭಾವಚಿತ್ರದಲ್ಲಿ ರೂಪಿಸಲ್ಪಟ್ಟ ತರುಣಿ ಯಾಗಿರಲಿಲ್ಲ. ಆದರೂ ಅವಳು ಕೂಡಾ ತುಂಬಾ ಲಾವಣ್ಯವತಿಯಾಗಿದ್ದಳು. ನಾನು ಅವಳನ್ನು ಎಬ್ಬಿಸದೆ ಅಲ್ಲೇ ಒಂದು ಸುಖಾಸನದಲ್ಲಿ ಕುಳಿತೆ. ಸ್ವಲ್ಪ ಹೊತ್ತಿನ ತರುವಾಯ ಆ ಶೃಂಗಾರವತಿಯೇ ನಿದ್ದೆಯಿಂದ ಎಚ್ಚತ್ತಳು. ನನ್ನನ್ನು ಕಂಡು ತುಂಬಾ ಭಯಲಜ್ಜೆ ಹಾಗೂ ಆಶ್ಚರ್ಯಗಳನ್ನು ವ್ಯಕ್ತಪಡಿ ದಳು. ನಾನು ಅವಳ ಭೀತಿಯನ್ನು ಹೋಗಲಾಡಿಸುವುದಕ್ಕಾಗಿ ಸಮಾಧಾನದ ಮಾತುಗಳನ್ನಾಡಿದೆ. ಅದರಿಂದ ಅವಳು ಧೈರ್ಯ ತಂದುಕೊಂಡಳು. ಮತ್ತು

ಸ್ನೇಹದಿಂದ ಮಾತನಾಡತೊಡಗಿದಳು. "ಮಹಾರಾಜ, ನೀವು ಈ ಕ್ಷಣವೇ ಇಲ್ಲಿಂದ ಹೊರಟು ಹೋಗಿರಿ. ನನ್ನ ಯಜಮಾನನು ಬರುವ ಹೊತ್ತಾಯಿತು. ಅವನು ರಾಕ್ಷಸ ಸ್ವರೂಪಿ. ನಾನು ರಾಜಕನ್ಯೆ. ಒಂದು ದಿನ ಕೆರೆಯಲ್ಲಿ ಜಲ ಕ್ರೀಡೆ ಆಡುತಿದ್ದಾಗ ಆ ದಾರಿಯಾಗಿ ಹೋಗುತಿದ್ದ ಇವನು ನನ್ನನ್ನು ಕಂಡು ಮೋಹಿಸಿದನು. ನಾನು ಅರಮನೆಗೆ ತೆರಳುತಿದ್ದಾಗ ದಾರಿಯಲ್ಲಿ ನಿಂತ. ನನ್ನನ್ನು ಹಿಡಿದು ಅಪಹರಿಸಿಕೊಂಡು ಬಂದನು. ಈ ದ್ವೀಪದಲ್ಲಿರುವ ಅರಣ್ಯದಲ್ಲೇ ನನ್ನಟ್ಟಿದ್ದಾನೆ.ಪರಪುರುಷರನ್ನು ಅವನು ಸಹಿಸಲಾರ."ಎಂದಳು.

ಅದನ್ನು ಕೇಳಿ ನಾನು ಜೀವ ರಕ್ಷಣೆಗಾಗಿ ಜಾಗ್ರತೆ ವಹಿಸಿದೆ. ಅವಳ ಯಜಮಾನನು ಬಂದವನು ಸಿಟ್ಟಿನ ಲಹರಿಯಲ್ಲಿರಲಿಲ್ಲ. ನನ್ನನ್ನು ಕಂಡು ಸ್ನೇಹದಿಂದಲೇ ಮಾತನಾಡಿಸಿವನು. ಆ ದ್ವೀಪಕ್ಕೆ ಬಂದ ಕಾರಣವೇನೆಂದು ವಿಚಾರಿಸಿದನು. ನಾನು ನನ್ನ ಕೈಯಲ್ಲಿದ್ದ ರಾಜಪುತ್ರಿಯ ಭಾವಚಿತ್ರವನ್ನು ತೋರಿಸಿ ಹೇಗಾದರೂ ಮಾಡಿ ಅವಳನ್ನು ದೊರಕಿಸಿಕೊಡಬೇಕೆಂದು ಪ್ರಾರ್ಥಿಸಿದೆನು. ಆಗ ಅವನು "ರಾಜಪುತ್ರ, ಈ ರಮಣಿಯು ಇದೇ ದೇಶದ ರಾಜನ ಮಗಳು. ಆದರೆ ಅವಳು ದೇಹತ್ಯಾಗ ಮಾಡಿ ಇಂದಿಗೆ ಅನೇಕ ವರುಷಗಳಾದುವು.'' ಎಂದು ಹೇಳಿ ವ್ಯಸನ ಪಟ್ಟನು. ಅದನ್ನು ಕೇಳಿ ನನಗೆ ದುಃಖವೂ ಜೀವ ಮತ್ತು ಜೀವನದ ಮೇಲೆ ವೈರಾಗ್ಯವೂ ಬಂದಿತು. ಕೆಲವು ದಿವಸಗಳ ವರೆಗೆ ಅವನ ಆತಿಥ್ಯವನ್ನು ಸ್ವೀಕರಿಸಿದೆ ಮತ್ತು ಸ್ವದೇಶಕ್ಕೆ ಮರಳಿದೆ. ನನ್ನ ದೇಶಕ್ಕೆ ಬಂದಾಗ ರಾಜನಾಗಿದ್ದ ನನ್ನ ತಂದೆ ಸ್ವರ್ಗಸ್ಥನಾಗಿದ್ದನು. ನಾನು ದೇಶಾಂತರ ತೆರಳಿದುದರಿಂದ ನನ್ನ ತಮ್ಮನೇ ರಾಜಪಟ್ಟಕ್ಕೆ ಬಂದಿದ್ದನು. ರಾಜ್ಯಕ್ಕೆ ಮರಳಿದ ಮೇಲೆ ನಾನು ನನ್ನ ತಮ್ಮನನ್ನು ಕಂಡು ರಾಜ್ಯವನ್ನು ನನಗೆ ಬಿಟ್ಟು ಕೊಡಬೇಕೆಂದು ಕೇಳಿದೆನು. ನನ್ನ ತಮ್ಮನು ಇದಿರಿಗೆ ಸಂತೋಷವನ್ನು ವ್ಯಕ್ತಪಡಿಸಿ, ಕೆಲವು ದಿವಸಗಳ ಮೇಲೆ ಅಧಿಕಾರವನ್ನು ಒಪ್ಪಿಸುವುದಾಗಿ ನುಡಿದನು. ನಾನು ಅವನ ಮಾತನ್ನು ನಂಬಿದೆ. ಆದರೆ ನಿಜವಾಗಿಯೂ ಅಧಿಕಾರವನ್ನು ಬಿಟ್ಟುಗೊಡುವ ಇಚ್ಛೆ ಅವನಿಗಿದ್ದಿಲ್ಲ. ನನ್ನನ್ನು ಯಾವುದಾದರೊಂದು ಕುಹಕೋಪಾಯದಿಂದ ಕೊಲ್ಲಬೇಕೆಂದು ಅವನು ತನ್ನ ಸಂಗಡಿಗರೊಂದಿಗೆ ಆಪಾಲೋಚನೆ ಮಾಡುತ್ತಿದ್ದನು.

ಒಂದೆರಡು ದಿವಸಗಳ ಮೇಲೆ ರಾಜ ಪರಿವಾರದವರು ನಾಸಿದ್ದಲ್ಲಿ ಬಂದು ಮೃಗಯಾ ವಿಹಾರಕ್ಕೆ ಬರಬೇಕೆಂದು ಆಮಂತ್ರಿಸಿದರು. ಕಪಟವನ್ನರಿಯದ ನಾನು ಒಪ್ಪಿಕೊಂಡು ತುರಗಾರೂಢನಾಗಿ ಅವರನ್ನು ಹಿಂಬಾಲಿಸಿದೆ. ಕಾಡಿಗೆ ತೆರಳಿದ ಮೇಲೆ ಆ ಪರಿವಾರದವರು ನನ್ನನ್ನು ಸುತ್ತುಗಟ್ಟಿ ನನ್ನನ್ನು ಕೊಲ್ಲಲು ರಾಜನು ಅಪ್ಪಣೆ ವಿಧಿಸಿರುವನೆಂದು ತಿಳಿಸಿದರು. ಆಗ ನಾನು ಆ ಸರದಾರರನ್ನು ಉದ್ದೇಶಿಸಿ, “ಗೆಳೆಯರೇ, ನನ್ನನ್ನು ಕೊಲ್ಲದೆ ಪ್ರಾಣ ದಾನ ಮಾಡಿದರೆ ಒಳ್ಳೇದು. ನನ್ನಿಂದ ನಿಮಗಾಗಲೀ ನಿಮ್ಮ ರಾಜನಿಗಾಗಲೀ ಯಾವುದೇ ರೀತಿಯ ಹಾನಿ ತಟ್ಟಲಾರದು. ನಾನು ರಾಜಪುತ್ರನಾಗಿರುವುದಾದರೂ ಧನ ಬಲ ಜನ ಬಲವಿಲ್ಲದೆ ನಿರಾಶ್ರಿತನಂತಿರುವೆ. ಆದುದರಿಂದ ನೀವು ಕೊಲ್ಲದೆ ಬಿಟ್ಟರೆ ಯಾವುದಾದರೊಂದು ದೇಶಕ್ಕೆ ತೆರಳಿ ಜೀವಿಸಿಕೊಂಡಿರುತ್ತೇನೆ” ಎಂದು ಪ್ರಾರ್ಥಿಸಿದೆ. ಆಗ ಅವರು ದಯೆದೋರಿ ಬಿಟ್ಟು ಬಿಟ್ಟರು. ಅಲ್ಲಿಂದ ಹೊರಟು ಬಂದವನು ತಮ್ಮಲ್ಲಿ ಆಶ್ರಯ ಪಡೆದಿದ್ದೇನೆ. ನಾನು ಸುಖಿಯೋ ದುಖಿಯೋ ಮಹಾರಾಜರೇ ನಿರ್ಧರಿಸಿಕೊಳ್ಳಲಿ” ಎಂದನು. ಆಗ ಆ ಕಾಶೀರಾಜನು ತನ್ನ ಅಂಗರಕ್ಷಕರಲ್ಲೊಬ್ಬನನ್ನು ಕರೆದು “ನೀನು ಸುಖಿಯೋ ? ದುಖಿಯೋ ? ನಿನ್ನ ಕಥೆ ಏನು ?” ಎಂದು ಪ್ರಶ್ನಿಸಿದನು. ಆಗ ಆ ಅಂಗರಕ್ಷಕನು ತನ್ನ ಕಥೆಯನ್ನು ಹೇಳತೊಡಗಿದನು.

## ೪೭. ರಾಜಪುತ್ರನ ವಿರಹ ಕಥೆ

ಪ್ರಭುವೇ, ನಾನು ಕಾಶ್ಮೀರ್ ದೇಶದ ಒಂದು ಅರಸು ಮನೆತನಕ್ಕೆ ಸೇರಿದವನು. ನಾನು ಬಾಲಕನಿದ್ದಾಗ ನನ್ನ ತಂದೆಯು ರಾಜ್ಯವನ್ನಾಳುತಿದ್ದ. ನನ್ನ ತಂದೆಗೆ ಗಾಯನ, ನರ್ತನ, ಮೊದಲಾದ ಲಲಿತ ಕಲೆಗಳ ಮೇಲೆ ಅಭಿರುಚಿ ಬಹಳ. ರಾಜಸಭೆಯಲ್ಲಿ ಯಾವಾಗಲೂ ಯಾವುದಾದರೊಂದು ರೀತಿಯ ಸರಸ ಸಂಭಾಷಣೆ ನಡೆಯುತಿತ್ತು. ಒಂದು ದಿನ ರಾಜಸಭೆಯಲ್ಲಿ ದೇಶವಿದೇಶಗಳ ವರ್ಣನೆ ನಡೆಯಿತು. ದೇಶವಿದೇಶಗಳನ್ನು ಸಂಚರಿಸಿದ ಮಂತ್ರಿಗಳು, ಸೇನಾಧಿಕಾರಿಗಳು, ನಾಗರಿಕರು ಆ ಆ ದೇಶಗಳ ಸ್ಥಿತಿಗತಿಗಳನ್ನು ವರ್ಣಿಸುತಿದ್ದರು. ಆ ಚರ್ಚೆಯಲ್ಲಿ ರಾಜಮನೆತನದವರೂ ಭಾಗವಹಿ

ಸಿದರು. ಆದರೆ ನಾನು ರಾಜ್ಯ ಬಿಟ್ಟು ತೆರಳಿದವನಲ್ಲ. ಆದುದರಿಂದ ಚರ್ಚೆಯನ್ನು ಕೇಳುತ್ತ ಸುಮ್ಮನೇ ಕುಳಿತುಕೊಂಡೆ. ನನ್ನ ಅಜ್ಞಾನದ ಬಗ್ಗೆ ನನಗೇ ವ್ಯಸನವಾಯಿತು.

ನನ್ನ ಈ ವ್ಯಸನವನ್ನು ಕಂಡು ಒಬ್ಬ ಶಿಲ್ಪಿಯು ನನ್ನ ಬಳಿಗೆ ಬಂದು ಮಧುರವಾಗಿ ಮಾತನಾಡಿಸಿದನು. ನನ್ನ ದುಃಖವನ್ನು ತಿಳಿದುಕೊಂಡ ಮೇಲೆ ಅವನು "ರಾಜಪುತ್ರ, ಇದಕ್ಕಾಗಿ ನೀನು ಚಿಂತಿಸಬೇಡ. ನಾನು ಒಂದು ಮರದ ಕುದುರೆಯನ್ನು ತಯಾರಿಸಿ ಕೊಡುತ್ತೇನೆ. ಅದರ ಗರ್ಭದಲ್ಲಿ ಒಂದು ಯಂತ್ರವನ್ನೂ ಇರಿಸುತ್ತೇನೆ. ಆ ಯಂತ್ರವು ಆರಂಭವಾದ ಕೂಡಲೇ ಕುದುರೆಯ ಗರಿಗಳು ಬಿಡಿಸಲ್ಪಡುವುವು. ಆ ಕುದುರೆ ತಕ್ಷಣ ಆಕಾಶದಲ್ಲಿ ಹಾರುವುದು." ಎಂದನು. ರಾಜಪುತ್ರನು ಅದನ್ನು ಕೇಳಿ ಸಂತೋಷಪಟ್ಟನು. ಆ ಶಿಲ್ಪಿಗೆ ದ್ರವ್ಯ ಸಹಾಯವನ್ನು ಮಾಡಿದನು. ಅಲ್ಪಾವಧಿಯೊಳಗೆ ಅವನು ಒಂದು ಕುದುರೆಯನ್ನು ಮಾಡಿಕೊಟ್ಟನು. ನಾನು ಒಂದೆರಡುಸಲ ಅದನ್ನೇರಿ ಆ ನಗರವನ್ನು ಸುತ್ತಿದೆ. ಆ ಮೇಲೆ ಸಾಧ್ಯವಿದ್ದಷ್ಟು ಆಹಾರ ಸಾಮಗ್ರಿಗಳನ್ನೆಲ್ಲ ತುಂಬಿಕೊಂಡು ತಂದೆಯ ಅಪ್ಪಣೆ ಪಡೆದು ದೇಶ ಪರ್ಯಟನಕ್ಕೆ ಹೊರಟೆನು.

ಕೆಲವು ದಿವಸಗಳ ವರೆಗೆ ಪ್ರಯಾಣ ಮಾಡಿದ ಮೇಲೆ ನಾನು ಒಂದು ನದಿಯ ದಂಡೆಯಲ್ಲಿರುವ ಕಾಡಿನಲ್ಲಿ ಇಳಿದೆನು. ಕುದುರೆಯನ್ನು ಅಲ್ಲಿ ಅಡಗಿಸಿಟ್ಟು ಹತ್ತಿರವಿದ್ದ ನಗರಕ್ಕೆ ತೆರಳಿದೆನು. ಆ ನಗರವನ್ನೆಲ್ಲ ಸುತ್ತಿದೆನು. ನಗರದ ಒಂದು ಕಡೆ ಅತ್ಯಂತ ಉನ್ನತವಾದ ಒಂದು ಮನೆಯಿದ್ದಿತು. ಅದರ ಸುತ್ತಲೂ ನೀರಿನ ಕಂದಕ ಮತ್ತು ಕೋಟೆ ಇದ್ದಿತು. ನಾನು ಅದು ಏನು ? ಮತ್ತು ಆ ಭವ್ಯ ಕಟ್ಟಡದಲ್ಲಿ ಯಾರು ವಾಸಿಸುತಿದ್ದಾರೆಂದು ಕೇಳಿದೆ. ಆಗ ಒಬ್ಬ ನಾಗರಿಕನು "ಸ್ವಾಮಿ, ಅಲ್ಲಿ ಈ ನಗರದ ರಾಜನ ಪುತ್ರಿ ಇದ್ದಾಳೆ. ಅವಳ ಜಾತಕ ನೋಡಿದ ಜೋತಿಷ್ಯನು ಒಳ್ಳೇ ಭವಿಷ್ಯವನ್ನು ನುಡಿಯಬಲ್ಲ. ಅವಳನ್ನು ಅಪಹರಣ ಮಾಡಿಕೊಂಡೊಯ್ಯುವರು ಎಂದು ಹೇಳಿದ್ದನಂತೆ. ಅದನ್ನು ತಪ್ಪಿಸಲು ರಾಜನು ಈ ಭವ್ಯ ಮನೆಯನ್ನು ಕಟ್ಟಿಸಿ ರಾಜಪುತ್ರಿಯನ್ನು ಅಲ್ಲಿಟ್ಟಿರುವನು. ಅಲ್ಲಿಗೆ ತೆರಳಲು ದಾರಿಯೇ ಇಲ್ಲ" ಎಂದನು.

ಆ ಕಥೆಯನ್ನು ಕೇಳಿ ನಾನು ನಕ್ಕುಬಿಟ್ಟೆ. ಸಂಜೆ ಆಗುವುದರೊಳಗೆ

ಕಾಡಿಗೆ ಮರಳಿದೆ. ನನ್ನ ಕುದುರೆಯನ್ನು ಕಂಡಕೂಡಲೇ ಅದನ್ನೇರಿ, ಆ ರಾಜಪುತ್ರಿಯ ಮನೆಗೆ ತೆರಳಬೇಕೆಂದು ಇಚ್ಛೆಯಾಯಿತು. ಅದರಂತೆ ಮಧ್ಯ ರಾತ್ರಿ ನಾನು ಆ ಕುದುರೆಯನ್ನೇರಿ ಆಕಾಶ ಮಾರ್ಗವಾಗಿ ಚಲಿಸುತ್ತ ಅವಳ ಮಂದಿರಕ್ಕೆ ತೆರಳಿದೆ. ಕುದುರೆಯನ್ನು ಮೇಲಿಟ್ಟು ಕಿಟಕಿಯ ಮೂಲಕ ಅವಳ ಕೋಣೆಯನ್ನು ಹೊಕ್ಕೆ. ಆಗ ರಾಜಪುತ್ರಿ ನಿದ್ರಾಸಕ್ತಳಾಗಿದ್ದಳು. ನಾನು ಮೆಲ್ಲಗೆ ಗಾಳಿ ಬೀಸಲು ಅವಳಿಗೆ ಎಚ್ಚರವಾಯಿತು. ಗದ್ದಲ ಮಾಡ ಬಾರದೆಂದು ನಾನು ಕೈಸನ್ನೆಯಿಂದ ಹೇಳಲು ಅವಳು ಸುಮ್ಮನಾದಳು. ಆಗ ನಾನು "ರಾಜಪುತ್ರಿಯೇ, ನಾನು ದೇವಲೋಕದವನು. ನಿನ್ನ ರೂಪಲಾ ವಣ್ಯ ನೋಡಿ ತುಂಬಾ ಮೋಹಿತನಾಗಿದ್ದೇನೆ" ಎಂದೆನು. ನನ್ನ ಮಾತು ಕೇಳಿ ಅವಳು ಪ್ರಸನ್ನವದನಳಾದಳು. ನನ್ನನ್ನು ತನ್ನ ಮಂಚದಲ್ಲೇ ಮಲಗಿ ಸಿಕೊಂಡಳು. ನಾನು ಅವಳೊಡನೆ ಸರ್ವಾಂಗ ಸುಖವನ್ನು ಅನುಭವಿಸಿದೆ. ಬೆಳಗಾಗುವುದರೊಳಗೆ ಮತ್ತೆ ನನ್ನ ಕುದುರೆಯನ್ನೇರಿ ಹೊರಟು ಹೋದೆ.

ರಾಜಪುತ್ರಿಯು ಈ ವಿಷಯವನ್ನು ಗುಪ್ತವಾಗಿಡಲಿಲ್ಲ. ಅವಳು ತನ್ನ ತಂದೆಯನ್ನು ಕಂಡು "ಮಹಾರಾಜ, ನಿನ್ನೆ ರಾತ್ರಿ ನನ್ನ ಕೋಣೆಗೆ ದೇವ ಲೋಕದ ಪುರುಷನೊಬ್ಬನು ಬಂದನು. ನಾನು ಅವನನ್ನೇ ಪತಿಯನ್ನಾಗಿ ಅಂಗೀಕರಿಸಿದ್ದೇನೆ" ಎಂದಳು. ಆಗ ರಾಜನು ಚಿಂತಾತುರನಾದನು. ದೇವ ಲೋಕದವರು ಮನುಷ್ಯ ಲೋಕಕ್ಕೆ ಬರುವುದೆಂದರೇನು? ತನ್ನ ಮಗಳನ್ನು ವರಿಸುವುದೆಂದರೇನು ? ಈ ಪ್ರಶ್ನೆಗಳನ್ನು ಬಿಡಿಸಲಾರದೆ ಅವನು ತನ್ನ ವೃದ್ಧ ಮಂತ್ರಿಯನ್ನು ಕರೆಸಿಕೊಂಡು ಅವನೊಡನೆ ಆಲೋಚನೆ ನಡೆಸಿದನು ಆಗ ಆ ಮಂತ್ರಿಯು "ಮಹಾರಾಜ, ಅವನು ಯಂತ್ರ ತಂತ್ರ ಮಂತ್ರ ವಿದ್ಯಾವಿಶಾರದನಿರಬೇಕು. ನೀವು ಈ ದಿನ ರಾಜಪುತ್ರಿಯ ಮನೆಯ ಸುತ್ತಲೂ ಭದ್ರವಾದ ಕಾವಲನ್ನಿರಿಸಿ, ನೀವೂ ಕೋಣೆಯಲ್ಲಿ ಕುಳಿತುಕೊ ಳ್ಳಿರಿ" ಎಂದನು. ಅದರಂತೆ ಆ ರಾಜನು ವ್ಯವಸ್ಥೆ ಮಾಡಿದನು. ಮಧ್ಯರಾತ್ರಿ ನಾನು ಆಕಾಶ ಮಾರ್ಗವಾಗಿ ಬರುವುದನ್ನು ಕಂಡ ಕೂಡಲೇ ಅವನು ತುಂಬಾ ಗಾಬರಿಯಾದನು. ನಾನು ದೇವ ದೂತನೆಂದೇ ನಂಬಿ ನಮಸ್ಕರಿಸಿ ಹೊರಟು ಹೋದನು. ನಾನು ನನ್ನ ಪ್ರಿಯತಮೆಯೊಂದಿಗೆ ಸರಸ ಸುಖವ ನ್ನನುಭವಿಸಿ ಮರಳಿದೆ. ರಾಜನು ಮರುದಿನ ರಾಜ ಸಭೆಯಲ್ಲಿ ತನ್ನ ಅಳಿಯ

ನಾಗು ಷವನು ದೇವದೂತನೆಂದೂ ಅವನನ್ನು ತಾನು ಪ್ರತ್ಯಕ್ಷ ಕಂಡಿರುವೆ ನೆಂದೂ ನುಡಿದನು. ರಾಜ ಸಭೆಯಲ್ಲಿದ್ದ ಅವನ ಮಂತ್ರಿಗಳಲ್ಲಿ ಅನೇಕರು ಆ ಮಾತನ್ನು ನಂಬಲಿಲ್ಲ. ಆದರೆ ರಾಜನಿಗೆ ಬೆದರಿ ಅವರು ಬಹಿರಂಗವಾಗಿ ಹೇಳುತಿದ್ದಿಲ್ಲ.

ಹೀಗೆ ಕೆಲವು ಕಾಲ ಕಳೆಯಿತು. ವೈರಿ ರಾಜರು ಆ ದೇಶದ ಮೇಲೆ ದಂಡೆತ್ತಿ ಬಂದರು. ಅವರ ವಶ ಅಸಂಖ್ಯ ಸೈನ್ಯವಿದ್ದಿತು. ಯುದ್ಧ ಮಾಡುವ ಧೈರ್ಯ ನನ್ನ ಮಾವನಿಗಿರಲಿಲ್ಲ. ಆಗ ಅವನ ಮಂತ್ರಿಯು, "ಮಹಾರಾಜ, ನಿಮ್ಮ ಅಳಿಯನು ದೇವದೂತನು. ಬಲಶಾಲಿ. ಅವನಿಗೆ ತಿಳಿಸಿದರೆ ಅವನು ನಿಶ್ಚಯವಾಗಿಯೂ ವೈರಿಗಳನ್ನು ನಿರ್ನಾಮ ಮಾಡದೇ ಇರಲಾರನು" ಎಂದನು. ಅದನ್ನು ಕೇಳಿ ರಾಜನು ತನ್ನ ಮೋಹದ ಸುತೆಗೆ ತಿಳಿಸಿದನು. ಅಂದು ರಾತ್ರಿ ನಾನು ನನ್ನ ಪ್ರಿಯತಮೆಯನ್ನು ಕಾಣಲು ತೆರಳಿದಾಗ ಅವಳು ಈ ಸಂಗತಿಯನ್ನರುಹಿದಳು. ಆ ಕೂಡಲೇ ನಾನು ಕುದುರೆಯನ್ನೇರಿ ಹೋದೆ. ಅದರಲ್ಲಿ ದೊಡ್ಡ ದೊಡ್ಡ ಕಲ್ಲುಗಳನ್ನು ತುಂಬಿಸಿ ವೈರಿ ಸೈನಿಕರ ಡೇರೆಗಳ ಮೇಲೆ ಎಸೆಯ ತೊಡಗಿದೆ. ವೈರಿ ಸೈನಿಕರು ಜೀವದಾಸೆಯಿಂದ ದಿಕ್ಕಾ ಪಾಲಾಗಿ ಓಡಿಹೋದರು. ವೈರಿರಾಯನು ಪ್ರಾಣ ಕಳೆದು ಕೊಂಡನು. ರಾಜ್ಯಕ್ಕೆ ಬಂದ ಕಂಟಕ ದೂರವಾಯಿತು.

ಇದೇ ರೀತಿ ಕೆಲವು ದಿವಸಗಳು ಉರುಳಿದುವು. ನಾನು ರಾಜಪುತ್ರಿ ಯನ್ನು ವಿವಾಹವಾಗುವ ಮಾತುಗಳನ್ನಾಡಿದೆ. ಅದಕ್ಕೆ ಅವಳೂ ಸಮ್ಮತಿಸಿ ದಳು. ಹೀಗಿರುತ್ತಿರಲು ಒಂದು ದಿನ ನಾನು ಉಳಿದು ಕೊಂಡಿದ್ದ ಕಾಡಿಗೆ ಬೆಂಕಿ ಬಿತ್ತು. ನಾನಿಲ್ಲನ ವೇಳೆಯಾಗಿದ್ದುದರಿಂದ ಕುದುರೆಯನ್ನು ಕಾಪಾಡಿ ಕೊಳ್ಳಲು ಶಕ್ಯವಾಗಲಿಲ್ಲ. ಅದು ಸಂಪೂರ್ಣ ಸುಟ್ಟು ಹೋಯಿತು. ರಾಜ ಸ್ಥಾನಕ್ಕೆ ತೆರಳಿ ರಾಜಪುತ್ರಿಗೆ ಮೋರೆ ತೋರಿಸಲು ನಾನು ನಾಚಿದೆ. ಮತ್ತು ಅಲ್ಲಿಂದ ಹೊರಟು ತಮ್ಮಲ್ಲಿ ಬಂದು ಜೀವಿಸುತ್ತಿದ್ದೇನೆ. ಆ ನನ್ನ ಪ್ರಿಯತಮೆಯ ಸ್ಮರಣೆ ಹಗಲಿರುಳೂ ಇದೆ. ಮನಸ್ಸಿಗೆ ಎಳ್ಳಷ್ಟು ಸುಖವಿಲ್ಲ" ಎಂದನು.

ಆಗ ಆ ಕಾಶೀರಾಜನು ಗೋಪಾಲರಾಯನನ್ನು ತನ್ನರಮನೆಗೆ ಕರೆದುಕೊಂಡು ಹೋದನು. ಅವನ ಹೆಂಡತಿಯನ್ನು ಹುಡುಕಿಸಿ ಅವನಿಗೊ

ಪ್ಪಿಸಿದನು ಮತ್ತು ಅವನ ಪಾಲುಗಾರರನ್ನು ಸೆರೆ ಹಿಡಿದನು. ತನ್ನ ಸೇವಕನಾದ ರಾಜಪುತ್ರನಿಗೆ ಅವನ ಪ್ರೀಯತಮೆಯೊಡನೆ ಮದುವೆ ಮಾಡಿಸಿದನು ಚಿತ್ರದಲ್ಲಿ ಬರೆಯಲ್ಪಟ್ಟ ಸುಂದರಾಕಾರದ ತರುಣಿಯ ಮೇಲೆ ಮೋಹವಿರಿಸಿ ಅವಳು ಮರಣ ಹೊಂದಿದುದರಿಂದ ದುಃಖಿತನಾದ ತನ್ನ ಅಂಗರಕ್ಷಕನಾದ ರಾಜಪುತ್ರನಿಗೆ ತನ್ನ ಆಸ್ಥಾನದಲ್ಲಿದ್ದ ಅತ್ಯಂತ ಲಾವಣ್ಯವತಿಯಾದ ತರುಣಿಯನ್ನು ಕೊಟ್ಟು ಮದುವೆ ಮಾಡಿಸಿದನು. ಸ್ತ್ರೀ ವ್ಯಾಮೋಹದಿಂದ ಎಲ್ಲರೂ ದುಃಖಿತರಾದರು ಎಂದು ವೀರಸೇನನು ರಾಜಪುತ್ರಿ ಪದ್ಮಾವತಿಗೆ ತಿಳಿಸಿದನು. ಆದರೆ ಪದ್ಮಾವತಿಯು ಈ ಕಥೆಗಳನ್ನು ಕೇಳಿ ಸ್ತ್ರೀಯರೇ ದುಷ್ಟರೆಂಬ ವಿಚಾರವನ್ನು ಒಪ್ಪಿಕೊಳ್ಳಲಿಲ್ಲ. ಪುರುಷರೇ ಮರುಳರೆಂದು ಸಾಧಿಸುತ್ತಿದ್ದಳು. ಅದಕ್ಕೊಂದು ಉದಾಹರಣೆಯನ್ನು ಕೂಡಾ ಕೊಟ್ಟಳು. ಎಂದು ಮೋಹನದಾಸನು ಮೋಹಿನಿಗೆ ತಿಳಿಸಿದನು. ಆ ಉದಾಹರಣೆಯನ್ನು ತನಗೆ ವಿವರಿಸಬೇಕೆಂದು ಮೋಹಿನಿಯು ಪ್ರಾರ್ಥಿಸಿದುದರಿಂದ ಅವನು ಹೇಳತೊಡಗಿದನು.

## ೪೮ ತಿಲೋತ್ತಮೆಯ ಕಥೆ

ಪ್ರಾಚೀನಕಾಲದಲ್ಲಿ ಅಮರಾವತಿ ರಾಜ್ಯದಲ್ಲಿ ತಿಲೋತ್ತಮೆ ಎಂಬ ರಾಜಕನ್ಯೆ ಇದ್ದಳು. ಆ ರಾಜನ ಸಹೋದರಿಗೆ ಮೋಹನ ಕುಮಾರನೆಂಬ ಪುತ್ರನಿದ್ದನು. ತಿಲೋತ್ತಮೆ ಮತ್ತು ಮೋಹನ ಇಬ್ಬರೂ ಪರಸ್ಪರ ಬಹಳ ಪ್ರೀತಿಸುತ್ತಿದ್ದರು. ಆದುದರಿಂದ ತನ್ನ ಮಗಳನ್ನು ಅವನಿಗೇ ಮದುವೆ ಮಾಡಿ ಕೊಡುವುದಾಗಿ ರಾಜನು ತನ್ನ ಸಹೋದರಿಗೆ ಅಭಯ ವಚನವನ್ನು ಕೊಟ್ಟನು. ತಿಲೋತ್ತಮೆ ಮತ್ತು ಮೋಹನರಿಬ್ಬರೂ ಒಬ್ಬನೇ ಗುರುವಿನಿಂದ ಜ್ಞಾನದಾನ ಪಡೆದರು. ಅದರಿಂದ ಅವರಿರ್ವರೊಡನೆ ಸ್ನೇಹವು ದಿನದಿಂದ ದಿನಕ್ಕೆ ಬಹಳ ಬಲಿಯಿತು.

ಆದರೆ ದುರ್ದೃಷ್ಟದಿಂದ ಮೋಹನಕುಮಾರನ ತಾಯಿತಂದೆ ಅಕಾಲ ಮೃತ್ಯುವಿಗೆ ತುತ್ತಾದರು. ಆದುದರಿಂದ ತಿಲೋತ್ತಮೆಯ ತಂದೆಯು ಹಿಂದೆ ತನ್ನ ಅಕ್ಕನಿಗೆ ಕೊಟ್ಟಿದ್ದ ವಚನವನ್ನು ಮರೆತನು. ತನ್ನ ಕನ್ಯೆಯು ಪ್ರಾಪ್ತ

ವಯಸ್ಕಳಾದುದನ್ನು ಕಂಡು ವಿವಾಹವನ್ನು ಜರುಗಿಸಲು ನಿಶ್ಚಯಿಸಿದನು. ಮತ್ತು ವರಾನ್ವೇಷಣೆಗಾಗಿ ವೃದ್ಧನಾದ ತನ್ನ ಮಂತ್ರಿಯನ್ನು ಕಳಿಸಿದನು. ಈ ಸಂಗತಿ ಮೋಹನ ಕುಮಾರನಿಗೆ ತಿಳಿಯಿತು. ಆಗ ಅವನು ಸಂದರ್ಭ ಸಾಧಿಸಿ ತಿಲೋತ್ತಮೆಯನ್ನು ಕಂಡು "ರಾಜಪುತ್ರಿಯೇ, ಬಾಲ್ಯದಿಂದಲೂ ನನಗೆ ನಿನ್ನ ಮೇಲೆಯೇ ಪ್ರೇಮವಿದೆ. ನಿನ್ನನ್ನೇ ನಾನು ವರಿಸಲು ನಿರ್ಧರಿಸಿದ್ದೇನೆ. ನನ್ನ ಮಾತಾಪಿತರ ಆಶೆಯೂ ಆಗಿದ್ದಿತು. ನಿನ್ನ ತಂದೆಯು ಅದಕ್ಕೆ ಅನುಕೂಲನಾಗಿಯೇ ಇದ್ದ. ನನ್ನ ಮಾತಿಗೆ ವಚನವನ್ನು ಕೊಟ್ಟಿದ್ದ. ಆದರೆ ಈಗ ಅವನ ಮನಸ್ಸು ಬದಲಾದಂತೆ ತೋರುತ್ತದೆ." ಎಂದು ಹೇಳಿದನು. ಅದನ್ನು ಕೇಳಿ ಆ ತಿಲೋತ್ತಮೆಯು "ರಾಜಪುತ್ರ, ನಾನು ಕನಸು ಮನಸಿನಲ್ಲಿಯೂ ಕೂಡಾ ನಿನ್ನನ್ನು ಹೊರತು ಅನ್ಯರನ್ನು ವರಿಸುವವಳಲ್ಲ. ನನ್ನ ಮನಸ್ಸಿನ ವಿರುದ್ಧ ವರ್ತಿಸಿದರೆ ದೇಹತ್ಯಾಗ ಮಾಡುತ್ತೇನೆ" ಎಂದು ನುಡಿದಳು.'' ಆಗ ಆ ಮೋಹನನು "ಪ್ರಾಣೇಶ್ವರೀ, ನೀನು ಪರಪುರುಷನನ್ನು ಮದುವೆಯಾದರೂ ನನಗೆ ದುಃಖ, ಪ್ರಾಣತ್ಯಾಗ ಮಾಡಿದರೂ ನನಗೇ ದುಃಖ, ಆದುದರಿಂದ ಈ ಗೊಂದಲವೇ ಬೇಡ. ನಾನು ಸನ್ಯಾಸಿಯಾಗಿ ಹೋಗುತ್ತೇನೆ.'' ಎಂದನು. ಆಗ ತಿಲೋತ್ತಮೆಯು ಅವನನ್ನು ಮೃದು ಮಧುರ ಮಾತುಗಳಿಂದ ಸಂತೈಸಿದಳು ಮತ್ತು ತಾಯಿಯಿದ್ದಲ್ಲಿ ಬಂದು ಎಲ್ಲ ಸಮಾಚಾರವನ್ನು ಅರುಹಿದಳು. ತಾಯಿಯು ಅವಳ ತಂದೆಗೂ ತಿಳಿಸಿದಳು. ಆದರೆ ರಾಜನು ಸಹಾನುಭೂತಿ ತೋರಿಸದೆ, ಮೋಹನಕುಮಾರನ ಮೇಲೆ ಕೋಪದಿಂದ ಕುದಿದನು. ಅವನನ್ನು ತನ್ನ ಅರಮನೆಯಿಂದ ಎಳೆದು ರಾಜ್ಯದಿಂದ ಹೊರಗೆ ಹಾಕಬೇಕೆಂದು ಆಜ್ಞಾಪಿಸಿದನು.

ತಿಲೋತ್ತಮೆಯು ಎದೆಗುಂದದೆ ತನ್ನ ವಿಶ್ವಾಸಕ್ಕೆ ಪಾತ್ರಳಾದ ದಾಸಿಯೊಬ್ಬಳನ್ನು ಕರೆದು ಮೋಹನ ಕುಮಾರನಿಗೊಂದು ಶುಭಸಂದೇಶವನ್ನು ಕಳಿಸಿದಳು. ಮಧ್ಯರಾತ್ರಿ ಕಾಲದಲ್ಲಿ ನಾನು ಗುಡಿಗೆ ಬರುತ್ತೇನೆ. ಅಲ್ಲಿಗೆ ವೇಗವಾಗಿ ಓಡುವ ಎರಡು ಉತ್ತಮ ಅಶ್ವಗಳನ್ನು ತೆಗೆದುಕೊಂಡು ಬಾ. ಇಬ್ಬರೂ ಈ ರಾಜ್ಯ ತೊರೆದು ಹೋಗೋಣ" ಎಂದ ದೂತಿಯ ಮೂಲಕ ತನ್ನ ಯೋಜನೆಯನ್ನು ಸೂಚಿಸಿದಳು. ಅದರಂತೆ ತಿಲೋತ್ತಮೆಯು ಅಂದವಾದ ವಸ್ತ್ರಾಭರಣಗಳನ್ನು ಧರಿಸಿ ರಾತ್ರಿ ಆ ಗುಡಿಗೆ ತೆರಳಿದಳು. ಮೋಹ

ನನೂ ಸಿದ್ಧನಾಗಿದ್ದ. ಇಬ್ಬರೂ ಅಶ್ವಗಳನ್ನೇರಿ ಪ್ರಯಾಣ ಮಾಡಿದರು. ಬೆಳಗಾಗುವಾಗ ಅವರು ಒಂದು ಬಂದರ ಮುಟ್ಟಿದರು. ಅಲ್ಲಿ ಒಂದು ಹಡಗವು ಪ್ರಯಾಣಕ್ಕೆ ಸಿದ್ಧವಾಗಿತ್ತು. ಅವರಿರ್ವರೂ ಹಡಗದಲ್ಲಿ ತೆರಳಲು ನಿರ್ಧರಿಸಿದರು. ರಾಜಪುತ್ರಿಯು ಹಡಗವನ್ನೇರಿದಳು. ರಾಜಪುತ್ರನು ತನ್ನ ಬಳಿಯಲ್ಲಿದ್ದ ಕುದುರೆಗಳನ್ನು ಮಾರಾಟ ಮಾಡಿ ಬರಲು ಬಂದರಕ್ಕೆ ಸಮೀಪವಿದ್ದ ನಗರಕ್ಕೆ ತೆರಳಿದನು. ಆದರೆ ಅವನಿಲ್ಲದ ವೇಳೆ ಹಡಗಿನ ಅಧಿಕಾರಿಯ ದೃಷ್ಟಿ ತಿಲೋತ್ತಮೆಯ ಮೇಲೆ ಬಿದ್ದಿತು. ಅವಳ ರೂಪ ಸೌಂದರ್ಯವನ್ನು ಕಂಡು ಮೋಹಿತನಾದನು. ಹೇಗಾದರೂ ಮಾಡಿ ಅವಳನ್ನು ವಶಪಡಿಸಿಕೊಳ್ಳಬೇಕೆಂದು ಅವನ ಆಶೆ. ಆದುದರಿಂದ ಮೋಹನ ಕುಮಾರನು ಕುದುರೆಗಳನ್ನು ವಿಕ್ರಯಿಸಿ ಬರುವ ಮೊದಲೇ ಹಡಗವನ್ನು ಬಿಟ್ಟು ಬಿಟ್ಟನು. ಮತ್ತು ಕೆಲವು ಮೈಲುಗಳ ವರೆಗೆ ಹಡಗವು ಚಲಿಸಿದ ಮೇಲೆ ತಿಲೋತ್ತಮೆಯನ್ನು ಸಂದರ್ಶಿಸಿ ತನ್ನನ್ನು ಸುಖಪಡಿಸಬೇಕೆಂದೂ ಇಲ್ಲದಿದ್ದರೆ ಬಲಾತ್ಕಾರದಿಂದಲಾದರೂ ತನ್ನ ಆಶೆಯನ್ನು ಈಡೇರಿಸಿಕೊಳ್ಳುವುದಾಗಿಯೂ ತಿಳಿಸಿದನು. ತಿಲೋತ್ತಮೆ ಧೈರ್ಯವನ್ನು ಕಳೆದುಕೊಳ್ಳಲಿಲ್ಲ. ಉಪಾಯದಿಂದಲೇ ಈ ಮರುಳನಿಗೆ ತಕ್ಕ ಮದ್ದನ್ನು ಅರಿಯಬೇಕೆಂದು ಯೋಚಿಸಿ "ಸ್ವಾಮೀ, ನನಗೂ ನನ್ನ ಪತಿಯ ಮೇಲೆ ಇಷ್ಟವಿಲ್ಲ. ನೀವು ನನಗೆ ದೊರೆತುದುದು ನನ್ನ ಭಾಗ್ಯವೇ ಸರಿ. ನಿಮ್ಮನ್ನು ಮದುವೆಯಾಗಲು ನಾನು ಒಪ್ಪುತ್ತೇನೆ ಹಾಗಿದ್ದರೆ ನಿಮಗೆ ನಿಜವಾಗಿಯೂ ಆನಂದವಾದೀತು. ಮದುವೆಯಾಗದೇ ದೇಹಸುಖಕ್ಕೆಳಸಿದರೆ ಒಪ್ಪುವವಳಲ್ಲ. ಈ ಸಮುದ್ರಕ್ಕೆ ಹಾರಿ ಪ್ರಾಣ ತೊರೆಯುತ್ತೇನೆ" ಎಂದಳು. ಆಗ ಆ ಹಡಗದ ಅಧಿಕಾರಿಯು ಮದುವೆಯಾಗಲು ಒಪ್ಪಿಕೊಂಡನು. ಹಡಗವು ಬಂದರಕ್ಕೆ ಬಂದಮೇಲೆ ಅವನು ಮದುವೆಗಾಗಿ ವಸ್ತ್ರಾಭರಣಗಳನ್ನು ತರಲು ಆಜೇ ಬಂದರದ ಸಮೀಪವಿದ್ದ ನಗರಕ್ಕೆ ಹೋದನು.

ಅಧಿಕಾರಿಯು ಹೊರಟು ಹೋದ ಮೇಲೆ ತಿಲೋತ್ತಮೆಯು ಹಡಗದ ಇನ್ನಿತರ ಅಧಿಕಾರಿಗಳನ್ನು ನಾವಿಕರನ್ನು ಕಂಡು ನಡೆದ ಸಂಗತಿಗಳನ್ನೆಲ್ಲ ತಿಳಿಸಿದಳು. ಹಡಗವನ್ನು ನಡೆಸಿ ರಕ್ಷಿಸಿದ್ದೇ ಆದರೆ ತನ್ನ ಪತಿ ಹಾಗೂ ತಂದೆ ಇಬ್ಬರಿಂದಲೂ ಅಮಿತ ದ್ರವ್ಯವನ್ನು ಕೊಡಿಸುವುದಾಗಿ ಆಶೆ ತೋರಿ

ಸಿದಳು. ಆಗ ಅವರೆಲ್ಲರೂ ಒಪ್ಪಿ ಕೂಡಲೇ ಹಡಗವನ್ನು ನಡೆಸಿದರು. ಹಡಗು ಮುಂದೆ ಪ್ರಯಾಣ ಬೆಳೆಸಿತು. ಅನೇಕ ದಿನಗಳ ತರುವಾಯ ಅದು ಮತ್ತೊಂದು ಬಂದರ ಸೇರಿತು. ಅಲ್ಲಿ ತಲುಪಿದ ಕೂಡಲೇ ಸೈನಿಕರು ಹಡಗದ ಮೇಲೇರಿ ಬಂದು ಶೋಧಮಾಡಿದರು. ಆಗ ತಿಲೋತ್ತಮೆಯನ್ನು ಅವರು ಕಂಡರು. ಅವಳ ಅಮಿತ ರೂಪಲಾವಣ್ಯವನ್ನು ಕಂಡು ಅವರು ಬೆರಗಾದರು ಮತ್ತು ಕೂಡಲೇ ಆ ಸುದ್ದಿಯನ್ನು ರಾಜನಿಗೂ ತಿಳಿಸಿದರು. ಆಗ ಆ ರಾಜನು ಮಂತ್ರಿಯನ್ನು ಕಳಿಸಿ ಅವಳನ್ನು ಅರಮನೆಗೆ ಆಮಂತ್ರಿಸಿದನು. ರಾಜನ ಆಜ್ಞೆಯನ್ನು ಮೀರಿದ್ದೇ ಆದರೆ ಬಲಪ್ರಯೋಗದಿಂದ ಅವಳನ್ನು ಹಡಗದಿಂದ ಇಳಿಸಿ ಒಯ್ಯುವುದಾಗಿ ತಿಳಿಸಿದನು. ಈ ಹೊಸ ವಿಪತ್ತನ್ನು ಕಂಡು ತಿಲೋತ್ತಮೆ ಚಕಿತಳಾದಳು. ಆದರೆ ಧೈರ್ಯವನ್ನು ಬಿಡಲಿಲ್ಲ. ಉಪಾಯದಿಂದಲೇ ಈ ಗಂಡಾಂತರವನ್ನು ಪರಿಹರಿಸಬೇಕೆಂದು ಅವಳು ನಿರ್ಧರಿಸಿದಳು. ತಾನು ಸ್ವಯಂಪ್ರೇರಣೆಯಿಂದ ಬಂದು ರಾಜನನ್ನು ವರಿಸುವೆನೆಂದೂ ತನ್ನನ್ನು ಕರೆದೊಯ್ಯಲು ಅರಮನೆಯ ನಾರಿಯರನ್ನು ಕಳಿಸಬೇಕೆಂದೂ ಹೇಳಿಕಳಿಸಿದಳು. ರಾಜನು ಅದಕ್ಕೆ ಒಪ್ಪಿ ಅನೇಕ ಸುಂದರಿಯರಾದ ನಾರಿಯರನ್ನು ಕಳಿಸಿದನು. ಅವರು ಹಡಗಕ್ಕೆ ಬಂದ ಮೇಲೆ ತಿಲೋತ್ತಮೆ ಯೋಗ್ಯರೀತಿಯಿಂದ ಅವರೆಲ್ಲರನ್ನೂ ಸತ್ಕರಿಸಿದಳು. ಮೃದು ಮಧುರವಾದ ಮಾತುಗಳಿಂದ ಅವರೆಲ್ಲರನ್ನೂ ಒಲಿಸಿಕೊಂಡಳು. ಅಂದು ಮುಹೂರ್ತವು ಚೆನ್ನಾಗಿಲ್ಲದಿದ್ದುದರಿಂದ ಮರುದಿನ ಹೊರಟು ಬರುವುದಾಗಿ ದೂತರ ಮೂಲಕ ತಿಳಿಸಿದಳು. ರಾಜನು ಪರಮ ಸಂತೋಷದಿಂದ ಒಪ್ಪಿಕೊಂಡನು.

ಅದೇ ದಿನ ರಾತ್ರಿ ಭೋಜನಕ್ಕೆ ತಿಲೋತ್ತಮೆಯು ಉತ್ತಮ ಆಹಾರವನ್ನು ಸಿದ್ಧಪಡಿಸಿದಳು. ನಾವಿಕರ ಸಹಾಯದಿಂದ ಮಾದಕ ಪದಾರ್ಥಗಳನ್ನು ಮಿಶ್ರ ಮಾಡಿದಳು. ಆದುದರಿಂದ ಊಟಮಾಡಿದ ಕೂಡಲೇ ಆ ಅರಮನೆಯ ನಾರಿಯರೂ ಸೈನಿಕರೂ ನಿದ್ರಾಪರವಶರಾದರು. ಅವರೆಲ್ಲರನ್ನು ನಾವಿಕರು ಒಂದೆರಡು ಕೋಣೆಗಳಿಗೆ ನೂಕಿ ಬೀಗ ಹಾಕಿದರು. ಮತ್ತು ಅಂದೇ ಮಧ್ಯರಾತ್ರಿ ಹಡಗವು ಸದ್ದಿಲ್ಲದೆ ಆ ಬಂದರದಿಂದ ಪ್ರಯಾಣ ಬೆಳೆಸಿತು. ಬೆಳಗಿನ ಜಾವಕ್ಕೆ ಆ ನಾರಿಯರೂ ಸೈನಿಕರೂ ಎಚ್ಚತ್ತರು. ಆಗ

ತಿಲೋತ್ತಮೆಯು ಅವರನ್ನು ಕಂಡು ಅವರ ಜೀವಕ್ಕೂ ಮಾನಕ್ಕೂ ಯಾವ ಧಕ್ಕೆಯೂ ಇಲ್ಲವೆಂದು ಹೇಳಿ ಭರವಸೆ ಕೊಟ್ಟಳು. ತನ್ನ ಕಥೆಯನ್ನೆಲ್ಲ ಅವರಿಗೆ ವಿವರಿಸಿ, ಅವರೆಲ್ಲರನ್ನೂ ಅವರವರ ಊರುಗಳಿಗೆ ಸುರಕ್ಷಿತವಾಗಿ ಕಳಿಸುವೆನೆಂದಳು. ಆಗ ಆ ಸೈನಿಕರೂ ನಾರಿಯರೂ ತಿಲೋತ್ತಮೆಯು ಹೇಳಿದಂತೆ ಕೇಳುವುದಾಗಿ ಪ್ರತಿಜ್ಞೆ ಮಾಡಿದರು.

ಹಡಗವು ಮುಂದೆ ಪ್ರಯಾಣ ಮಾಡಿತು. ಅನೇಕ ದಿನಗಳ ಮೇಲೆ ಹಡಗದಲ್ಲಿ ಸಿಹಿ ನೀರಿನ ಕೊರತೆ ಉಂಟಾಯಿತು. ಆಗ ಹತ್ತಿರವಿದ್ದ ಒಂದು ಕರಾವಳಿಗೆ ಹಡಗವನ್ನು ತಲುಪಿಸಿದರು. ಅಲ್ಲಿ ಸಿಹಿ ನೀರನ್ನು ತುಂಬಲೆತ್ನಿಸಿದಾಗ ಕಳ್ಳರು ಹಡಗದ ಮೇಲೇರಿ ಬಂದರು. ಹಡಗದಲ್ಲಿ ಸುಂದರಿಯರಾದ ನಾರಿಯರನ್ನು ಕಂಡ ಕೂಡಲೇ ಕಳ್ಳರು ವಸ್ತ್ರಾಭರಣ ಮೊದಲಾದವುಗಳನ್ನು ದೋಚಿಕೊಂಡು ಹೋಗುವುದನ್ನು ಬಿಟ್ಟು ಅವರನ್ನೇ ಎಳೆದೊಯ್ಯಲು ಯತ್ನಿಸಿದರು. ಆಗ ತಿಲೋತ್ತಮೆಯು ಆ ಕಳ್ಳರ ನಾಯಕನನ್ನು ಕಂಡು "ನಮ್ಮನ್ನು ಈ ರೀತಿ ಬಲಾತ್ಕರಿಸಿದರೆ ಪ್ರಯೋಜನವಿಲ್ಲ. ನಾವು ಪ್ರೀತಿಯಿಂದಲೇ ನಿಮ್ಮೊಡನೆ ಕೂಡಿಕೊಳ್ಳುತ್ತೇವೆ. ನಿಮ್ಮೆಲ್ಲರ ಸೇವೆ ಮಾಡಲು ನಾವು ಸಿದ್ಧರು. ಬಲಾತ್ಕಾರ ಮಾಡಬೇಡಿರಿ. ಇಂದು ರಾತ್ರಿ ಹಡಗದಲ್ಲೇ ನಮ್ಮ ಅತಿಥಿಗಳಾಗಿ ಇರಿ" ಎಂದಳು. ಆ ಕಳ್ಳರ ನಾಯಕನು ಒಪ್ಪಿದನು. ಅವರಿಗಾಗಿ ಹಡಗದಲ್ಲಿ ದಿವ್ಯವಾದ ಭೋಜನವು ಸಿದ್ಧವಾಯಿತು. ಒಬ್ಬೊಬ್ಬಳು ಸ್ತ್ರೀ ಒಬ್ಬೊಬ್ಬ ಕಳ್ಳನಿಗೆ ಉಣಬಡಿಸಿದಳು. ಮೃದು ಮಾತುಗಳಿಂದಲೂ ಓರೆ ನೋಟಗಳಿಂದಲೂ, ಅಂಗಸ್ಪರ್ಶಗಳಿಂದಲೂ ಆ ಕಳ್ಳರನ್ನು ಮರುಳು ಮಾಡಿದರು. ಆ ಮೇಲೆ ಪ್ರತಿಯೊಬ್ಬಳೂ ಆ ಕಳ್ಳರಿಗೆ ಮಾದಕ ವಸ್ತುಗಳನ್ನು ಸೇರಿಸಿದ ಮದ್ಯವನ್ನು ಕುಡಿಯಲು ಕೊಟ್ಟಳು. ಅದನ್ನು ಕುಡಿದ ಕೂಡಲೇ ಆ ಕಳ್ಳರು ಮೂರ್ಛೆ ಹೋದರು ಆಗ ಆ ನಾವಿಕರುಬಂದು ಒಬ್ಬೊಬ್ಬರನ್ನೇ ತಿವಿದು ಸಮುದ್ರಕ್ಕೆ ಎಸೆದರು. ಹಡಗವು ಕೂಡಲೇ ಮುಂದಕ್ಕೆ ಪ್ರಯಾಣ ಬೆಳೆಸಿತು.

ಹಡಗದಲ್ಲಿರುವ ನಾರಿಯರು ಇದೇ ರೀತಿ ಇದ್ದರೆ, ಸೇರುವ ಬಂದರಗಳನ್ನೆಲ್ಲ ವಿಪತ್ತು ನಿಶ್ಚಯವೆಂದು ತಿಲೋತ್ತಮೆ ಅರಿತಳು. ಆದುದರಿಂದ

ಅವಳು ಎಲ್ಲರನ್ನೂ ಕರೆದು ಪುರುಷ ವೇಷಧಾರಣ ಮಾಡುವುದೇ ಪರಮೋ ಚಿತವೆಂದು ಸೂಚಿಸಿದಳು. ಅದಕ್ಕೆ ಅವರೆಲ್ಲರೂ ಸಮ್ಮತಿಸಿದರು. ತಿಲೋತ್ತಮೆ ತಾನು ಕೂಡಾ ಪುರುಷವೇಷ ಧರಿಸಿದಳು. ಹೀಗೆ ಕೆಲವು ಕಾಲ ಕಳೆದ ಮೇಲೆ ಅವರೆಲ್ಲರೂ ಒಂದು ಬಂದರದಲ್ಲಿ ಇಳಿದರು. ತಿಲೋತ್ತಮೆಯು ತನ್ನ ಸಂಗಾತಿಗಳನ್ನು ಆ ನಗರಕ್ಕೆ ಕರೆದೊಯ್ದಳು. ಅವರ ರೂಪಲಾವಣ್ಯವನ್ನು ಕಂಡು ಎಲ್ಲ ನಾಗರಿಕರೂ ಬೆರಗಾಗಿ ನೋಡುತಿದ್ದರು. ಆ ನಗರದಲ್ಲಿ ಮತ್ತೊಂದು ಮಹಾ ಸಂಭ್ರಮದ ಕಾರ್ಯ ನಡೆಯುತಿತ್ತು. ರಾಜನು ಮರಣ ಹೊಂದಿದ್ದ. ಅವನಿಗೆ ಪುತ್ರ ಸಂತಾನವಿರಲಿಲ್ಲ. ಆದುದರಿಂದ ಆ ರಾಜ್ಯದ ಪದ್ಧತಿಯಂತೆ ಅರಮನೆಯ ಆನೆಯ ಕೈಯಲ್ಲಿ ಹೂವಿನ ಹಾರವನ್ನು ಕೊಟ್ಟು ನಗರದಲ್ಲಿ ಮೆರವಣಿಗೆಯಿಂದ ಕರೆದುಕೊಂಡು ಬರುತಿದ್ದರು. ಆ ಆನೆಯು ಯಾರ ಕೊರಳಿಗೆ ಹೂಮಾಲೆಯನ್ನು ತೊಡಿಸುತ್ತದೆಯೋ ಅವ ನನ್ನು ರಾಜನನ್ನಾಗಿ ಅಂಗೀಕರಿಸುವುದು ರೂಢಿ. ಅಂದು ಆ ಆನೆಯು ಪುರುಷವೇಶದಲ್ಲಿದ್ದ ತಿಲೋತ್ತಮೆಯ ಕೊರಳಿಗೆ ಹೂವಿನ ಹಾರಹಾಕಿತು. ಕೂಡಲೇ ಮಂತ್ರಿಗಳೂ, ಸೈನಿಕರೂ ಬಂದು ತಿಲೋತ್ತಮೆಯನ್ನು ಮೆರವಣಿ ಗೆಯಿಂದ ಅರಮನೆಗೆ ಕರೆದೊಯ್ದರು. ತಿಲೋತ್ತಮೆಯು ಪುರುಷವೇಷದಲ್ಲಿ ಇದ್ದು ಆ ರಾಜ್ಯದ ಆಡಳಿತೆ ನಡೆಸತೊಡಗಿದಳು. ಮತ್ತು ತನ್ನ ರಹಸ್ಯವನ್ನೆಲ್ಲ ರಾಜಪುತ್ರಿಗೆ ತಿಳಿಸಿದಳು. ತಿಲೋತ್ತಮೆಯ ಪತಿಯನ್ನು ಹುಡುಕಲು ಅವ ರೀರ್ವರೂ ಕೂಡಿ ಆಲೋಚನೆ ನಡೆಸಿದರು. ಆ ಮೇಲೆ ತಿಲೋತ್ತಮೆಯ ಭಾವ ಚಿತ್ರವನ್ನು ತೆಗೆಸಿ ರಾಜ್ಯದಲ್ಲೆಲ್ಲ ಅದನ್ನು ಗುಡಿಗೋಪುರ ಧರ್ಮ ಛತ್ರ ಗಳ ದ್ವಾರಗಳಿಗ ಅಂಟಿಸಿದರು. ಪ್ರತಿಯೊಂದು ಚಿತ್ರವನ್ನು ಕಾಯಲು ಒಬ್ಬ ಸೈನಿಕನನ್ನು ಇರಿಸಿದರು. ಯಾರಾದರೂ ಆ ಭಾವಚಿತ್ರವನ್ನು ಕಂಡು ಉದ್ಗಾರ ತೆಗೆದರೆ, ದುಃಖಿಸಿದರೆ, ಅವನನ್ನು ರಾಜಸ್ಥಾನಕ್ಕೆ ಕರೆದುಕೊಂಡು ಬರಬೇಕೆಂದೂ ರಾಜಾಜ್ಞೆಯಾಗಿತ್ತು.

ತಿಲೋತ್ತಮೆಯ ಪ್ರಿಯತಮನಾದ ಮೋಹನಕುಮಾರನು ಅಶ್ವಗ ಳನ್ನು ಮಾರಾಟ ಮಾಡಿ ಬಂದ ಹಣದಿಂದ ಪುನಃ ಬಂದರಕ್ಕೆ ಮರಳಿದಾಗ ಆ ಹಡಗವು ಅಲ್ಲಿರಲಿಲ್ಲ. ಇದರಿಂದ ಅವನು ಬಹಳ ದುಃಖಿತನಾದನು. ತಿಲೋತ್ತಮೆಯನ್ನು ಕಳೆದುಕೊಂಡುದುದರಿಂದ ಭ್ರಾಂತನಾದನು. ಅನ್ನ

ನೀರುಗಳನ್ನು ತೊರೆದು ಅವಳ ಹಂಬಲದಿಂದಲೇ ಸನ್ಯಾಸಿಯಾಗಿ ಊರೂರು ಅಲೆಯತೊಡಗಿದನು. ಹೀಗೆ ಸಂಚರಿಸುತ್ತ ಅವನು ಕಾಲಕ್ರಮೇಣ ತಿಲೋತ್ತಮೆಯು ರಾಜ್ಯ ಭಾರ ಮಾಡುತಿದ್ದ ಪಟ್ಟಣಕ್ಕೆ ಬಂದನು. ಅಲ್ಲಿ ಧರ್ಮ ಛತ್ರಕ್ಕೆ ಬಂದ ಕೂಡಲೇ ತಿಲೋತ್ತಮೆಯ ಆಕೃತಿಯನ್ನೇ ಹೋಲುವ ಭಾವ ಚಿತ್ರವನ್ನು ನೋಡಿ ತುಂಬಾ ದುಃಖಿಸಿದನು. ಆಗ ಅಲ್ಲಿದ್ದ ಕಾವಲು ಗಾರನು ಅವನನ್ನು ರಾಜಸ್ಥಾನಕ್ಕೆ ಕರೆದುಕೊಂಡು ಬಂದನು. ಮೋಹನ ಕುಮಾರನನ್ನು ಕಂಡ ಕೂಡಲೇ ತಿಲೋತ್ತಮೆಯು ಗುರುತಿಸಿದಳು. ಅದರೆ ಪರಿಚಯವನ್ನು ಹೇಳದೆ ಮೋಹನ ಕುಮಾರನಿಗೆ ದಿವ್ಯವಾದ ವಸ್ತ್ರಾಭರಣ ಗಳನ್ನು ಕೊಟ್ಟು ಮರುದಿನ ರಾಜಸಭೆಗೆ ಬರಬೇಕೆಂದು ಹೇಳಿ ಕಳಿಸಿದಳು.

ರಾಜಸಭೆಯು ಕೂಡಿದಾಗ ತಿಲೋತ್ತಮೆಯು ಪುರುಷ ವೇಷವನ್ನು ತ್ಯಜಿಸಿ ಬಂದು ತನ್ನ ಕಥೆಯನ್ನೆಲ್ಲ ಸೇರಿದ ಮಂತ್ರಿ ಹಾಗೂ ಸೇನಾಪತಿಗಳ ಸಭೆಯಲ್ಲಿ ಅರುಹಿದಳು. ಅವಳ ಸಾಹಸ, ಧೈರ್ಯ, ಪ್ರಸಂಗಾವಧಾನ ವೊದ ಲಾದವುಗಳನ್ನು ಕಂಡು ಅವರೆಲ್ಲ ಆಶ್ಚರ್ಯ ಚಕಿತರಾದರು. ಮೋಹನ ಕುಮಾ ರನಿಗೆ ರಾಜಪಟ್ಟ ಕಟ್ಟುವ ಅವಳ ಸೂಚನೆಯನ್ನು ಎಲ್ಲರೂ ಅಂಗೀಕರಿಸಿ ದರು. ವಿಜೃಂಭಣೆಯಿಂದ ಅವರ ವಿವಾಹ ಮಹೋತ್ಸವವೂ ನೆರವೇರಿತು. ಆ ಮೇಲೆ ತಿಲೋತ್ತಮೆಯು ತಾನು ಕರೆದು ತಂದಿದ್ದ ನಾರಿಯರನ್ನೆಲ್ಲ ಉಚಿತವಾದ ಸನ್ಮಾನಗಳಿಂದ ಅವರವರ ಊರಿಗೆ ಮುಟ್ಟಿಸಿದಳು. ತಿಲೋತ್ತ ಮೆಯ ಸಖಿಯಾದ ರಾಜಪುತ್ರಿಯು ಕೂಡಾ ಕೊನೆಗೆ ಮೋಹನ ಕುಮಾರ ನನ್ನೇ ವರಿಸಿದಳು.

ರಾಜಕುಮಾರ, ಪುರುಷರು ಸ್ತ್ರೀಯರ ಮೇಲೆ ಯಾವ ರೀತಿ ಬಲಾ ತ್ಕಾರ ಮಾಡಲೆತ್ನಿಸುತ್ತಾರೆಂಬುದಕ್ಕೆ ಇದೊಂದು ಉದಾಹರಣೆ ಸಾಲದೇ ? ಎಂದು ಪದ್ಮಾವತಿಯು ಹೇಳಿದಳು. ಆಗ ಪ್ರತಾಪಸೇನನು ಅದಕ್ಕೊಪ್ಪದೇ ಸ್ತ್ರೀಯರೇ ಕುಕರ್ಮಿಗಳೆಂದು ಹೇಳುತ್ತ ಅನೇಕ ಉದಾಹರಣೆಗಳನ್ನು ಕೊಟ್ಟನು. ಆ ಮೇಲೆ ಕಲಾವತಿಯು ಕೇಳಿದ ಪ್ರಶ್ನೆಗಳಿಗೆಲ್ಲ ಅವನು ಸಮ ರ್ಪಕ ಉತ್ತರ ಕೊಟ್ಟನು. ಅವಳು ಅವನನ್ನು ವಿವಾಹವಾದಳು. ಇದನ್ನೆಲ್ಲ ಮೋಹನದಾಸನು ಮೋಹಿನಿಗೆ ಹೇಳಿದರೂ ಅವಳ ಮನಸ್ಸು ಶಾಂತವಾಗ

ಲಿಲ್ಲ. ಆಗ ಅವನು ಸ್ತ್ರೀ ಜಾರತನದ ಬಗ್ಗೆ ಇನ್ನೊಂದು ಕಥೆಯನ್ನು ಹೇಳಿದನು.

## ೪೯ ಗುಮಾಸ್ತನ ಹೆಂಡತಿಯು ಕಥೆ

ಪ್ರಾಚೀನ ಕಾಲದಲ್ಲಿ ಮಗಧ ರಾಜ್ಯದಲ್ಲೊಬ್ಬ ಶ್ರೀಮಂತಸಾಚವರ್ತಕನಿದ್ದನು. ಅವನಲ್ಲಿ ಚಂದುಲಾಲನೆಂಬ ಗುಮಾಸ್ತನಿದ್ದನು. ಈ ಗುಮಾಸ್ತನ ಹೆಂಡತಿ ಬಹಳ ಚೆಲುವೆ. ಗಂಡನು ಮುಂಜಾನೆದ್ದು ಅಂಗಡಿಗೆ ತೆರಳುತ್ತಿದ್ದನು. ಆ ಮೇಲೆ ಮಧ್ಯಾಹ್ನ ಊಟಕ್ಕೆ ಬರುತಿದ್ದುದು ಮಧ್ಯೆ ರಾತ್ರಿಗೇ. ಚಂದುಲಾಲನ ಹೆಂಡತಿಗೆ ಮಕ್ಕಳೂ ಇಲ್ಲ. ಆದುದರಿಂದ ಮನೆಯಲ್ಲಿ ಅವಳಿಗೆ ಹೊತ್ತೂ ಹೋಗುತಿದ್ದಿಲ್ಲ. ಕಾಲಕ್ರಮೇಣ ಅವಳು ಆ ಮನೆ ಈ ಮನೆ ನೆರೆ ಮನೆ ಕೆರೆಮನೆಗಳಿಗೆ ತೆರಳಲಾರಂಭಿಸಿದಳು. ಅಲ್ಲಿ ಅವರಿವರ ಪರಿಚಯವಾಯಿತು. ಐದಾರು ತರುಣರು ಅವಳೊಡನೆ ಸ್ನೇಹ ಬೆಳೆಸಿದರು. ಚಂದುಲಾಲನು ಅಂಗಡಿಗೆ ತೆರಳಿದ ಕೂಡಲೇ ಅವರು ಸಮಯ ಸಾಧಿಸಿ ಮನೆಗೆ ಬರುತಿದ್ದರು. ಮತ್ತು ಅವಳೊಂದಿಗೆ ಸುಖ ಸಂತೋಷದಿಂದ ಕಾಲಕಳೆಯುತ್ತಿದ್ದರು. ಇದರಿಂದ ಅವಳ ಕಾಮವೂ ಬಹಳ ಶಾಂತಿ ಹೊಂದುತಿದ್ದಿತು. ಇದು ನೆರಮನೆಯವರಿಗೆಲ್ಲ ತಿಳಿದು ಬಂತು. ಅವರು ಗುಸು ಗುಸು ಮಾತನಾಡುತಿದ್ದರು. ಕೊನೆಗೆ ಅದು ಚಂದುಲಾಲನ ಕಿವಿಗೂ ಬಿದ್ದಿತು. ಮೊದಲು ಅವನು ಅದನ್ನು ನಂಬಲಿಲ್ಲ. ಆದರೆ ಕಾಲಕ್ರಮೇಣ ಅವನಿಗೂ ಸಂಶಯ ಹೆಚ್ಚಾಯಿತು. ಹೇಗಾದರೂ ಮಾಡಿ ಇದನ್ನು ಪರೀಕ್ಷಿಸಬೇಕೆಂದು ಅವನು ನಿಶ್ಚಯಿಸಿದನು.

ಒಂದು ದಿನ ಚಂದುಲಾಲನು ತನ್ನ ಹೆಂಡತಿಯನ್ನು ಕರೆದು ಇರ್ವರೂ ನೆಂಟರ ಮನೆಗೆ ಹೋಗೋಣ ಎಂದು ನುಡಿದನು. ಅವಳು ಒಪ್ಪಿ ಅದಕ್ಕೆ ತಕ್ಕ ಸಿದ್ಧತೆ ಮಾಡಿ ಹೊರಟಳು. ಚಂದುಲಾಲನು ಹೆಂಡತಿಯೊಂದಿಗೆ ನಗರದಿಂದ ಹೊರಟು ಬಂದ. ಆ ಮೇಲೆ ಹೆಂಡತಿಯನ್ನುದ್ದೇಶಿಸಿ, "ಪ್ರಿಯೇ, ನಾವಿಬ್ಬರೂ ಮನೆಗೆ ಬಾಗಿಲು ಹಾಕಿ ಬಂದಿದ್ದೇವೆ. ರಾತ್ರಿಯಾರಾದರೂ ಕಳ್ಳರು ಬಂದು ಹೊಕ್ಕರೆ ಇದ್ದ ವಸ್ತ್ರಾಭರಣಗಳೂ ಅವರ ಪಾಲಾಗುವುದು

ನಿಶ್ಚಯ. ಆದುದರಿಂದ ನೀನು ಮನೆಗೆ ಹೋಗು. ನಾನು ಎರಡು ದಿನ ಬಿಟ್ಟು ಬರುತ್ತೇನೆ” ಎಂದನು. ಅವಳು ಅದಕ್ಕೊಪ್ಪಿ ಮರಳಿದಳು. ಆದರೆ ಚಂದುಲಾಲನು ನೆಂಟರ ಮನೆಗೆ ಹೋಗದೆ ಒಳದಾರಿಯಿಂದ ಬಂದು ಯುಕ್ತಿಯಿಂದ ಮನೆಯೊಳಗೆ ತೆರಳಿ ಒಂದು ಕತ್ತಲಕೋಣೆಯಲ್ಲಿ ಅಡಗಿ ಕುಳಿತನು. ಅವನ ಹೆಂಡತಿ ಅಲ್ಲಿಂದ ನೆಟ್ಟಗೆ ತನ್ನ ಮನೆಗೆ ಬರಲಿಲ್ಲ. ತನ್ನ ಗೆಳೆಯರ ಮನೆಗೆ ತೆರಳಿದಳು. ಮತ್ತು ರಾತ್ರಿ ಗಂಡನಿಲ್ಲದಿದ್ದುದರಿಂದ ಇಂತಹ ಹೊತ್ತಿಗೆ ಬರಬೇಕೆಂದು ಎಲ್ಲರನ್ನು ಆಮಂತ್ರಿಸಿದಳು. ಮನೆಗೆ ಬಂದ ಮೇಲೆ ತನ್ನ ತರುಣ ಗೆಳೆಯರಿಗಾಗಿ ದಿವ್ಯವಾದ ಫಲಾಹಾರಗಳನ್ನು ತಯಾರಿಸಿದಳು. ಮತ್ತು ಮದ್ಯವನ್ನು ತೆಗೆದಿಟ್ಟಳು. ಇನ್ನೂ ಅವರು ಬಾರದೇ ಇದ್ದುದರಿಂದ ಬಾಗಿಲನ್ನು ಎಳೆದುಕೊಂಡು ಅವರನ್ನು ಕರೆಯಲು ಹೋದಳು. ಅಷ್ಟರಲ್ಲಿ ಚಂದುಲಾಲನು ಕತ್ತಲೆ ಕೋಣೆಯಿಂದ ಹೊರಗೆ ಬಂದು ಘೋರವಾದ ವಿಷವನ್ನು ಆ ಫಲಾಹಾರಕ್ಕೆ ಸೇರಿಸಿ ತಾನು ಮನೆಯಿಂದ ಹೊರ ಬಿದ್ದು ಹೋದನು.

ರಾತ್ರಿ ಆ ರಮಣಿ ತನ್ನ ಗೆಳೆಯರಿಗೆಲ್ಲ ಫಲಾಹಾರವನ್ನು ಕೊಟ್ಟಳು. ಅವರು ತಿಂದ ಕೂಡಲೇ “ಸಂಕಟ, ಸಂಕಟ” ಎಂದು ಕೂಗುತ್ತ ನೆಲದ ಮೇಲೆ ಹೊರಳಿ ಹೊರಳಿ ಪ್ರಾಣ ಬಿಟ್ಟರು. ಆ ಘೋರ ದೃಶ್ಯವನ್ನು ಕಂಡ ಚಂದುಲಾಲನ ಹೆಂಡತಿ ಗಾಬರಿಯಾದಳು. ಮಧ್ಯರಾತ್ರಿಯಾದ ಮೇಲೆ ಒಬ್ಬೊಬ್ಬರನ್ನೇ ಮೆಲ್ಲಗೆ ಎತ್ತಿಕೊಂಡು ಹೋಗಿ ಒಂದು ಬಾವಿಯಲ್ಲಿ ಚೆಲ್ಲಿ ಬಂದಳು. ಬೆಳಗಾದ ಕೂಡಲೇ ಚಂದುಲಾಲನು ಮನೆಗೆ ಬಂದನು. ಪ್ರಯಾಣದ ಆಯಾಸದಿಂದ ತುಂಬಾ ಬಳಲಿದವರಂತೆ ನಟಿಸಿದನು. ಅವಳು ಅವನನ್ನು ಸತ್ಕರಿಸಿ ಉಪಚರಿಸಿದಳು. ರಾತ್ರಿ ನಡೆದ ಸಂಗತಿಯೊಂದನ್ನೂ ಅವನಿಗೆ ತಿಳಿಸಲಿಲ್ಲ. ಅವನೂ ಕೇಳಲಿಲ್ಲ. ಅಂದಿನಿಂದ ಅವನ ಹೆಂಡತಿ ದುರಾಚಾರದ ಪಾಪಕರ್ಮವನ್ನು ಬಿಟ್ಟು ಪತಿಪರಾಯಣೆಯಾಗಿ ಬಾಳತೊಡಗಿದಳು. ಆ ಚಂದುಲಾಲನ ಹೆಂಡತಿಯಂತೆ ಪರಪುರುಷನ ಮೇಲೆ ಮೋಹ ಮಾಡಿದರೆ ಅನರ್ಥ ನಿಶ್ಚಯವೆಂದು ಮೋಹನದಾಸನು ಮೋಹಿನಿಗೆ ಬೋಧಿಸಿದನು. ಮೋಹನದಾಸನ ಈ ರೀತಿಯ ಪರಿಪರಿಯ ಬೋಧನೆಯಿಂದ ಮೋಹನಿಯು ಸನ್ಮಾರ್ಗ ಮನಃಪ್ರವೃತ್ತಿಯವಳಾದಳು. ಅವನ ಮೇಲೆ ತುಂಬಾ

ಭಯ ಭಕ್ತಿಯುಳ್ಳವಳಾದಳು.

ಆದರೆ ಮೋಹಿನಿಯು ಮಧ್ಯರಾತ್ರಿ ಮೋಹನದಾಸನ ಮನೆಗೆ ತೆರಳುತ್ತಿರುವುದು ಅವಳ ತಾಯಿಗೆ ತಿಳಿಯಲು ಅವಳು ಒಂದು ದಿನ ಕಾದು ಕುಳಿತು ಮೋಹಿನಿಯನ್ನು ಕೇಳಿದಳು. ಆಗ ಮೋಹಿನಿಯು ತಾಯಿಯ ಪಾದಕ್ಕೆ ನಮಸ್ಕರಿಸಿ, ತನ್ನ ಕಥೆಯನ್ನೆಲ್ಲ ಅವಳಿಗೆ ಹೇಳಿದಳು. ಕಾಮ ವಶಳಾಗಿದ್ದ ತನಗೆ ಸನ್ಮಾರ್ಗವನ್ನು ತೋರಿದ ಮೋಹನದಾಸನ ಉದದೇಶಪರ ಮಾತುಗಳನ್ನು ಹೇಳಿದಳು. ಅದನ್ನು ಕೇಳಿ ಆ ಕಥೆಗಳನ್ನು ಕೇಳಲು ತಾಯಿಯೂ ಆತುರ ಪಟ್ಟುದುದರಿಂದ ಮೋಹಿನಿಯು ತಾಯಿಗೂ ಅದನ್ನು ಸಾದ್ಯಾಂತವಾಗಿ ವಿವರಿಸಿದಳು. ಆ ಮೇಲೆ ಅವರ ಗೆಳತಿಯರೂ ಕೇಳಿ ತಿಳಿದುಕೊಂಡರು. ಹೀಗಾಗಿ ಸ್ತ್ರೀ ನೀತಿ ಚರಿತ್ರೆಯು ಅವರಿಂದ ಇವರಿಗೆ, ಲೋಕಾಭಿರಾಮವಾಗಿ ಪಸರಿಸಿತು.

